# ಹೊಸತು

ಡಿಸೆಂಬರ್ ೨೦೦೯

ಬೆಲೆ : ರೂ. ೧೨




ನೆಮ್ಮದಿಯ ನಾಳೆ ನಮ್ಮದು

ರಾಷ್ಟ್ರೀಯ ಗ್ರಾಮೀಣ ಆರೋಗ್ಯ ಅಭಿಯಾನ
राष्ट्रीय ग्रामीण स्वास्थ्य मिशन
(2005-2012)

# ಕುಟುಂಬ ಕಲ್ಯಾಣ ಕಾರ್ಯಕ್ರಮ

ಕರ್ನಾಟಕ ಸರ್ಕಾರ




ಕುಟುಂಬದ ನೆಮ್ಮದಿಗಾಗಿ, ದೇಶದ ಅಭಿವೃದ್ಧಿಗಾಗಿ ಜನಸಂಖ್ಯೆಯ ಸ್ಥಿರತೆಯನ್ನು ಕಾಯ್ದುಕೊಳ್ಳಲು ಸಣ್ಣ ಕುಟುಂಬವನ್ನು ಹೊಂದಿರಿ.

ಅನುಸರಿಸಬೇಕಾದ ವಿಧಾನಗಳು :

**ತಾತ್ಕಾಲಿಕ ಗರ್ಭನಿರೋಧಕ ವಿಧಾನಗಳು**

- ಪುರುಷರಿಗೆ - ನಿರೋಧ್
- ಮಹಿಳೆಯರಿಗೆ : (1) ನಯೆಶಗಯೆವ ಗಯೆಳಿಗಲ
  (2) ಕಾಪರ್-ಟಿ 380 A

**ಶಾಶ್ವತ ಕುಟುಂಬ ಕಲ್ಯಾಣ ವಿಧಾನಗಳು**

- ಪುರುಷರಿಗೆ : (1) ನೋಸ್ಕಾಲ್‌ಪೆಲ್ ವ್ಯಾಸೆಕ್ಟಮಿ (NSV)
- ಮಹಿಳೆಯರಿಗೆ : (1) ಟ್ಯುಬೆಕ್ಟಮಿ ಶಸ್ತ್ರಚಿಕಿತ್ಸೆ
  (2) ಉದರದರ್ಶಕ ಶಸ್ತ್ರಚಿಕಿತ್ಸೆ

ಪುರುಷರಿಗೆ ನೋಸ್ಕಾಲ್‌ಪೆಲ್ ವ್ಯಾಸೆಕ್ಟಮಿ ಎಂಬ ಹೊಸ ವಿಧಾನ ಬಂದಿದೆ. ಈ ವಿಧಾನದಲ್ಲಿ ಮಾಮೂಲಿನ ಗಾಯ ಇಲ್ಲ, ಹೊಲಿಗೆ ಹಾಕುವ ಪ್ರಮೇಯ ಇಲ್ಲ. ಈ ಶಸ್ತ್ರಚಿಕಿತ್ಸೆಯ ನಂತರ ನಡೆದು ಮನೆಗೆ ಹೋಗಬಹುದು ಹಾಗೂ ದಿನನಿತ್ಯದ ಕೆಲಸಗಳನ್ನು ಮಾಮೂಲಿನಂತೆ ಮಾಡಬಹುದು.

(ಹೆಚ್ಚಿನ ವಿವರಗಳಿಗೆ ಹತ್ತಿರದ ಆರೋಗ್ಯ ಕೇಂದ್ರವನ್ನು ಸಂಪರ್ಕಿಸಿ)

**ಹೆಣ್ಣಾಗಲಿ ಗಂಡಾಗಲಿ ಮಗು ಒಂದೇ ಇರಲಿ**

ಪ್ರಕಟಣೆ : **ಯೋಜನಾ ನಿರ್ದೇಶಕರು (ಆರ್. ಸಿ. ಹೆಚ್.)**
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ, ಆನಂದರಾವ್ ವೃತ್ತ, ಬೆಂಗಳೂರು

# ಹೊಸತು

ನೆಮ್ಮದಿಯ ನಾಳೆ ನಮ್ಮದು

## ಒಳಗೇನಿದೆ ...



ಚಿತ್ರಗಳು : ಕಮಲಂ ಅರಸು, ಶ್ರೀಹರಿ, ಹುಸೇನಿ, ಆಚಾರ್ಯ, ಬಿ. ವಿಲ್ಸನ್, ರಾಂಚಂದ್ರ ಕೊಪ್ಪಲು

ಮುಖಚಿತ್ರ : ಕೆ. ಪಿ. ಸ್ವಾಮಿ

ವಿನ್ಯಾಸ : ನವಕರ್ನಾಟಕ ವಿನ್ಯಾಸ

ಕಚೇರಿ ಸಹಕಾರ : ಜಿ. ವಿ. ತೇಜೋವತಿ

## ಈ ತಿಂಗಳು

(ಅ)ನ್ಯಾಯಮೂರ್ತಿ ದಿನಕರನ್ ಪ್ರಕರಣ ಅನೇಕ ತಿರುವುಗಳನ್ನು ಪಡೆಯುತ್ತಿದೆಯೇ ವಿನಾ ಬಗೆಹರಿಯುತ್ತಿಲ್ಲ. ದಿನಕರನ್ ಸ್ವಪ್ರೇರಣೆಯಿಂದ ರಾಜಿನಾಮೆ ನೀಡುವುದಿಲ್ಲವೆಂಬುದು ಈಗ ಸ್ಥಿರವಾಗಿದೆ. ಹಾಗೆ ನೀಡಿದರೆ ತಮ್ಮ ಮೇಲಿನ ಆರೋಪಗಳಲ್ಲಿ ಹುರುಳಿದೆಯೆಂಬ ಭಾವನೆ ಸಾರ್ವಜನಿಕರಲ್ಲಿ ಮೂಡುತ್ತದೆ. ಸಹಜವಾಗಿಯೇ ಅದು ಅವರಿಗೆ ಸಮ್ಮತವಲ್ಲ. ಸರ್ವೋಚ್ಚ ನ್ಯಾಯಾಲಯದ ಬಿಗಿಪಟ್ಟು ಹೇಗಿದೆಯೆಂದರೆ ಎಂತಾದರೂ ಸರಿ, ದಿನಕರನ್ ಬಗೆಗೆ ಒಂದು ಸ್ವಚ್ಛ ವರದಿ ತರಿಸಿಕೊಂಡುಬಿಡಬೇಕು ಎಂಬ ದೃಢಸಂಕಲ್ಪ ಮಾಡಿದಂತಿದೆ. ದಿನಕರನ್ ಅವರ ಭೂಮಿ ಹೇರಳವಾಗಿರುವ ಜಿಲ್ಲೆಯ ಅಧಿಕಾರಿ ಜಿಗುಟುತನದಿಂದ ಅದದೇ ವರದಿ ನೀಡುತ್ತಿದ್ದಾರೆಂದು ದೆಹಲಿಯ ನ್ಯಾಯಾಧಿಪತಿಗಳಿಗೆ ಮುಜುಗರ! ದಿನಕರನ್ ನಿರಾಕರಣೆಯು ನಿಜವೇ ಅಲ್ಲವೇ ಎಂಬುದನ್ನು ಖಚಿತಪಡಿಸಲು ಈಗ ಸರ್ವೆ ಆಫ್ ಇಂಡಿಯಾದ ಅಧಿಕಾರಿಗಳಿಗೆ ಸೂಚನೆ ನೀಡಲಾಗಿದೆ. ಭೂಪಟಗಳನ್ನು ಸಿದ್ಧಗೊಳಿಸುವ ಈ ಇಲಾಖೆ ದಿನಕರನ್ ಆಸ್ತಿಯನ್ನು ಕುರಿತಂತೆ ಎಂತಹ ಭೂ-ಪಟವನ್ನು ನೀಡುತ್ತದೋ ಕಾದುನೋಡಬೇಕು. ಅಷ್ಟರಲ್ಲಿ ಕರ್ನಾಟಕದ ಉಚ್ಚ ನ್ಯಾಯಾಲಯ ಭಗ್ಗನೆ ಹೊತ್ತಿ ಉರಿಯುವ ಸನ್ನಿವೇಶ ಉಂಟಾಗಿದೆ. ಇದು ನೈತಿಕತೆಯ ಬಗೆಗಿನ ಕಾಳಜಿಯೋ ಅಥವಾ ಜಾತಿ ವೈಮನಸ್ಯಗಳ ಪರಿಣಾಮವೋ ಎಂಬ ಜಿಜ್ಞಾಸೆ ನಡೆಯುತ್ತಿದೆ. ವಕೀಲರ ಒಂದು ದೊಡ್ಡ ಬಣ ಉಚ್ಚ ನ್ಯಾಯಾಲಯದಲ್ಲಿ ಪ್ರತಿಭಟನೆ ಮಾಡಹೋಗಿ ಈಗ ಕಾನೂನುಭಂಗದ ಆಪಾದನೆ ಎದುರಿಸುತ್ತಿದೆ. ಆ ಬಣದ ನಡತೆಗೆ ವಿಷಾದಿಸಿ ತಮ್ಮ ಅಸಮಾಧಾನ ವ್ಯಕ್ತಪಡಿಸಲು ಪ್ರೊಫೆಸರ್ ರವಿವರ್ಮ ಕುಮಾರ್ ಅವರ ನೇತೃತ್ವದಲ್ಲಿ ಕೆಲವು ವಕೀಲರು ಗಾಂಧಿ ಪ್ರತಿಮೆಯ ಬಳಿ ಸಾರಿದ್ದಾರೆ. ಶಾಸಕಾಂಗದಲ್ಲಿ ಗಣಿ ಅಪಹರಣಕಾರರ ದಾಂಧಲೆ, ಕಾರ್ಯಾಂಗದಲ್ಲಿ ಐ.ಎ.ಎಸ್.-ಐ.ಪಿ.ಎಸ್.ನವರ ಸ್ವೇಚ್ಛಾಚಾರ ಮತ್ತು ನ್ಯಾಯಾಂಗದಲ್ಲಿ ದಿನಕರನ್ ಸಂತತಿ : ಹೀಗಿದೆ ನಮ್ಮ ವ್ಯವಸ್ಥೆಯ ದುರವಸ್ಥೆ. ಈ ಹಿನ್ನೆಲೆಯಲ್ಲಿ ಕಪಿಲ್ ಸಿಬಲ್‌ನಂತಹ ಮಹಾನುಭಾವ ಕೇಂದ್ರದ ಸಚಿವರಾಗಿ ಅಮೆರಿಕಾಕ್ಕೆ ಹೋಗಿ ದುಂಬಾಲುಬಿದ್ದಿದ್ದಾರೆ, ''ನಮ್ಮಲ್ಲಿ ಯಾವುದೂ ಸರಿಯಿಲ್ಲ, ಮೂಲಸಾಧನಗಳ ಕೊರತೆ ಇದೆ, ಶಿಕ್ಷಣ ಅಪಕ್ವವಾಗಿದೆ; ಆದ್ದರಿಂದ ಕೃಪೆ ತೋರಿ ನಮ್ಮ ದೇಶಕ್ಕೆ ಬಂದು ಒಂದಷ್ಟು ವಿದೇಶಿ ಖಾಸಗಿ ವಿಶ್ವವಿದ್ಯಾಲಯಗಳನ್ನು ಸ್ಥಾಪಿಸಿ ನಮ್ಮನ್ನು ಕೃತಾರ್ಥರನ್ನಾಗಿಸಿ'' ಎಂದು. ನಮ್ಮ ದೇಶದ ಬಗ್ಗೆ ಆಂತರಿಕವಾಗಿಯೂ ಗೌರವ ಇಲ್ಲ, ಹೊರಗಿನ ದೇಶಗಳ ಜೊತೆಗಿನ ಸಂಬಂಧಗಳಲ್ಲೂ ಗೌರವವಿಲ್ಲ ಎನ್ನುವಂತಾಗಿದೆ. ದೇಶವನ್ನು ಇದಕ್ಕಿಂತಲೂ ಗಾಢವಾಗಿ ಅಂಧಕಾರವು ಮುತ್ತಬೇಕೆ ? ಬೆಳಕಿನೆಡೆಗೆ ನಡೆಯೋಣವೆಂದು ನಾಲ್ಕು ಸಾವಿರ ವರ್ಷಗಳಿಂದಲೂ ಪಠಿಸುತ್ತಾ ಬಂದಿರುವ ನಮಗೆ ಬೆಳಕು ಕಾಣುವುದೆಂದು ? ಈ ಬಗ್ಗೆ ಪ್ರಸ್ತುತ ಸಂಚಿಕೆಯ ಸಂಪಾದಕೀಯಗಳನ್ನು ಗಮನಿಸಬಹುದಾಗಿದೆ.

* * *

ಭಾರತ ಬಾಹ್ಯಾಕಾಶ ಸಂಸ್ಥೆಯು ಚಂದ್ರಯಾನದ ಮುಂದಿನ ಕಾರ್ಯಕ್ರಮಗಳ ಬಗೆಗಿನ ಮಾಹಿತಿಯನ್ನು ಪ್ರಚುರಪಡಿಸುತ್ತಿರುವ ಸಂದರ್ಭದಲ್ಲಿ ನೂತನ ನಿರ್ದೇಶಕರಾಗಿ ರಾಧಾಕೃಷ್ಣನ್ ಎಂಬ ವಿಜ್ಞಾನಿ ಅಧಿಕಾರ ವಹಿಸಿಕೊಂಡಿದ್ದಾರೆ. ಮಾಧವನ್ ನಾಯರ್ ಅವರಿಗೆ ಮುಂದೆ ಇನ್ನಾವ ಸ್ಥಾನವನ್ನು ನೀಡುತ್ತಾರೋ ಇನ್ನೂ ಗೊತ್ತಿಲ್ಲ. ಆದರೆ ಅವರ ಸ್ಥಾನಕ್ಕೆ ಬಂದಿರುವ ರಾಧಾಕೃಷ್ಣನ್ ಇಸ್ರೋಗೆ ನಿರ್ದೇಶಕರಾಗಿ ಬರುವ ಬದಲು ತಿರುಪತಿಯ ದೇವಸ್ಥಾನಕ್ಕೆ ಮುಖ್ಯ ಅರ್ಚಕರಾಗಿ ಹೋಗಿದ್ದರೆ ಸೊಗಸುತ್ತಿತ್ತು. ಅಥವಾ ವಿದೇಶದಲ್ಲಿ ಉಜ್ವಲವಾಗಿ ಬಾಳಬೇಕೆನಿಸಿದ್ದರೆ ಪಿಟ್ಸ್‌ಬರ್ಗ್‌ನ 'ತಿರುಪತಿ' ದೇವಸ್ಥಾನದ ಅರ್ಚಕರಾಗಿಯೂ ತೆರಳಬಹುದಿತ್ತು. ಈ ರಾಧಾಕೃಷ್ಣನ್ ಮಾಡಿದ ಮೊದಲ ಕೆಲಸ ಗುರುವಾಯೂರಿನಲ್ಲಿ ತುಲಾಭಾರ. ಮಾನ್ಯ ಯಡಿಯೂರಪ್ಪನವರಿಗೂ ಇವರಿಗೂ ಅಷ್ಟೇನೂ ವ್ಯತ್ಯಾಸವಿಲ್ಲ. ಒಬ್ಬರು ಗುರುವಾಯೂರು ಭಕ್ತರು, ಇನ್ನೊಬ್ಬರು ಕುಕ್ಕೆ ಸುಬ್ರಹ್ಮಣ್ಯದ ಭಕ್ತರು. ಇಸ್ರೋ ನಿರ್ದೇಶಕರಾಗಿ ಅಧಿಕಾರ ವಹಿಸಿಕೊಂಡ ಹಿಂದಿನವರಾರೂ ರಾಧಾಕೃಷ್ಣನ್ ಮಾಡಿದಂತೆ ಮಾಡಿರಲಿಲ್ಲ. ಯಾರೂ ಅಧಿಕಾರ ವಹಿಸಿಕೊಳ್ಳುವ ಮುನ್ನ 'ಪವಿತ್ರ' ಗುರುವಾಯೂರಿಗೆ ಹೋಗಿ ತಾವು ಎಷ್ಟು ಬೆಲ್ಲ ಅಥವಾ ಕೊಬರಿಯ ತೂಕ ಇದ್ದಾರೆಂದು ಕಂಡುಕೊಳ್ಳಲಿಲ್ಲ. (''ಪವಿತ್ರ'' ಏಕೆಂದರೆ ಗುರುವಾಯೂರಿನ ಕೃಷ್ಣ ಭಾರಿ ಮಡಿವಂತ. ಅನ್ಯಮತದವರನ್ನು ಒಳಸುಳಿಯಲು ಬಿಡದಂತಹ ಕಟ್ಟುನಿಟ್ಟಿನ ದೇವರು). ರಾಧಾಕೃಷ್ಣನ್ ಬಗ್ಗೆ ಅಭಿಮಾನ ತೋಡಿಕೊಳ್ಳುವ ಬದಲು ಅವರಿಗೆ ಛೀಮಾರಿ ಹಾಕಬೇಕಾದಂತಹ ಪ್ರಸಂಗ ಇದು. ವಿಜ್ಞಾನಕ್ಕೆ ಇಷ್ಟು ಅಪಚಾರವೆಸಗುವ ವ್ಯಕ್ತಿ ಇಸ್ರೋದ ನಿರ್ದೇಶಕರಾಗುವುದು ಎಷ್ಟು ಸೂಕ್ತ? ದೊಡ್ಡ ವಿಜ್ಞಾನಿಯಾದರೂ ಎಂತಹ ನಮ್ರತೆ ಮತ್ತು

(೭ನೇ ಪುಟಕ್ಕೆ)



ತಿಂಗಳ ಪತ್ರಿಕೆ

# ಹೊಸತು

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಸಂಪುಟ-೧೧ ಸಂಚಿಕೆ - ೫ ಡಿಸೆಂಬರ್ ೨೦೦೯

**ಸಂಪಾದಕ**

ಜಿ. ರಾಮಕೃಷ್ಣ

**ಸಹಸಂಪಾದಕರು**

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಲ್. ಗೋಪಾಲಕೃಷ್ಣಯ್ಯ
ಕೆ. ಎಸ್. ಪಾರ್ಥಸಾರಥಿ
ಕೆ. ಪಿ. ಸ್ವಾಮಿ
ಎಸ್. ಸುರೇಂದ್ರ

**ವ್ಯವಸ್ಥಾಪಕ**

ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೨೮೩೯೭೪೨೬

**ಹೊಸತು ಕಚೇರಿಯ ವಿಳಾಸ**



**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ : ೩೦೫೭೮೦೨೯, ೨೨೨೦೩೫೮೦
ಫ್ಯಾಕ್ಸ್ : ೩೦೫೭೮೦೨೩
e-mail : navakarnataka@gmail.com
hosathu@gmail.com
website : www.navakarnataka.com
http://navakarnataka.blogspot.com
http://hosathu.blogspot.com




## ನೈತಿಕ ಅಧಃಪತನದತ್ತ ರಾಜ್ಯ ಬಿಜೆಪಿ ಸರ್ಕಾರ

ಇಂದು ನಮ್ಮ ರಾಜ್ಯದಲ್ಲಿ ಭಾರತೀಯ ಜನತಾ ಪಕ್ಷದ ಸರ್ಕಾರ ತಾನೇ ತೋಡಿಕೊಂಡ ಹೊಂಡದಲ್ಲಿ ಬಿದ್ದು ಅವನತಿಯ ಹಾದಿ ಹಿಡಿದಿದೆ. 'ರೆಡ್ಡಿ ಸಹೋದರರ' ಸಾವಿರಾರು ಕೋಟಿ ಅಕ್ರಮ ಗಣಿಗಾರಿಕೆ ಹಣವನ್ನು ಚೆಲ್ಲಿ 'ಆಪರೇಷನ್ ಕಮಲ'ದ ಮೂಲಕ ತಮ್ಮದು ರೈತಪರ ಸರ್ಕಾರ ಎಂದು ಹೇಳಿಕೊಂಡು ಅಧಿಕಾರದ ಗದ್ದುಗೆ ಏರಿದ ಯಡಿಯೂರಪ್ಪನವರ ಸರ್ಕಾರ ತನ್ನ ಅಧಿಕಾರಾವಧಿಯ ಪ್ರಾರಂಭದ ದಿನಗಳಲ್ಲಿಯೇ ರಾಯಚೂರಿನ ಬಡರೈತರ ಮೇಲೆ ಗುಂಡುಹಾರಿಸಲು ಹಿಂಜರಿಯಲಿಲ್ಲ. ಜಾತಿವಾದಿ ಮತ್ತು ಕೋಮುವಾದಿ ಸಿದ್ಧಾಂತದ ಹಿನ್ನೆಲೆ ಹಾಗೂ ಗಣಿರೆಡ್ಡಿಗಳ ಹಣವನ್ನು ಆಧರಿಸಿ ಆಡಳಿತ ನಡೆಸುತ್ತಿರುವ ಬಿಜೆಪಿ ಸರ್ಕಾರ ನಮ್ಮ ರಾಜ್ಯವು ಹಿಂದೆಂದೂ ಕಾಣದಷ್ಟು ಮಟ್ಟದ ಭ್ರಷ್ಟಾಚಾರದಲ್ಲಿ ಮುಳುಗಿಹೋಗಿದೆ. ತಮ್ಮ ಮುಖ್ಯಮಂತ್ರಿ ಸ್ಥಾನಕ್ಕಾಗಿ ಎಂತಹ ಅಕ್ಷಮ್ಯ ಕೆಲಸವನ್ನಾದರೂ ಎಸಗಲು ಸಿದ್ಧರಾಗಿರುವ ಯಡಿಯೂರಪ್ಪನವರು ಮಠಮಾನ್ಯರಿಗೆ ಡೊಗ್ಗು ಸಲಾಂ ಹಾಕುತ್ತ, ಯಜ್ಞ ಹೋಮಾದಿಗಳಲ್ಲಿ ತಲ್ಲೀನರಾಗಿ ತಮ್ಮ ಪಕ್ಷಕ್ಕೆ ಅತಿ ಹೆಚ್ಚು ಸ್ಥಾನಗಳನ್ನು ಗೆಲ್ಲಿಸಿಕೊಟ್ಟರೂ ಇಂದು ಜನರಿಂದ ದೂರವಾಗಿದ್ದಾರೆ. ಕಳೆದ ಹದಿನೆಂಟು ತಿಂಗಳ ಆಡಳಿತ ವೈಖರಿಯನ್ನು ನೋಡಿರುವ ಯಾರಿಗಾದರೂ ಈ ಸರ್ಕಾರವನ್ನು ನಿಜಕ್ಕೂ ನಡೆಸುತ್ತಿರುವವರು ಬಿಜೆಪಿ ಸಚಿವರೋ ಅಥವಾ ಮಠಗಳೋ ಇಲ್ಲವೇ ರೆಡ್ಡಿ ಸಹೋದರರೋ ಎಂಬ ಸಂಶಯ ಬಾರದಿರದು. ವ್ಯವಸ್ಥೆ ಕುಸಿದುಹೋಗುವುದೆಂದರೆ ಇದೆಲ್ಲಾ ನಡೆಯುತ್ತಿರುತ್ತದೆ.

ಇಡೀ ಉತ್ತರ ಕರ್ನಾಟಕದ ಜಿಲ್ಲೆಗಳು ನೂರು ವರ್ಷಗಳ ಕಾಲದಲ್ಲೇ ಕಂಡಿರದ ನೆರೆಹಾವಳಿಗೆ ತುತ್ತಾಗಿ ಸಾವಿರಾರು ಹಳ್ಳಿಗಳು ನಿರ್ನಾಮವಾಗುತ್ತಿದ್ದಾಗ ರಾಜ್ಯದ ಬಿಜೆಪಿ ನಾಯಕತ್ವ ಸುತ್ತೂರು ಮಠದಲ್ಲಿ ಆರೆಸ್ಸೆಸ್ ಪ್ರೇರಿತ ಅದೆಂಥದೋ 'ಚಿಂತನ್ ಬೈಠಕ್' ಎಂಬ ಸಭೆ ಸೇರಿಸಿ ಗುಜರಾತ್‌ನ ನರಹಂತಕ ಮುಖ್ಯಮಂತ್ರಿ ನರೇಂದ್ರ ಮೋದಿ ಎಂಬ ಅಸಂಸ್ಕೃತನಿಂದ ಆಡಳಿತೆಯ ಮೊದಲ ಪಾಠಗಳ ಬಗ್ಗೆ ಕಲಿಯಲು ಮುಂದಾಗಿದ್ದು ಒಂದು ಘೋರ ಅಪರಾಧ. ಮನೆ ಮಠ, ಚೂರುಪಾರು ಆಸ್ತಿ ಪಾಸ್ತಿ ಎಲ್ಲವನ್ನೂ ಕಳೆದುಕೊಂಡು ಕಂಗಾಲಾದ ಜನರು ಸರ್ಕಾರದ ನೆರವಿಗಾಗಿ ಎದುರುನೋಡುತ್ತಿದ್ದಾಗ ಈ ಜಿಲ್ಲೆಗಳ ಬಹುತೇಕ ಬಿಜೆಪಿ ಜನಪ್ರತಿನಿಧಿಗಳು ರೆಡ್ಡಿ ಸಹೋದರರ ಬೆನ್ನಿಗೆ ಬಿದ್ದು ಯಡಿಯೂರಪ್ಪನವರ ವಿರುದ್ಧ ಪಿತೂರಿ ನಡೆಸಲು ಹೈದರಾಬಾದ್ ಮತ್ತು ಗೋವಾದ ರೆಸಾರ್ಟುಗಳಲ್ಲಿ ಮೋಜು ಮಾಡುತ್ತಿದ್ದುದನ್ನು ಜನತೆ ಮರೆಯಲಾರರು. ಎಳ್ಳಷ್ಟೂ ನಾಚಿಕೆಯಿಲ್ಲದ ಶಾಸಕಾಂಗ ನಮ್ಮದು!

ಕರ್ನಾಟಕದ ಬಿಜೆಪಿ ಎದುರಿಸುತ್ತಿರುವ ಬಿಕ್ಕಟ್ಟು ಮೇಲುನೋಟಕ್ಕೆ ವೈಯಕ್ತಿಕವಾದ್ದು, ರಾಜಕೀಯ ನೆಲೆ ಉಳ್ಳದ್ದು ಎಂದು ಕಂಡುಬಂದರೂ ವಾಸ್ತವಾಂಶ ಬೇರೆಯೇ ಆಗಿದೆ. ಇಂದು ಬಿಜೆಪಿ ಆಡಳಿತೆಯಲ್ಲಿ ಅದೇ ಪಕ್ಷದ ಮಂತ್ರಿ ಮಹೋದಯರು, ವಿಧಾನಸಭಾ ಸದಸ್ಯರು, ಕಾರ್ಯಕರ್ತರು ನಿಷ್ಠಾವಂತರಾಗಿರುವ, ನೇರವಾಗಿ ಜನರಿಗೆ ಉತ್ತರದಾಯಿತ್ವ ಇಲ್ಲದ, ಪ್ರಜಾಸತ್ತಾತ್ಮಕವಲ್ಲದ ಸರ್ಕಾರೇತರ ಸಂಘಸಂಸ್ಥೆಗಳು, ವಿಶೇಷವಾಗಿ ಆರೆಸ್ಸೆಸ್, ಸರ್ಕಾರದ ಎಲ್ಲ ಕೆಲಸ ಕಾರ್ಯಗಳಲ್ಲಿಯೂ ಮೂಗುತೂರಿಸುತ್ತಿವೆ, ಸರ್ಕಾರದ ಎಲ್ಲ ಇಲಾಖೆಗಳಲ್ಲಿಯೂ ತಮ್ಮ ಪ್ರತಿನಿಧಿಗಳನ್ನು ಹೊಂದಿವೆ. ಇದರಿಂದಾಗಿ ರಾಜ್ಯಸರ್ಕಾರ ಜನಪರವಾಗಿ ಕೆಲಸ ಮಾಡಲು ಸಾಧ್ಯವಾಗುತ್ತಿಲ್ಲ. ಈ ಸರ್ಕಾರ ಹೇಗಿದ್ದರೂ ಜನಪರವಲ್ಲವೆನ್ನುವುದು ಬೇರೆ ಮಾತು. ಇದು ೧೯೭೭ರಲ್ಲಿ ಕೇಂದ್ರದಲ್ಲಿ ಜನತಾ ಸರ್ಕಾರ ಅಧಿಕಾರಕ್ಕೆ ಬಂದಾಗಿನಿಂದಲೂ ಕಂಡುಬಂದಿರುವ ಪ್ರವೃತ್ತಿ. ಇದರ ಮೂಲ ಪ್ರೇರಕ ಶಕ್ತಿ ಅಂದಿನ ಜನಸಂಘ. ಇದನ್ನೀಗ ಆರೆಸ್ಸೆಸ್, ವಿಶ್ವ ಹಿಂದು ಪರಿಷತ್ ಮೊದಲಾದ ಹಿಂದುತ್ವವಾದಿ ಸಂಘಟನೆಗಳು ಯಶಸ್ವಿಯಾಗಿ ಮುಂದುವರಿಸಿಕೊಂಡು ಬರುತ್ತಿವೆ. ಉದಾಹರಣೆಗೆ, ಯಡಿಯೂರಪ್ಪನವರು ತಮ್ಮೆಲ್ಲ ರಾಜಕೀಯ ಷಡ್ಯಂತ್ರಗಳನ್ನು ರೂಪಿಸುವ ಮೊದಲು ಕೇಶವ ಶಿಲ್ಪದ ನಾಯಕರು ಹೊರಡಿಸುವ ಫರ್ಮಾನ್‌ಗಳಿಗೆ ತಲೆಬಾಗಿ ಮುಂದಿನ ಹೆಜ್ಜೆ ಇಡಬೇಕು. ಸಾವಯವ ಕೃಷಿ ಯೋಜನೆಯಂತಹ ಸರ್ಕಾರಿ ಕಾರ್ಯಕ್ರಮದ ನಿರ್ವಹಣೆಯನ್ನು ಸಂಘಪರಿವಾರದ ಸಂಘಸಂಸ್ಥೆಗಳಿಗೆ ಬಿಟ್ಟುಕೊಡಲಾಗಿದೆ. ಶಾಲಾ ವಿದ್ಯಾರ್ಥಿಗಳಲ್ಲಿ ಕೋಮುದ್ವೇಷ ಬಿತ್ತುವಂತಹ, ಸನಾತನವಾದಿ ದುಷ್ಟ ಚಿಂತನೆಗಳನ್ನು ಬೆಳೆಸುವಂತಹ ರಾಷ್ಟ್ರೋತ್ಥಾನ ಸಂಸ್ಥೆಯು ಪ್ರಕಟಿಸಿರುವ ೧೭ ಕೋಟಿ ರೂ.ಗಳ ಮೌಲ್ಯದ ಪುಸ್ತಕಗಳನ್ನು ರಾಜ್ಯ ಸರ್ಕಾರ ಖರೀದಿಸಲು ತೀರ್ಮಾನಿಸಿದೆ. ಚುನಾವಣೆಯ ಸಂದರ್ಭದಲ್ಲಿ ''ಕರ್ನಾಟಕವನ್ನು ಗುಜರಾತನ್ನಾಗಿ ಮಾಡುತ್ತೇವೆ'' ಎಂಬ ಬಿಜೆಪಿ ಘೋಷಣೆ ಕಾರ್ಯಗತಗೊಳ್ಳುತ್ತಿರುವುದಕ್ಕೆ ಇಂಥ ಎಷ್ಟೋ ಉದಾಹರಣೆಗಳಿವೆ. ಇದೇ ಹಿನ್ನೆಲೆಯಲ್ಲಿ ಆರೆಸ್ಸೆಸ್‌ನಂತಹ ಕೋಮುವಾದಿ ಸಂಘಸಂಸ್ಥೆಗಳು ದಶಕಗಳ ಕಾಲದಿಂದಲೂ ಅತ್ಯುತ್ತಮ ಸಾಂಸ್ಕೃತಿಕ ಮತ್ತು ಅಧ್ಯಯನ ಕೇಂದ್ರಗಳಾಗಿ ಉಳಿದುಕೊಂಡು ಬಂದಿದ್ದ ಬೆಂಗಳೂರಿನ ಮಿಥಿಕ್ ಸೊಸೈಟಿ ಮತ್ತು ಗೋಖಲೆ ಇನ್‌ಸ್ಟಿಟ್ಯೂಟ್‌ಗಳನ್ನು ತಮ್ಮದಾಗಿಸಿಕೊಂಡಿವೆ. ಈ ಕುರಿತು ನಗರದ ಪ್ರಜ್ಞಾವಂತ ಜನತೆ ಮೌನವಹಿಸಿರುವುದು ನಿಜಕ್ಕೂ ಒಂದು ದೊಡ್ಡ ದುರಂತ. ಅಕ್ರಮ ಗಣಿಗಾರಿಕೆ ಹಣ ಸಂಘಪರಿವಾರದ ಸಂಸ್ಥೆಗಳ ಖಜಾನೆಗೂ ಹರಿದುಬಂದಿರುವುದರಲ್ಲಿ ಯಾವ ಸಂಶಯವೂ ಇಲ್ಲ.

ನಮ್ಮ ರಾಜ್ಯದ ಆಳಿದ ಮತ್ತು ಆಳುತ್ತಿರುವ ಪಕ್ಷಗಳ ರಾಜಕಾರಣಿಗಳು ದೊಡ್ಡ ದೊಡ್ಡ ಕುಳಗಳ ಹಂಗಿನಲ್ಲೇ ಆಡಳಿತ ನಡೆಸಿದವರು. ಒಂದು ಕಾಲಕ್ಕೆ ಹೆಂಡದ ದೊರೆಗಳಾದರೆ, ಇನ್ನೊಂದು ಅವಧಿಯಲ್ಲಿ ಕ್ಯಾಪಿಟೇಷನ್ ಕುಳಗಳು. ಮತ್ತೊಂದು ಅವಧಿಯಲ್ಲಿ ರಿಯಲ್ ಎಸ್ಟೇಟ್ ಮಾಫಿಯಾಗಳ ಕಾರುಬಾರು. ಈಗಿನ ಬಿಜೆಪಿ ಆಡಳಿತದಲ್ಲಿ ಇವರ ಪಾತ್ರ ಅಲ್ಪಸ್ವಲ್ಪ ಇದ್ದರೂ ಸರ್ಕಾರದ ಎಲ್ಲ ಕಾರ್ಯರೂಪಗಳನ್ನು ನಿಯಂತ್ರಿಸುತ್ತಿರುವುದು ರೆಡ್ಡಿ ಸಹೋದರರು. ಇವರದೇ ಒಂದು ಪ್ರತ್ಯೇಕ ಶಕ್ತಿ ಕೇಂದ್ರ. ವರಮಹಾಲಕ್ಷ್ಮೀವ್ರತ ಆಚರಿಸಲು ಪ್ರತಿವರ್ಷ ದಿಲ್ಲಿಯಿಂದ ಬಳ್ಳಾರಿಗೆ

ದಯಮಾಡಿಸುತ್ತಿರುವ ಸುಷ್ಮಾ ಸ್ವರಾಜ್ ಅವರ ಕೃಪಾಕಟಾಕ್ಷದಲ್ಲಿ ಬೆಳೆದುಬಂದಿರುವ ರೆಡ್ಡಿ ಸಹೋದರರು ಇಡೀ ರಾಜ್ಯ ಸರ್ಕಾರವನ್ನೇ ಹಿಡಿದು ಅಲ್ಲಾಡಿಸುವಷ್ಟು ಪ್ರಬಲರಾಗಿದ್ದಾರೆ. ಎಷ್ಟರ ಮಟ್ಟಿಗೆ ಎಂದರೆ, ಇತ್ತೀಚೆಗೆ ರಾಜ್ಯ ಬಿಜೆಪಿಯಲ್ಲಿ ತಲೆ ಎತ್ತಿರುವ ಬಿಕ್ಕಟ್ಟನ್ನು ಬಗೆಹರಿಸಲು ಬಂದಿದ್ದ 'ತಾಯಿ' ಸುಷ್ಮಾ ಸ್ವರಾಜ್, ಅರುಣ್ ಜೇಟ್ಲಿ, ವೆಂಕಯ್ಯ ನಾಯ್ಡುರಂಥವರಿಗೆ ಈ ಗಣಿಧಣಿಗಳು ಮಣಿಯಲಿಲ್ಲ. ಇಷ್ಟಕ್ಕೂ ದೆಹಲಿಯ ಬಿಜೆಪಿ ಹೈಕಮ್ಯಾಂಡು ಸಹ ಒಡೆದ ಮನೆಯಾಗಿದೆ. ಎಂದಾಗ ಗಣಿಹಣ ದೆಹಲಿ ಹೈಕಮ್ಯಾಂಡ್‌ವರೆಗೂ ಹರಿದಿರಲೇ ಬೇಕು. ಕಡೆಗೂ ರೆಡ್ಡಿಗಳ ಆಣತಿಯಂತೆ ಒಂದು ಬಗೆಯ ರಾಜಿಸೂತ್ರಕ್ಕೆ ಯಡಿಯೂರಪ್ಪನವರ ಬಣ ಒಪ್ಪಿದಂತಿದೆ. ಅದರ ಪ್ರಕಾರ ಇಡೀ ಆಡಳಿತ ಇನ್ನು ಮುಂದೆ ಸಮನ್ವಯ ಸಮಿತಿಯೊಂದರ ಉಸ್ತುವಾರಿಯಲ್ಲಿ ನಡೆಯಲಿದೆಯಂತೆ. ಆ ಸಮಿತಿಯ ಸಭೆಗಳಲ್ಲಿ ಬಿಜೆಪಿ ಹೈಕಮಾಂಡಿನ ಸದಸ್ಯರೊಬ್ಬರು ಹಾಜರಿರುತ್ತಾರೆ. ಎಂದರೆ, ಈ ರಾಜಿಸೂತ್ರದಿಂದಾಗಿ ಮುಖ್ಯಮಂತ್ರಿ ಯಡಿಯೂರಪ್ಪನವರ ರೆಕ್ಕೆಪುಕ್ಕ ಕಡಿದುಹಾಕಿದಂತಾಗಿದೆ. ಇಂತಹ ಪರಿಸ್ಥಿತಿಯಲ್ಲಿ ಸ್ವಾಭಿಮಾನವಿರುವ ಯಾವುದೇ ವ್ಯಕ್ತಿ ಕುರ್ಚಿಯ ಬಗ್ಗೆ ಇಷ್ಟು ಕೀಳಾಗಿ ವರ್ತಿಸಿ ಮುಖ್ಯಮಂತ್ರಿ ಸ್ಥಾನಕ್ಕೆ ಅಂಟಿಕೊಳ್ಳುತ್ತಿರಲಿಲ್ಲ. ಸ್ವಾರ್ಥಕ್ಕೆ ಇನ್ನೊಂದು ಹೆಸರು ಯಡಿಯೂರಪ್ಪನವರು ಎಂದರೆ ತಪ್ಪಾಗಲಾರದು. ಒಟ್ಟಾರೆಯಾಗಿ ಇನ್ನು ಮುಂದೆ ರೆಡ್ಡಿ ಸಹೋದರರದೇ ಆಧಿಪತ್ಯ. ಈ ಹಿನ್ನೆಲೆಯಲ್ಲಿ ಬಳ್ಳಾರಿಯನ್ನೂ ಒಳಗೊಂಡಂತೆ ಇತರ ಜಿಲ್ಲೆಗಳಲ್ಲೂ ನಡೆಯುತ್ತಿರುವ ಎಲ್ಲ ಅಕ್ರಮ ಗಣಿಗಾರಿಕೆಯ ವಿರುದ್ಧ ತನಿಖೆ ನಡೆಸಿ ಕಾನೂನಿನನ್ವಯ ತೀವ್ರ ಕ್ರಮ ಕೈಗೊಳ್ಳುವಂತೆ ಹೋರಾಟಗಳು ಜರುಗಬೇಕಿವೆ. ಅಂತೆಯೇ ಪರಿಸರನಾಶವನ್ನು ತಡೆಗಟ್ಟುವ ಹಾಗೂ ರಾಷ್ಟ್ರದ ಸಂಪನ್ಮೂಲಗಳ ಸದ್ಬಳಕೆಯಾಗುವ ದಿಶೆಯಲ್ಲಿ ಗಣಿ ಉದ್ಯಮವನ್ನು ರಾಷ್ಟ್ರೀಕರಣಗೊಳಿಸಬೇಕೆಂದು ಒತ್ತಾಯಿಸಿ ಎಲ್ಲ ಪ್ರಗತಿಪರ ಪಕ್ಷಗಳು, ಸಂಘಟನೆಗಳು ಹೋರಾಡಬೇಕಿದೆ. ಅವುಗಳಲ್ಲಾದರೂ ಐಕ್ಯತೆ ಎಲ್ಲಿದೆ !

ಇದು ಈ ಸಾಲುಗಳನ್ನು ಬರೆಯುತ್ತಿರುವ ಹೊತ್ತಿಗೆ ಇರುವ ಸನ್ನಿವೇಶ. ನಮ್ಮೀ ಸಂಚಿಕೆ ಓದುಗರ ಕೈಸೇರುವ ವೇಳೆಗೆ ರಾಜ್ಯದ ರಾಜಕೀಯ ಪರಿಸ್ಥಿತಿ ಸಂಪೂರ್ಣವಾಗಿ ಬದಲಾಗುವ ಸಾಧ್ಯತೆಗಳನ್ನು ತಳ್ಳಿಹಾಕುವಂತಿಲ್ಲ. ಈ ಹಿನ್ನೆಲೆಯಲ್ಲಿ ಜಾಗತೀಕರಣ, ಉದಾರೀಕರಣ, ಖಾಸಗೀಕರಣ ಪ್ರಕ್ರಿಯೆಗಳಿಂದ ಸಂಭವಿಸುತ್ತಿರುವ ಸಮಸ್ಯೆಗಳೇ ಅಲ್ಲದೆ ಭ್ರಷ್ಟಾಚಾರ, ಜಾತೀಯತೆ, ಕೋಮುಗಲಭೆಗಳು, ನೆರೆಹಾವಳಿ ಇವೇ ಮೊದಲಾದ ಪಿಡುಗುಗಳಿಂದ ನಲುಗಿಹೋಗುತ್ತಿರುವ ಕರ್ನಾಟಕದ ಜನತೆಗೆ ಇನ್ನಷ್ಟು ಕಷ್ಟದ ದಿನಗಳು ಕಾದಿವೆ. ಜನಪರವಾದ ಆರ್ಥಿಕ ಅಭಿವೃದ್ಧಿ ಕಾರ್ಯಕ್ರಮಗಳನ್ನು ರೂಪಿಸಿ ನಿಷ್ಠೆಯಿಂದ ಕೆಲಸ ಮಾಡಲು ಬಂಡವಾಳಶಾಹಿ ಮತ್ತು ಊಳಿಗಮಾನ್ಯ ಹಿನ್ನೆಲೆಯುಳ್ಳ ಕಾಂಗ್ರೆಸ್ ಮತ್ತು ಜನತಾದಳ ಪಕ್ಷಗಳು ಸೋತಿವೆ. ಒಂದರ್ಥದಲ್ಲಿ ಕರ್ನಾಟಕದಲ್ಲಿ ಕೋಮುವಾದಿ ಬಿಜೆಪಿ ಬೆಳೆಯಲು ಈ ಎರಡೂ ಪಕ್ಷಗಳು ಸಾಕಷ್ಟು ಕೊಡುಗೆ ನೀಡಿವೆ. ಇಂದು ರಾಜಕಾರಣ ಎಂದರೆ ಸಾವಿರಾರು ಕೋಟಿ ಹಣವನ್ನು ಅಕ್ರಮವಾಗಿ ಗಳಿಸಲು ನಡೆಸುವ ಒಂದು ಧಂಧೆ ಎಂದೇ ಅರ್ಥೈಸುವ ಪರಿಸ್ಥಿತಿ ಉಂಟಾಗಿದೆ. ಇದು ಇಡೀ ರಾಷ್ಟ್ರದ ರಾಜಕಾರಣಕ್ಕೇ ಅನ್ವಯಿಸಬಹುದಾದ ಮಾತು. ಇಡೀ ದೇಶದ ಗೋಡೆಗಳು ಶಿಥಿಲವಾಗುತ್ತಿವೆ.

ಇತ್ತೀಚಿನ ದಿನಗಳಲ್ಲಂತೂ ಮೌಲ್ಯಾಧಾರಿತ ರಾಜಕಾರಣ ಎಂಬುದು ಅರ್ಥ ಕಳೆದುಕೊಂಡಿದೆ. ಹೆಗಡೆಯವರ ಕಾಲದಲ್ಲೂ ಇರಲಿಲ್ಲವೆಂಬುದು ಎಲ್ಲರಿಗೂ ಗೊತ್ತಿದೆ. ಪ್ರಮುಖವಾಗಿ ಬಿಜೆಪಿ, ಜನತಾದಳ, ಕಾಂಗ್ರೆಸ್‌ಗಳಂತಹ ಬಂಡವಾಳಶಾಹಿ ಪಕ್ಷಗಳು ಚುನಾವಣೆ ಪ್ರಕ್ರಿಯೆಯನ್ನೂ ಒಳಗೊಂಡಂತೆ ಎಲ್ಲ ಪ್ರಜಾಪ್ರಭುತ್ವವಾದಿ ಮೌಲ್ಯಗಳನ್ನು ಮತ್ತು ಸಂಸ್ಥೆಗಳನ್ನು ಹರಾಜಿಗಿಟ್ಟಿವೆ. ಸಂಸತ್ತು, ನ್ಯಾಯಾಂಗ, ಕಾರ್ಯಾಂಗ, ಪೊಲೀಸು ಮುಂತಾದ ಸರ್ಕಾರೀ ಅಂಗಗಳಲ್ಲಿ ಜನರು ನಂಬಿಕೆ ಕಳೆದುಕೊಳ್ಳುತ್ತಿದ್ದಾರೆ. ಇಂದು ನಮ್ಮ ಇಡೀ ರಾಷ್ಟ್ರದ ಅಸ್ತಿತ್ವಕ್ಕೇ ಧಕ್ಕೆ ಉಂಟಾಗುವ ಸಂದರ್ಭ ಉಂಟಾಗಿದೆ. ಎಂದೇ ಎಲ್ಲ ದುಡಿವ ಜನರ, ದೀನದಲಿತರ, ಅಲ್ಪಸಂಖ್ಯಾತರ, ಬುಡಕಟ್ಟುಜನರ ಕಷ್ಟಕಾರ್ಪಣ್ಯಗಳಿಗೆ, ಆಶೋತ್ತರಗಳಿಗೆ ಸ್ಪಂದಿಸುವ ದಿಶೆಯಲ್ಲಿ ಕಾರ್ಯಕ್ರಮಾಧಾರಿತ ಆರ್ಥಿಕ, ಸಾಮಾಜಿಕ ಮತ್ತು ರಾಜಕೀಯ ಪರ್ಯಾಯಗಳನ್ನು ನಿರ್ಮಿಸುವ ದಿಶೆಯಲ್ಲಿ ಎಲ್ಲ ಪ್ರಗತಿಪರ, ಪ್ರಜ್ಞಾವಂತ ಜನವಿಭಾಗಗಳು ಚಿಂತಿಸಿ ಕಾರ್ಯಮಗ್ನರಾಗಬೇಕಿದೆ, ಜನತೆಯನ್ನು ಈ ದುಷ್ಟ, ಜನವಿರೋಧಿ ಶಕ್ತಿಗಳಿಂದ ಮುಕ್ತಗೊಳಿಸಬೇಕಿದೆ.

## ಪುರುಷ ರಾಜಕಾರಣಕ್ಕೆ ಬಲಿಯಾದ ಶೋಭಾ

ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಚುನಾಯಿತರಾದ ಪ್ರಜಾಪ್ರತಿನಿಧಿಯಾದ ಶೋಭಾ ಕರಂದ್ಲಾಜೆಯವರನ್ನು ಯಾವುದೇ ಸಕಾರಣ ನೀಡದೆ ಭಾರತೀಯ ಜನತಾ ಪಕ್ಷ ಸಚಿವ ಸ್ಥಾನದಿಂದ ಪದಚ್ಯುತಗೊಳಿಸಿದ್ದು ಪ್ರಜಾಪ್ರಭುತ್ವ ವ್ಯವಸ್ಥೆಗೆ ಅವಮಾನ ಮಾಡಿದಂತೆ. ಆ ಪಕ್ಷದ ನಾಯಕತ್ವಕ್ಕೆ ಸರ್ವಾಧಿಕಾರವೇ ಪ್ರಿಯವಾದುದು !

ಹೆಣ್ಣನ್ನು ಮಮತಾಮಯಿ ಮಾತೆಯಾಗಿ ಇಲ್ಲವೆ ವಿನಾಶಕಾರಿ ಮಾರಿಯಾಗಿ ಮಾತ್ರ ನೋಡಲು ಸಾಧ್ಯವಿರುವ ಈ ಪಕ್ಷಕ್ಕೆ ಹೆಣ್ಣಿನಿಂದ ತ್ಯಾಗ ನಿರೀಕ್ಷಿಸುವುದು ಉಸಿರಾಟದಷ್ಟೇ ಸಹಜ, ಸಲೀಸು. ಮಹಿಳೆಯರನ್ನು ಮಾತೆಯರೆಂದು ವೈಭವಿಸುವ ಭಾರತೀಯ ಜನತಾ ಪಕ್ಷ ಅಂತೂ ಅಧಿಕಾರದ ಲಾಲಸೆಯಿಂದಾಗಿ ತನ್ನಲ್ಲಿದ್ದ ಏಕೈಕ ಸಚಿವೆ ಶೋಭಾ ಕರಂದ್ಲಾಜೆಯ ರಾಜಿನಾಮೆ ಪಡೆದು ಮಹಿಳಾ ವಿರೋಧಿ ಧೋರಣೆಯನ್ನು ಮೆರೆದಿದೆ. ಹಿಂದೆ ಜನತಾದಳದೊಂದಿಗೆ ಸಂಮಿಶ್ರ ಸರ್ಕಾರ ನಡೆಸಿದಾಗಲೂ ಒಬ್ಬರೇ ಒಬ್ಬ ಮಹಿಳೆಗೂ ಸಚಿವ ಸ್ಥಾನ ಕೊಡದಿದ್ದುದು ಸಾಕಷ್ಟು ವಾದಕ್ಕೆ ಕಾರಣವಾಗಿದ್ದು ಸಾರ್ವಜನಿಕವಾಗಿ ಖಂಡನೆಗೆ ಗುರಿಯಾದದ್ದು ಈಗ ಇತಿಹಾಸ. ಅದೇ ದಿಕ್ಕಿನಲ್ಲಿ ಶೋಭಾರ ಪದಚ್ಯುತಿಯೂ ಕೂಡ ಸಾರ್ವಜನಿಕ ದೂಷಣೆಗೆ ಗುರಿಯಾಗಿದೆ. ಅವಕಾಶ ಸಿಕ್ಕಿದಾಗ


ತಿಂಗಳ ಪತ್ರಿಕೆ

ಹೊಸತು

ನೆಟ್ಟದಿಯ ನಾಳೆ ನಮ್ಮದು



ನವಕರ್ನಾಟಕ ಪ್ರಕಾಶನ





ಚಂದಾ ವಿವರಗಳು

| | |
|---|---|
| ಬಿಡಿ ಸಂಚಿಕೆ | ರೂ. ೧೨/- |
| ವಾರ್ಷಿಕ ಚಂದಾ | ರೂ. ೧೫೦/- |
| ಮೂರು ವರ್ಷಕ್ಕೆ | ರೂ. ೩೫೦/- |

ನವಕರ್ನಾಟಕ ಶಾಖೆಗಳು

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು - ೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ : ೦೮೨೪-೨೪೪೧೦೧೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ : ೦೮೨೧-೨೪೨೪೯೦೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
✆ : ೦೮೪೭೨-೨೨೪೩೦೨

ಮಹಿಳೆ ಸಾಮರ್ಥ್ಯ ತೋರಿಸಿದರೂ ಬಲವುಳ್ಳವರ ಬೆಂಬಲವಿಲ್ಲದಿದ್ದರೆ ಅಧಿಕಾರದ ಗದ್ದುಗೆ ಸಿಕ್ಕುವುದು ಅಸಾಧ್ಯ ಎಂಬ ಸ್ಥಾಪಿತ ಸತ್ಯವನ್ನು ಮತ್ತೊಮ್ಮೆ ಸಾಬೀತುಗೊಳಿಸಲಾಗಿದೆ.

'ಅಧಿಕಾರ' ಎನ್ನುವುದು ಎಂದಿಗೂ ಪುರುಷ ಪ್ರಪಂಚದ ಸಂಗತಿಯೇ. ಅಧಿಕಾರದ ಆಸೆಗೆ 'ಆಪರೇಶನ್ ಕಮಲ' ನಡೆಸಿ ಶಾಸಕರನ್ನು ಕೊಂಡುಕೊಳ್ಳುತ್ತಾ ಹೋದ ಮುಖ್ಯಮಂತ್ರಿಯು ತನ್ನ ಕುರ್ಚಿ ಭದ್ರವಾಗಿದೆಯೆಂದು ಸಂಭ್ರಮಪಡುತ್ತಾ, ಅದರ ನಂತರದ ಪರಿಣಾಮಗಳೇನಾಗಬಹುದು ಎಂದು ಊಹಿಸದೇ ಹೋದರೆ, ಅದು ಅವರ ಅಜ್ಞಾನವನ್ನು ತೋರಿಸುತ್ತದೆ ಅಷ್ಟೇ. 'ಆಪರೇಶನ್ ಕಮಲ'ದಿಂದ ಪ್ರಜಾಪ್ರಭುತ್ವವನ್ನು ಅಣಕಿಸಿದ ಮುಖ್ಯಮಂತ್ರಿ ಈಗ ಮತ್ತೊಮ್ಮೆ ಶೋಭಾ ಅವರ ರಾಜಿನಾಮೆ ಪಡೆಯುವ ಮೂಲಕ ಜನತಂತ್ರದ ಮೇಲೆ ಹಲ್ಲೆ ನಡೆಸಿದ್ದಾರೆ. ಹಣವುಳ್ಳ ಗಣಧಣಿಗಳ ಲೋಕದಲ್ಲಿ ಹೆಣ್ಣು-ಗಂಡು ಮಾತ್ರ ಏಕೆ, ಒಟ್ಟಾರೆಯಾಗಿ ಮನುಷ್ಯತ್ವಕ್ಕೇ ಬೆಲೆಯಿಲ್ಲ. ಇದ್ದಿದ್ದರೆ ತಮ್ಮ ಕಣ್ಣೆದುರಿಗೆ, ತಮ್ಮನ್ನು ಚುನಾಯಿಸಿದ ಜನ ನೆರೆಯಿಂದ ಸಾಯುತ್ತಿರುವಾಗ ಯಾರಾದರೂ ಅಧಿಕಾರಕ್ಕಾಗಿ ಕಚ್ಚಾಡುತ್ತಿದ್ದರೆ? ರೆಸಾರ್ಟ್‌ಗಳಲ್ಲಿ ಮೋಜು ಮಾಡುತ್ತಿದ್ದರೆ? ಮುಖ್ಯ ಮಂತ್ರಿಗಳೂ ದೆಹಲಿಗೆ ಓಡಿ ಹೋಗಿ ಕೂಡುತ್ತಿದ್ದರೆ? ಈ ಎಲ್ಲರ ಅಧಿಕಾರದಾಹ, ಕುರ್ಚಿಯ ಮೋಹ ಜನರಿಗೆ ಜನತಂತ್ರದಲ್ಲಿಯೇ ನಂಬಿಕೆ ಕುಸಿಯುವಂತೆ ಮಾಡುತ್ತಿದೆ.

ಮಹಿಳೆಯರು ಕೇವಲ ಮತದಾರರು ಮಾತ್ರವಲ್ಲ , ಅವಕಾಶ ದೊರೆತರೆ ಗೆಲ್ಲಬಲ್ಲ ಅಭ್ಯರ್ಥಿಗಳೂ ಆಗಬಲ್ಲರು, ಎಂಬುದನ್ನು ಇತ್ತೀಚಿನ ಚುನಾವಣೆಗಳಲ್ಲಿ ಅವರು ಸಾಧಿಸಿ ತೋರಿಸಿದ್ದಾರೆ. ಆದರೂ ಕರ್ನಾಟಕದ ವಿಧಾನ ಸಭೆಯ ಚುನಾವಣೆಯಲ್ಲಿ ಬಿಜೆಪಿಯಿಂದ ಚುನಾಯಿತರಾದವರು ಕೇವಲ ಮೂವರು ಮಹಿಳೆಯರು: ಶೋಭಾ, ಮಲ್ಲಿಕಾ, ಸೀಮಾ. ಆಡಳಿತ ಪಕ್ಷಕ್ಕೆ ಸೇರುವ ಈ ಮೂವರು ಒಟ್ಟಾರೆಯಾಗಿ ಆ ಪಕ್ಷದ ಇಂದಿನ ನಿಲುವನ್ನು ಪ್ರತಿಭಟಿಸಲಿಲ್ಲವೇಕೆ? ಅಂತಹ ಸಾಧ್ಯವಿಲ್ಲದ ಪರಿಸ್ಥಿತಿಯನ್ನು ಅವರು ನಿರ್ಮಿಸಿಕೊಂಡಿದ್ದಾರೆ. ಬಿಜೆಪಿಯ ಯಾವ ಮಹಿಳಾ ನಾಯಕಿಯೂ ಶೋಭಾಗಾದ ಅನ್ಯಾಯದ ವಿರುದ್ಧ ಸೊಲ್ಲೆತ್ತದಿರುವುದೇ ಇಂದಿನ ರಾಜಕೀಯ ಪರಿಸ್ಥಿತಿಯ ಪರಿಚಯ ಮಾಡಿಕೊಡುತ್ತದೆ. ಶೋಭಾ ಪಕ್ಷದ ಸಂಘಟನೆಯೊಳಗೆ ಬೆಳೆದುಬಂದವರು. ವಿದ್ಯಾವಂತೆ. ಸಚಿವೆಯಾಗಿ ಅವರ ಕಾರ್ಯ ಮತ್ತು ಪರಿಶ್ರಮವನ್ನು ಎಲ್ಲರೂ ಮೆಚ್ಚಿದ್ದಾರೆ. ಆದರೆ ಅಧಿಕಾರ ಪಡೆಯಲು ಇವು ಯಾವುವೂ ಗುಣಗಳಾಗಲಿಲ್ಲ, ಏಕೆ?

ಭಾರತೀಯ ಸಂಸ್ಕೃತಿಯ ವಕ್ತಾರರೆಂದು ಮೆರೆಯುತ್ತಿರುವವರದು ಯಾವ ಸಂಸ್ಕೃತಿ? ಹೆಣ್ಣಿನ ವಿಕಾಸವನ್ನು ಬಯಸದ, ಹೆಣ್ಣಿನ ಸ್ವಾತಂತ್ರ್ಯವನ್ನು ಸಹಿಸದ, ಹೆಣ್ಣನ್ನು ಕೇವಲ ಗೃಹಲಕ್ಷ್ಮಿಯರಾಗಿ ಮಾತ್ರ ನೋಡಲು ಬಯಸುವ ಈ ಪಕ್ಷ ಹೆಣ್ಣನ್ನು ತನ್ನ ಅನುಕೂಲಕ್ಕೆ ತಕ್ಕಂತೆ ಬಳಸಿಕೊಂಡಿದೆ ಅಷ್ಟೇ. ಶೋಭಾಳನ್ನು ಅಧಿಕಾರದಿಂದ ಕೆಳಗಿಳಿಸುವ ಸಂಧಾನಕ್ಕೆ ಸೂತ್ರಧಾರಿಯಾದದ್ದು ಮತ್ತೊಬ್ಬ ಮಹಿಳೆ. ಗಣಿಧಣಿಗಳ ಬಾಯಲ್ಲಿ 'ತಾಯಿ' ಎನಿಸಿಕೊಂಡ ಈ ಬಳ್ಳಾರಿಯ ಮಹಾಲಕ್ಷ್ಮಿಗಾದರೋ ಭಾಜಪಾದ ಅಧ್ಯಕ್ಷ ಗಾದಿ ಕೊಡುತ್ತಾರೆಯೆ? ಖಂಡಿತ ಇಲ್ಲ. ಇಂತಹ ಲಿಂಗರಾಜಕೀಯಕ್ಕೆ ಸರಿಯಾದ ಉತ್ತರವನ್ನು ಕೊಡಬೇಕಾದರೆ ಮಹಿಳಾ ಸಮುದಾಯ ತನ್ನ ಸ್ವಂತ ಬಲವನ್ನು ಹೆಚ್ಚಿಸಿಕೊಳ್ಳಬೇಕು. ಯಾವುದಾದರೊಬ್ಬ ಪುರುಷರ ಆಪ್ತರಾಗಿರುವ ಕಾರಣಕ್ಕೆ ರಾಜಕೀಯದಲ್ಲಿ ಮಿಂಚುತ್ತಿರುವ ಶೋಭಾ, ಸೀಮಾ, ಶಾಂತಾ, ಅಂತಹವರು ಸ್ವಯಂಪ್ರಭೆಯರಾಗದ ಹೊರತು ಪಿತೃಪ್ರಧಾನ ರಾಜಕೀಯದ ವಿರುದ್ಧ ಸೆಣೆಸಾಡಲು ಸಾಧ್ಯವಿಲ್ಲ. ಪುರುಷರಾಜಕಾರಣದ ಹುನ್ನಾರಗಳನ್ನು ಮಹಿಳೆಯರು ಒಟ್ಟಾಗಿ ಮೆಟ್ಟಿನಿಂತಾಗ ಮಾತ್ರ ನಿಜವಾದ ಅರ್ಥದಲ್ಲಿ ಮಹಿಳಾನಾಯಕಿಯರಾಗಬಲ್ಲರು.

ಗಾಯತ್ರಿ . ಎನ್.

## ಇಂದಲ್ಲದಿದ್ದರೆ ನಾಳೆ...

ಇವಾನ್ ತುರ್ಗನ್ಯೇವ್ ಬರೆದ ''ಬೇಟೆಗಾರನ ದೃಶ್ಯಾವಳಿಗಳು'' ಎಂಬ ಪುಸ್ತಕದಲ್ಲಿ ಒಂದು ಪ್ರಸಂಗ ಹೀಗಿದೆ: ಶೆರ್ತೋಪ್‌ಖನೋವ್ ಒಮ್ಮೆ ಕುದುರೆಯ ಮೇಲೆ ಸವಾರಿ ಹೊರಟಿದ್ದ, ದಾರಿಯಲ್ಲಿ ಒಂದು ಹಳ್ಳಿ. ಅಲ್ಲೊಂದು ಹೆಂಡದಂಗಡಿ. ಅದರ ಮುಂದೆ ಹತ್ತಾರು ರೈತಜನರ ಸಂದಣಿ. ಏನೋ ಗದ್ದಲ. ಗುಂಪಿನ ಮಧ್ಯದಿಂದ ಎರಡು ಕೈಗಳು ಮೇಲೇಳುತ್ತವೆ, ಬೀಳುತ್ತವೆ. ಒಂದು, ಎರಡು, ಮೂರು, ಹೀಗೆ ಹಲವು ಬಾರಿ. ಕೈಗಳು ಬಲವಾಗಿವೆ ಮತ್ತು ಏಳುವುದು-ಬೀಳುವುದು ಒಂದೇ ಜಾಗದಲ್ಲಿ. ಯಾರೋ ಮುದುಕಿಯನ್ನು ಸವಾರ ''ಇಲ್ಲೇನು ನಡೆಯುತ್ತಿದೆ?'' ಎಂದ. ಅವಳು ತನ್ನ ಗುಡಿಸಿಲಿನ ಎದುರು ನಿಂತು, ಬಾಗಿಲಿಗೆ ಆನಿಕೊಂಡು, ನಿದ್ರಿಸುತ್ತಿದ್ದಾಳೇನೋ ಎಂಬಂತಿತ್ತು. ಅವಳೂ ಜನರ ಗುಂಪಿನತ್ತ ದೃಷ್ಟಿ ಇಟ್ಟಿದ್ದಳು. ಅವಳ ಜೊತೆ ಒಬ್ಬ ಚಿಕ್ಕ ಹುಡುಗಿ: ಹರಿದ ಬಟ್ಟೆ, ಕುತ್ತಿಗೆಗೊಂದು ಮರದ ಶಿಲುಬೆ, ಬಿಗಿಯಾಗಿ ಹಿಡಿದಿದ್ದ ಮುಷ್ಟಿ; ಕಾಲು ಚಾಚಿ ಕುಳಿತಿದೆ. ಆ ಕಡೆ ಪಕ್ಕದಲ್ಲಿ ಒಂದು ಕೋಳಿ ಏನೋ ಹುಡುಕಿ ತಿಂದುಕೊಳ್ಳುತ್ತಿದೆ. ಮುದುಕಿ ಹೇಳಿದಳು: ''ನನಗೇನೂ ತಿಳಿಯದು, ಸ್ವಾಮಿ. ನಮ್ಮ ಹುಡುಗರು ಒಬ್ಬ ಯಹೂದಿ ಹುಡುಗನನ್ನು ಚಚ್ಚುತ್ತಿದ್ದಾರೆ ಎಂದು ತೋರುತ್ತದೆ.'' ಅವನೆಂತಹ ಯಹೂದಿಯೋ, ಯಾಕೆ ಚಚ್ಚಿಸಿಕೊಳ್ಳಬೇಕೋ, ಅವನೆಲ್ಲಿಯವನೋ ತಿಳಿದವರಾರು! ಯಾರೋ ಈಚೆಗೆ ಈ ಊರಿಗೆ ಬಂದವರ ಮನೆಯವನಂತೆ. ಅವನನ್ನೇಕೆ ಹಾಗೆ ಹೊಡೆಯಬೇಕು? ಮುದುಕಿ ಹೇಳಿದಳು: ''ತಿಳಿಯದು, ಬುದ್ಧೀ. ಆದರೆ ಅವನಿಗೆ ಬೀಳಬೇಕು, ಬಿಡಿ. ಕ್ರಿಸ್ತನನ್ನು ಶಿಲುಬೆಗೆ ಏರಿಸಿದವನಲ್ಲವೆ!'' ಅಬ್ಬಾ, ಎಂತಹ ತರ್ಕ ಎನಿಸದಿರಲಿಲ್ಲ. ಎಂದೋ ಯಾರೋ ಯಾವುದೋ ಶಿಲುಬೆಗೆ ಜೀಸಸ್‌ನನ್ನು ಏರಿಸಿದ್ದಕ್ಕೆ ಈ ಹುಡುಗನಿಗೆ ಲಾತ! ಶೆರ್ತೋಪ್‌ಖನೋವ್ ಗುಂಪಿನ ಬಳಿ ಹೋದ, ಜನರನ್ನು ಚದುರಿಸುವಂತೆ ಕುದುರೆಯನ್ನು ನುಗ್ಗಿಸಿದ, ಜನರತ್ತ ತನ್ನ ಚಾಟಿಯನ್ನು ಅತ್ತಿತ್ತ ಬೀಸತೊಡಗಿದ, ಮತ್ತು ಅಬ್ಬರಿಸಿದ: ''ಏ ಪೋಕರಿಗಳಾ, ಬಿಡಿ ಅವನನ್ನು. ನಿಮಗೇನೂ ಕಾನೂನು ಇಲ್ಲವೆ? ಅವನನ್ನು ಹೊಡೆಯಲು ನೀವು ಯಾರು? ಖಾಸಗಿಯವರೇ ಹೀಗೆ ಶಿಕ್ಷೆ ನೀಡುವುದೆಂದರೇನು?'' ಎರಡು ನಿಮಿಷಗಳಲ್ಲಿ ಗುಂಪೆಲ್ಲಾ ಖಾಲಿ. ಗಡಂಗಿನ ಮುಂದೆ ಒಬ್ಬ ಕೃಶನಾದ ಚಿಕ್ಕ ಹುಡುಗ ಬಿದ್ದಿದ್ದ. ಬಿಳಿಚಿದ ಮುಖ, ಉದ್ದನೆಯ ಅಂಗಿ, ಕಣ್ಣು ಅತ್ತಿತ್ತ ಹೊರಳಿಸುತ್ತಿದ್ದ; ಸಾವನ್ನು ಕಂಡುಬಂದಿದ್ದವನಂತೆ ಸೊರಗಿದ್ದ. ಅಲ್ಲೇ ಉಳಿದಿದ್ದ ಕೆಲವರತ್ತ ಸವಾರ ಆರ್ಭಟಿಸಿದ: ''ಈ ಯಹೂದಿಯನ್ನೇಕೆ ಸಾಯುವಂತೆ ಹೊಡೆದಿದ್ದೀರಿ?'' ಅವನ ಚಾಟಿ ನೋಡಿ ಜನ ಸ್ವಲ್ಪ ಅಂಜಿದ್ದರು. ಒಬ್ಬೊಬ್ಬರೂ ಒಂದೊಂದು ಅಂಗಚೇಷ್ಟೆ ಮಾಡಿಕೊಂಡು ನಿಂತೇ ಇದ್ದರು. ''ಇವನಾರೋ ಇವನು, ಒಳ್ಳೆ ಗೂಂಡಾ ತರಹ ಇದ್ದಾನೆ?'' ಸ್ವಲ್ಪ ದೂರದಿಂದ ಒಂದು ಧ್ವನಿ. ''ಚಾಟಿಯಾಡಿಸಲು ನಿಯಮವೇನೂ ಇಲ್ಲವೆ ನಿನಗೆ?'' ಇನ್ನೊಬ್ಬನೆಂದ. ''ಇವನನ್ನೇಕೆ ಕೊಲ್ಲುವಷ್ಟು ಹೊಡೆದಿರಿ, ಮೊದಲು ಅದನ್ನು ಹೇಳಿ,'' ಎಂದ ಕುದುರೆ ಸವಾರ. ಈ ವೇಳೆಗೆ ಹಾದಿಯಲ್ಲಿ ಬಿದ್ದಿದ್ದ ಪ್ರಾಣಿ ಚಂಗನೆ ನೆಗೆದೆದ್ದ, ಸವಾರನ ಬಳಿಗೋಡಿ ಕುದುರೆಯ ಜೀನನ್ನು ಹಿಡಿದುಕೊಂಡ. ಅಲ್ಲಲ್ಲೇ ಉಳಿದಿದ್ದ ಜನ ಗೊಳ್ಳನೆ ನಕ್ಕರು: ''ಅಯ್ಯೋ ಇವನ! ಬದುಕಿದ್ದಾನೆ, ಒಳ್ಳೆ ಬೆಕ್ಕಿನ ಮರಿ.'' ತನ್ನನ್ನು ಪಾರುಮಾಡುವಂತೆ ಸವಾರನನ್ನು ಹುಡುಗ ಅಂಗಲಾಚುತ್ತಿದ್ದ. ಅವನನ್ನೇಕೆ ಹೊಡೆಯುತ್ತಿದ್ದರೆಂದು ಸವಾರ ಹುಡುಗನನ್ನೇ ಕೇಳಿದ. ಅವನ ಉತ್ತರ: ''ಗೊತ್ತಿಲ್ಲ, ದಣಿಗಳೆ. ಈ ಸುತ್ತಮುತ್ತ ಎಲ್ಲೋ ಒಂದೆರಡು ಹಸುಗಳು ಕಾಣೆಯಾಗಿವೆಯಂತೆ.'' ತಾನು ಯಾರೆಂದು ತಿಳಿಸಿ, ಹುಡುಗನನ್ನು ಹೊಡೆದವರ ಮೇಲೆ ಕ್ರಮ ಜರುಗಿಸುವುದಾಗಿ ಹೇಳಿದ ಸವಾರ. ''ದಯವಿಟ್ಟು ಬೇಡ, ಯಜಮಾನರೆ, ಬಿಟ್ಟುಬಿಡಿ. ನೀವು ನಮಗೆ ಪಾಠ ಕಲಿಸಿದ್ದೀರಿ. ಆ ಹುಡುಗನನ್ನು ಈಗೇನೂ ಮಾಡುವುದಿಲ್ಲ. ಬೇಕಾದರೆ ಮುಂದೊಂದು ದಿನ ಮತ್ತೆ ಅವನನ್ನು ನೋಡಿಕೊಳ್ಳುತ್ತೇವೆ.''

– ಎಲ್ಲಿಯದೋ ಪ್ರಸಂಗ. ಆದರೆ ನಮ್ಮ ನಡುವೆ ನಡೆಯುತ್ತಿದೆಯೇನೋ ಎನಿಸುತ್ತದೆ. ಕೆಲವು ವರ್ಷಗಳ ಹಿಂದೆ ಉತ್ತರ ಪ್ರದೇಶದ ಅಮ್ರಾ ಎಂಬ ಹಳ್ಳಿಯಲ್ಲಿ ಒಬ್ಬ ಹೆಂಗಸನ್ನು ಅವಳದೇ ಸೀರೆಯಿಂದ ಬೆತ್ತಲೆಯಾಗಿ ನೇಣುಹಾಕಿದ್ದರು. ಪಕ್ಕದ ಯಾವುದೋ ಊರಲ್ಲಿ ಒಂದೆರಡು ದನ ಇಲ್ಲವಾಗಿದ್ದುವಂತೆ, ಅದಕ್ಕೆ. ಈ ಹೊತ್ತು ಸವಾರನ ಪ್ರಸಂಗ ದಕ್ಷಿಣ ಕನ್ನಡ ಜಿಲ್ಲೆಯನ್ನು ನೆನಪಿಗೆ ತರುವಂತಾಗಿರುವುದು ಅವಮಾನದ ಸಂಗತಿ.

*ಈ ತಿಂಗಳು (೩ನೇ ಪುಟದಿಂದ)*

ಭಗವದ್ಭಕ್ತಿ ಎಂದು ಉಲ್ಲಸಿತರಾಗುವವರೂ ನಮ್ಮಲ್ಲಿದ್ದಾರೆ. ಬೇರೆ ದೇಶಗಳಲ್ಲಿ ಹತ್ತೋ ಇಪ್ಪತ್ತೋ ವರ್ಷಗಳ ಹಿಂದೆ ನಡೆಸಲಾದ ಪ್ರಯೋಗಗಳನ್ನು ಭಾರತದಲ್ಲಿ ಇಂದು ನಡೆಸಲು ಗುರುವಾಯೂರು ಏಕೆ ಬೇಕೆಂದು ಅಚ್ಚರಿ ವ್ಯಕ್ತಪಡಿಸುವವರಿಗೂ ಕಮ್ಮಿಯಿಲ್ಲ. "ಅಜ್ಞಾನ ತಿಮಿರಾಂಧ" ಎಂಬ ನಾಮಧೇಯ ಪಡೆಯಲು ವಿಜ್ಞಾನಿಗಳ ನೇತೃತ್ವ ವಹಿಸಿರುವವರು ರಾಧಾಕೃಷ್ಣನ್.

* * *

ಈಚಿನ ಕೆಲವು ಸ್ವಾರಸ್ಯಕರ ವರದಿಗಳು ಗಮನಾರ್ಹವಾಗಿವೆ: ಒಂದು ಕಡೆ ಸ್ವಯಂ ಆಸ್ತಿ ಘೋಷಿಸಲು ನ್ಯಾಯಮೂರ್ತಿಗಳ ತಕರಾರು, ಇನ್ನೊಂದೆಡೆ ಒಬ್ಬರ ನಂತರ ಇನ್ನೊಬ್ಬರಂತೆ ನ್ಯಾಯಮೂರ್ತಿಗಳು ಕೆಲವು ಮೊಕದ್ದಮೆಗಳಿಂದ ಹಿಂದೆ ಸರಿಯುವುದು. ಹಾಗೆ ಹಿಂದೆ ಸರಿಯಲು ಕಾರಣ ಅವರೆಲ್ಲಾ ಬೇರೆ ಬೇರೆ ದೊಡ್ಡ ಕಂಪನಿಗಳ ಷೇರುದಾರರಾಗಿರುವುದು. ಒಬ್ಬ ನ್ಯಾಯಮೂರ್ತಿಗಳಿಗಂತೂ, ಪಾಪ, ಅವರ ಮಗಳು ರಿಲೈಯನ್ಸ್ ಕಂಪನಿಯ ಜೊತೆ ವ್ಯವಹಾರವನ್ನಿಟ್ಟುಕೊಂಡಿರುವ ಕಂಪನಿಯೊಂದರಲ್ಲಿ ಕೆಲಸಕ್ಕಿದ್ದಾಳೆಂಬುದು ಕೂಡ ಗೊತ್ತಿರಲಿಲ್ಲವಂತೆ! ಆ ಕಂಪನಿಯನ್ನು ಕುರಿತ ಮೊಕದ್ದಮೆಯಿಂದ ಹಿಂದೆ ಸರಿಯಲು ಅವರಲ್ಲದೆ ಇನ್ನೂ ಕೆಲವು ಬೇರೆ ನ್ಯಾಯಮೂರ್ತಿಗಳು ಮುಂದೆ ಬಂದಿದ್ದಾರೆ: ಒಬ್ಬರ ಪತ್ನಿ ಅಲ್ಲಿಯ ಷೇರುದಾರಳು, ಇನ್ನೊಬ್ಬರು ಸ್ವತಃ ಷೇರುದಾರರು. ಒಟ್ಟಿನಲ್ಲಿ, ಎಲ್ಲರೂ ಒಂದಲ್ಲ ಒಂದು ಕಂಪನಿಯ ಷೇರುದಾರರಾಗಿಬಿಟ್ಟರೆ ಇನ್ನು ಕಂಪನಿಗಳ ವಿರುದ್ಧ ಮೊಕದ್ದಮೆ ಜರುಗಿಸಲು ನ್ಯಾಯಮೂರ್ತಿಗಳನ್ನು ಎಲ್ಲಿಂದ ತರಬೇಕು! ಪ್ರಶಾಂತ ಭೂಷಣ ಎಂಬ ವಕೀಲರ ವಿರುದ್ಧ ನ್ಯಾಯಾಂಗ ನಿಂದನೆ ಆರೋಪವನ್ನು ಹೊರಿಸಿದ ಸರ್ವೋಚ್ಚ ನ್ಯಾಯಾಲಯವು ಇದಕ್ಕೂ ಗಮನ ನೀಡಬೇಕಾಗಿದೆ. ಅದೇನೇ ಇರಲಿ, ರಿಲೈಯನ್ಸ್ ಕಂಪನಿಯ ಸದ್ಯದ ಮೊಕದ್ದಮೆಯು ಅನೇಕ ಲಕ್ಷ ಕೋಟಿ ರೂಪಾಯಿಗಳ ವಹಿವಾಟಿಗೆ ಸಂಬಂಧಿಸಿದ್ದು. "ನಮಗೆ ನ್ಯಾಯ ಕೊಡಿ" ಎಂದು ಕಂಪನಿ ಸರ್ವೋಚ್ಚ ನ್ಯಾಯಾಲಯದೆದುರು ಹೋದರೆ ನ್ಯಾಯಾಲಯ ಅದಕ್ಕೆ ಬುದ್ಧಿವಾದ ಹೇಳಿದೆ, "ನ್ಯಾಯಾಲಯದ ಹೊರಗೆ ಸಂಧಾನ ನಡೆಸಿ ವಿವಾದ ಪರಿಹರಿಸಿಕೊಳ್ಳಿ" ಎಂದು. ಕಂಪನಿಗಳ ಹಿರಿಮೆ ಎಂದರೆ ಇದು! ಸಾಮಾನ್ಯ ಕಕ್ಷಿದಾರರಾದರೆ ನ್ಯಾಯಾಲಯ ಹೀಗೆ ಹೇಳುವುದು ಶಕ್ಯವೆ?

* * *

ವಿಶ್ವಸಂಸ್ಥೆಯ ಇತಿಹಾಸದಲ್ಲಿ ಸಾಮಾನ್ಯ ಸಭೆಯ ಸದಸ್ಯರ ಬಹುಮತದ ಅಭಿಪ್ರಾಯಕ್ಕೂ ಭದ್ರತಾ ಸಮಿತಿಯ ಅಭಿಪ್ರಾಯಕ್ಕೂ ಸಾಮರಸ್ಯವಿರುವುದು ಕಡಿಮೆ. ಸರ್ವಸದಸ್ಯರ ಸಭೆಯಲ್ಲಿ ಎಲ್ಲ ದೇಶಗಳೂ ಇರುತ್ತವೆ, ಭದ್ರತಾ ಸಮಿತಿಯಲ್ಲಿ ಕೆಲವೇ ರಾಷ್ಟ್ರಗಳಿರುತ್ತವೆ. ಆದಾಗ್ಯೂ ಭದ್ರತಾ ಮಂಡಲಿಯ ಮಾತೇ ಬಲವಾದುದು. ಇದೊಂದು ವಿಚಿತ್ರವಾದ ಪ್ರಜಾಪ್ರಭುತ್ವ ಮಾದರಿ. ಭದ್ರತಾ ಮಂಡಲಿಯ ತೀರ್ಮಾನಗಳಿಗೆ ಐದು ಖಾಯಂ ಸದಸ್ಯ ರಾಷ್ಟ್ರಗಳು ಬೆಂಬಲ ನೀಡಿದರೆ ಮಾತ್ರ ಅವು ಸಿಂಧುವಾಗುತ್ತವೆ; ಯಾವೊಂದು ರಾಷ್ಟ್ರ ಅದನ್ನು ವಿರೋಧಿಸಿದರೂ ತೀರ್ಮಾನ ಬಿದ್ದುಹೋಗುತ್ತದೆ. ಎರಡು ವಿದ್ಯಮಾನಗಳು ನಮ್ಮ ಮುಂದಿವೆ: ಒಂದು ಕ್ಯೂಬಾ, ಇನ್ನೊಂದು ಗೋಲ್ಡ್‌ಸ್ಟನ್ ವರದಿ. ಇವೆರಡರಲ್ಲೂ ವಿಶ್ವಸಂಸ್ಥೆಯ ಸಾಮಾನ್ಯ ಸಭೆಯ ನಿಲುವಿಗೂ ಭದ್ರತಾ ಸಮಿತಿಯ ನಿಲುವಿಗೂ ವಿರೋಧವಿದೆ. ಕ್ಯೂಬಾ ಮೇಲಿನ ಆರ್ಥಿಕ ದಿಗ್ಬಂಧನವನ್ನು ತೆರವುಗೊಳಿಸಬೇಕೆಂದು ಸಾಮಾನ್ಯ ಸಭೆ ಹಲವು ವರ್ಷಗಳಿಂದಲೂ ಪ್ರತೀ ವರ್ಷ ತೀರ್ಮಾನ ನೀಡುತ್ತಲೇ ಬಂದಿದೆ; ಅದನ್ನು ಭದ್ರತಾ ಮಂಡಲಿಯಲ್ಲಿ ಒಂದೇ ಒಂದು ರಾಷ್ಟ್ರ – ಅಮೆರಿಕಾ – ವಿರೋಧಿಸುತ್ತದೆ. ಆ ಒಂದು ರಾಷ್ಟ್ರದ ಬಿಗಿತನದ ಮುಂದೆ ನೂರಾರು ರಾಷ್ಟ್ರಗಳ ಧ್ವನಿ ಮುರುಟಿಹೋಗುತ್ತದೆ. ಗೋಲ್ಡ್‌ಸ್ಟನ್ ವರದಿಯ ಗತಿಯೂ ಅದೇ: ಪ್ಯಾಲಿಸ್ಟೈನಿನಲ್ಲಿ ಇಸ್ರೇಲ್ ನರಹಂತಕ ಪಾತಕಗಳನ್ನು ಎಸಗಿದೆಯೆಂದು ಪುರಾವೆ ಸಹಿತವಾಗಿ ಗೋಲ್ಡ್‌ಸ್ಟನ್ ಆಯೋಗ ತಿಳಿಸಿದೆ, ಅದನ್ನು ವಿಶ್ವಸಂಸ್ಥೆಯ ಸಾಮಾನ್ಯ ಸಭೆ ಅತಿದೊಡ್ಡ ಬಹುಮತದಿಂದ ಅಂಗೀಕರಿಸಿದೆ. (ಅಮೆರಿಕಾದ "ಬಗಲು ಬಚ್ಚಾ" ಆಗುತ್ತಿರುವ ಮನಮೋಹನ ಸಿಂಗ್ ನೇತೃತ್ವದ ಭಾರತ ಸರ್ಕಾರವು ಬಹುಮತದ ರಾಷ್ಟ್ರಗಳಿಂದ ದೂರ ಸರಿದು ತಾನು ಅಲಿಪ್ತವಾಗಿ ಉಳಿಯುವ ನಾಚಿಕೆಗೇಡಿನ ತೀರ್ಮಾನ ಕೈಗೊಂಡಿದೆ). ಆದರೆ ಇಸ್ರೇಲಿನ ಪೋಷಕ ದೇಶವಾದ ಅಮೆರಿಕಾ, ಭದ್ರತಾ ಮಂಡಲಿಯಲ್ಲಿ ಗೋಲ್ಡ್‌ಸ್ಟನ್ ವರದಿಯನ್ನು ವಿರೋಧಿಸಿ ಅದನ್ನು ಬುಟ್ಟಿಗೆ ಹಾಕಿ ಅದುಮಿ ಹಿಡಿದಿದೆ. ಅಂದರೆ, ಪ್ರಪಂಚದಲ್ಲಿ ಪಾತಕವೆಸಗಲು ಅಡ್ಡಿಯಿಲ್ಲ, ಅದಕ್ಕೆ ಅಮೆರಿಕಾದ ಬೆಂಬಲ ಇರಬೇಕೆಂಬ ನಿಯಮವಿದೆ, ಅಷ್ಟೆ. ಇದು ಆಚರಣೆಯಲ್ಲಿರುವ ವಿಶ್ವ-ಪ್ರಜಾಪ್ರಭುತ್ವ! ಪ್ರಜಾಪ್ರಭುತ್ವಕ್ಕೆ ಅಮೆರಿಕಾ ಮಾದರಿಯೆಂದು ಭ್ರಮಿಸುವುದು ಎಷ್ಟು ಅಸಂಬದ್ಧ ಎಂಬುದಕ್ಕೆ ಇದೊಂದು ಜೀವಂತ ನಿದರ್ಶನ.

* * *

ನಮ್ಮ ದೇಶದಲ್ಲಿ ಜಾಗತೀಕರಣದ ಪ್ರಭಾವ, ವಿಶೇಷ ಆರ್ಥಿಕ ವಲಯಗಳ ದೌರ್ಜನ್ಯ, ಜನವಿರೋಧಿ ಕುಕೃತ್ಯಗಳು, ಇವೆಲ್ಲಾ ದಿನನಿತ್ಯದ ಸಮಾಚಾರ. ದಕ್ಷಿಣ ಕನ್ನಡ ಜಿಲ್ಲೆಯೊಂದರಲ್ಲೇ ವಿಶೇಷ ಆರ್ಥಿಕ ವಲಯಕ್ಕಾಗಿ ಸುಮಾರು ಒಂದು ಲಕ್ಷ ಎಕರೆ ಭೂಮಿಯನ್ನು ಜನರಿಂದ ಕಿತ್ತುಕೊಳ್ಳುವ ಸರ್ಕಾರದ ಹುನ್ನಾರ ಪ್ರಸಿದ್ಧವಾಗಿದೆ. ಜನರ ಸಾಮೂಹಿಕ ವಿರೋಧ ಸದ್ಯಕ್ಕೆ ಅದನ್ನು ತಡೆಗಟ್ಟಿದೆ. ನಾರಾಯಣಮೂರ್ತಿಗಳ ಇನ್ಫೋಸಿಸ್‌ಗೋ ಅಂತಹ ಬೇರಾವುದೋ ಕಂಪನಿಗೋ ಸರ್ಕಾರವು ಜನರಿಂದ ಭೂಮಿ ವಶಪಡಿಸಿಕೊಂಡು ಕೊಟ್ಟರೆ ಅಲ್ಲಿ ಕಂಪನಿಗಳು ಏನೆಲ್ಲಾ ನಿರ್ಮಿಸುತ್ತವೆ? ಒಂದಷ್ಟು ಮಹಡಿಗಳ ಮನೆಗಳು, ಮೂರೋ ನಾಲ್ಕೋ ಕ್ಲಬ್ಬುಗಳು, ಒಂದೆರಡು ಈಜುಕೊಳಗಳು, ಗಾಲ್ಫ್ ಆಡಲು ಒಂದು ಕ್ರೀಡಾಲೋಕ, ಆಮೇಲೆ ಕೆಲವು ಕಚೇರಿಗಳು, ಇವೆಲ್ಲಾ ಸೇರಿರುತ್ತವೆಂದು ಹೇಳುತ್ತಾರೆ. ಯಾವನೋ ಗಾಲ್ಫ್ ಆಡಲು ಜನರು ಕೃಷಿ ಜಮೀನು ಕಳೆದುಕೊಳ್ಳುವುದು ಸರಿಯೆ? ಇದನ್ನು ಹಲವು ವರ್ಷಗಳಿಂದ ಚರ್ಚಿಸಲಾಗುತ್ತಿದೆ. ಕೆಲವರು ಪ್ರತಿಭಟಿಸುತ್ತಾ ಬಂದಿದ್ದೇವೆ, ಮತ್ತೆ ಕೆಲವರು ಪ್ರತಿಭಟನೆಯನ್ನು ವಿರೋಧಿಸಿದ್ದಾರೆ, ಇನ್ನೂ ಕೆಲವರು ತಮಗೆ ಸಂಬಂಧಿಸಿದ್ದಲ್ಲವೆಂದು ಕಣ್ಣುಮುಚ್ಚಿ ಕಂಪನಿಗಳ ಧ್ಯಾನದಲ್ಲಿ ಮಗ್ನರಾಗಿದ್ದಾರೆ.

ಹೀಗಿರುವಾಗ, ವಿಯೆಟ್ನಾಂನಿಂದ ಒಂದು ಆಘಾತಕರ ಸುದ್ದಿ ಬಂದಿದೆ. ಹನಾಯ್ ವಿಮಾನ ನಿಲ್ದಾಣದಿಂದ ನಗರದೊಳಕ್ಕೆ ಪ್ರವೇಶಿಸಲು ಹೊರಟರೆ ದಾರಿಯುದ್ದಕ್ಕೂ ಇಕ್ಕೆಲಗಳಲ್ಲೂ ಬೃಹದಾಕಾರವಾಗಿ ಎದ್ದುನಿಂತಿರುವ ಬಹುರಾಷ್ಟ್ರೀಯ ಕಂಪನಿಗಳ ಕಟ್ಟಡಗಳನ್ನು ನೋಡಬಹುದು. ಅವುಗಳ ವ್ಯವಹಾರಗಳನ್ನು ಆ ದೇಶದ ಸಮಾಜವಾದಿ ಸರ್ಕಾರ ನಿಯಂತ್ರಿಸುತ್ತದೆಯಾದ್ದರಿಂದ ಭೀಕರ ಪರಿಣಾಮಗಳೇನೂ ಇಲ್ಲವೆಂದು ಹೇಳುತ್ತಾರೆ. ಅದರ ಸತ್ಯಾಸತ್ಯತೆಯ ವಿಶ್ಲೇಷಣೆ ಇಲ್ಲಿಯ ಪ್ರಕೃತದ ಉದ್ದೇಶವಲ್ಲ, ಉದ್ದೇಶ ಇರುವುದು ಬೇರೊಂದು ಸುದ್ದಿಯ ಬಗ್ಗೆ ಗಮನ ಹರಿಸುವುದು, ಅಷ್ಟೆ. ಸುದ್ದಿ ಹೀಗಿದೆ: ವಿಯೆಟ್ನಾಮಿನ ಹಳ್ಳಿಗಳಲ್ಲಿ ಕೆಲವು ಇನ್ನೂ ಅನಭಿವೃದ್ಧಿ ಹಂತದಲ್ಲಿವೆ. ಅಲ್ಲಿಯ ವಸತಿ ಸೌಕರ್ಯ ಇನ್ನೂ ಹಿಂದಿನ ಕಾಲದ್ದೇ ಆಗಿದೆ. ಜನರು ಕೃಷಿಯನ್ನು ಆಧರಿಸಿ ಬದುಕುತ್ತಿದ್ದಾರೆ. ನಿರುದ್ಯೋಗ, ಬಡತನ ಅಷ್ಟು ಕ್ರೂರವಾಗಿಲ್ಲ, ಆದರೆ ಜನ ದಾಪುಗಾಲು ಹಾಕಿ ಬಹಳ ಉನ್ನತಮಟ್ಟದ ಪ್ರಗತಿಯನ್ನು ಸಾಧಿಸಿಲ್ಲ. ಇಂತಹ ಕೆಲವು ಹಳ್ಳಿಗಳ ಬಳಿ ಹಲವು ಎಕರೆ ವಿಸ್ತೀರ್ಣದ ಭೂಮಿಯನ್ನು ನಗರಗಳ ಪ್ರತಿಷ್ಠಿತ ಬಹುರಾಷ್ಟ್ರೀಯ ಕಂಪನಿಗಳಲ್ಲಿ ಉನ್ನತ ಹುದ್ದೆಗಳಲ್ಲಿರುವವರಿಗಾಗಿ ಸರ್ಕಾರವು ವಶಪಡಿಸಿಕೊಳ್ಳಲಿದೆ.

ಏತಕ್ಕಾಗಿ ಈ ವಶಪಡಿಸಿಕೊಳ್ಳುವಿಕೆ? ಕೃಷಿಯನ್ನು ಆಧುನಿಕಗೊಳಿಸಲು ಅಲ್ಲ, ಆ ಹಳ್ಳಿಗಳ ಜನರ ಪುರೋಭಿವೃದ್ಧಿಗಾಗಿ ಆಧುನಿಕ ಕಾರ್ಖಾನೆಗಳನ್ನು ನಿರ್ಮಿಸಲು ಅಲ್ಲ, ಹಳ್ಳಿಗರ ಆಟಪಾಟಗಳಿಗಾಗಿ ಸಮೃದ್ಧ ಕ್ರೀಡಾಂಗಣ ರಚಿಸಲು ಅಲ್ಲ, ಅಥವಾ ಹಳ್ಳಿಗರ ವಸತಿಗಳನ್ನು ಪರ್ಯಾಯ ರೂಪದಲ್ಲಿ ನಿರ್ಮಿಸಲು ಅಲ್ಲ. ಇಂತಹ ಕೆಲವು ಹಳ್ಳಿಗಳ ಆಸುಪಾಸಿನಲ್ಲಿ ಸುಮಾರು ಮೂರರಿಂದ ಐದು ಸಾವಿರ ಕುಟುಂಬಗಳನ್ನು ಹೊರದೂಡುವ "ಯೋಜನೆ" ಇದೆ. ಅಷ್ಟೆಲ್ಲಾ ಮಾಡಲು ಒಂದೇ ಕಾರಣವೆಂದರೆ ಹತ್ತಿರದ ನಗರಗಳ ಬಹುರಾಷ್ಟ್ರೀಯ ಕಂಪನಿಗಳವರಿಗೆ ಆಟವಾಡಲು ಗಾಲ್ಫ್ ಕೋರ್ಸ್ ಬೇಕಂತೆ, ಅದಕ್ಕಾಗಿ ಈ ಕಾರ್ಯಕ್ರಮವಂತೆ.

ಈ ಸುದ್ದಿ ನಿಜವಲ್ಲವೆಂದು ಕೆಲವರು ಸಮಾಧಾನ ಹೇಳಿಕೊಳ್ಳುವುದುಂಟು. ಯಾವುದೇ ಕಾರಣಕ್ಕಾಗಲಿ ನಿರ್ವಸಿತರಾದವರಿಗೆ ಪರ್ಯಾಯ ಕಲ್ಪಿಸಿಕೊಡಲು ಸಮಾಜವಾದಿ ವಿಯೆಟ್ನಾಂ ಸರ್ಕಾರವು ಸಮರ್ಥವಾಗಿದೆ ಎಂಬ ಮಾತು ಸಹ ನಿಜವೇ ಇರಬಹುದು. ಆದರೆ ಅನಭಿವೃದ್ಧ ಹಳ್ಳಿಗಳನ್ನು ಗಾಲ್ಫ್ ಕೋರ್ಸ್ ಆವರಿಸಬೇಕೆ ಎಂಬ ಪ್ರಶ್ನೆಗೆ ಅದು ತೃಪ್ತಿ ನೀಡುವ ಉತ್ತರವಲ್ಲ. ಉತ್ಪಾದಕ ಘಟಕಗಳನ್ನು ಸ್ಥಾಪಿಸಲು ಬಹುರಾಷ್ಟ್ರೀಯ ಕಂಪನಿಗಳಿಗೆ ಗಾಲ್ಫ್ ಕೋರ್ಸ್ ಕಡ್ಡಾಯವಾಗಿ ನೀಡಬೇಕೆಂಬ ನಿಯಮ ಇದೆಯೆ? ವಿಯೆಟ್ನಾಂನಂತಹ ದೇಶವು ಅದನ್ನು ಗೌರವಿಸಬೇಕೆ? ಮಾರುಕಟ್ಟೆ ಸಂಸ್ಕೃತಿಯು ಜನಪದ-ಜನಪರ ಸಂಸ್ಕೃತಿಯನ್ನು ಹೊಸಕಿಹಾಕಿದರೆ ಆಮೇಲೆ ಮುಂದಿನ ಹಾದಿ ಯಾವುದು? ಉತ್ತರ ಸರಳವಲ್ಲ. ಕೆಲವರು ಚೀಣಾ ಮಾದರಿಗೆ ಎದುರಾಗಿ ಕ್ಯೂಬಾ ಮಾದರಿಯನ್ನು ನಿಲ್ಲಿಸುತ್ತಾರೆ. ಮನಮೋಹನ ಸಿಂಗ್ ಮಾದರಿ ಇವೆರಡಕ್ಕಿಂತಲೂ ಅತ್ತತ್ತ!




## ನವೆಂಬರ್ ಸಂಚಿಕೆ

'ಹೈಕೋರ್ಟು ತೀರ್ಪು' ಬಗ್ಗೆ ಡಾ॥ ರಂಗನಾಥ ಕಂಟನಕುಂಟೆ ಅವರ ಲೇಖನದ ಬಗ್ಗೆ ಈ ಪತ್ರ :

'ನ್ಯಾಯ ನೀಡುವ ಕೋರ್ಟಿನ ಭಾಷೆಯನ್ನು ಕನ್ನಡವಾಗಿಸಬೇಕಿದೆ' ಎಂದಿದ್ದಾರೆ ಲೇಖಕರು. ೧೯೭೩ ರಿಂದ ನ್ಯಾಯಾಲಯಗಳಲ್ಲಿ ಕೆಲಸ ಮಾಡುತ್ತಿರುವ ನನ್ನ ಅನುಭವ ಹೀಗಿದೆ :

ಬ್ರಿಟಿಷರ ಕಾಲದಲ್ಲಿ ಬಹಳಷ್ಟು ನ್ಯಾಯಾಲಯಗಳಲ್ಲಿ ಕನ್ನಡವು ಬಳಕೆಯಾಗುತ್ತಿತ್ತು. ಪ್ರತಿವಾದಿಗಳಿಗೆ ನೀಡುತ್ತಿದ್ದ ಸಮನ್ಸ್ ಮೊದಲಾದವುಗಳನ್ನು ಕನ್ನಡದಲ್ಲಿ ಪೂರೈಸಲಾಗುತ್ತಿತ್ತು.

ಬ್ರಿಟಿಷರ ಆಳ್ವಿಕೆ ಕೊನೆಗೊಂಡಂತೆ ನಮ್ಮ ನ್ಯಾಯಾಧೀಶರ, ನ್ಯಾಯವಾದಿಗಳ, ನ್ಯಾಯಾಲಯದ ಸಿಬ್ಬಂದಿಯ ಆಂಗ್ಲ ಭಾಷಾ ವ್ಯಾಮೋಹ ಹೆಚ್ಚುತ್ತಲೇ ಬಂತು. ಆಂಗ್ಲ ಭಾಷೆಯ ಬಳಕೆಗೇ ಜೋತುಬಿದ್ದ ಜನರು ನ್ಯಾಯಾಲಯದಲ್ಲಿ ಕನ್ನಡವನ್ನು ಬಳಸಲು ಸುತರಾಂ ಒಪ್ಪುತ್ತಿಲ್ಲ.

ರಾಜ್ಯ ಭಾಷೆಯಾದ ಕನ್ನಡವನ್ನು ರಾಜ್ಯಭಾಷಾ ವರ್ಷದ ಅಂಗವಾಗಿ ಎಲ್ಲ ಅಧೀನ ನ್ಯಾಯಾಲಯಗಳಲ್ಲಿ ೧.೧೧.೨೦೦೩ರ ವೇಳೆಗೆ ನೂರಕ್ಕೆ ನೂರು ಬಳಸಲು ಪ್ರಾರಂಭಿಸತಕ್ಕದ್ದೆಂದು ೩.೧.೩..೨೦೦೩ರಂದು ಕರ್ನಾಟಕದ ಉಚ್ಚ ನ್ಯಾಯಾಲಯವು ನೀಡಿದ ಎಲ್‌ಸಿವಿ-I/೨೦೧/೨೦೦೨ ಕ್ರಮಸಂಖ್ಯೆಯ ಸುತ್ತೋಲೆ ಬಂದಿದ್ದರೂ ಬಹುತೇಕ ನ್ಯಾಯಾಲಯಗಳ ಪಾಲಿಗದು 'ಸತ್ತೋಲೆ' ಆಗಿದೆ ! ಈ ಮಧ್ಯೆ ಕನ್ನಡ ಅಭಿವೃದ್ಧಿ ಪ್ರಾಧಿಕಾರವು ಕನ್ನಡ ತೀರ್ಪು ನೀಡುವ ೫೦ ಮಂದಿ ನ್ಯಾಯಾಧೀಶರಿಗೆ ತಲಾ ಹತ್ತು ಸಾವಿರ ನಗದೂ ಸೇರಿದಂತೆ ಪ್ರಶಸ್ತಿಪತ್ರವನ್ನು ನೀಡಲಾರಂಭಿಸಿದೆ. ಇಷ್ಟಾದರೂ ವಕೀಲರ ವೃಂದಕ್ಕೆ, ಅಧಿಕಾರಿಗಳಿಗೆ ಮತ್ತು ಸಿಬ್ಬಂದಿ ವರ್ಗದ ಹಲವರಿಗೆ ಕನ್ನಡವೆಂದರೆ ಬೇಡದ ಭಾಷೆಯಾಗಿದೆ.

ಕನ್ನಡ ಬಳಸದವರಿಗೆ ವಾರ್ಷಿಕ ವೇತನದ ಹೆಚ್ಚಳವನ್ನು ತಡೆಹಿಡಿದರಷ್ಟೆ ನಮ್ಮೀ ಮಂದಿ ಕನ್ನಡ ಬಳಸಲು ಪ್ರಾರಂಭ ಮಾಡಬಹುದು.

ಮೈಸೂರು **ಕೊ. ಸು. ನರಸಿಂಹಮೂರ್ತಿ**

### ಸೃಷ್ಟಿ !

ಮಂತ್ರಾಲಯ ಸ್ವಾಮಿಗಳು ಭಕ್ತಾದಿಗಳನ್ನು ಅಕ್ಷರಶಃ ನಡುನೀರಿನಲ್ಲಿ ಕೈಬಿಟ್ಟು ಪಾರಾದುದನ್ನು ಅಥವಾ ಪರಾರಿಯಾದುದನ್ನು 'ಈ ತಿಂಗಳು' ಟೀಕಿಸಿದ್ದು ಅನುಚಿತ ! ಸ್ವಾಮಿಗಳು ಸುರಕ್ಷಿತವಾಗಿದ್ದರೆ, ಮಂತ್ರದಿಂದ ಪ್ರಳಯದಲ್ಲೂ ಮಾಡಬಲ್ಲರಲ್ಲವೆ ನವಸೃಷ್ಟಿ? (ಅವರ ಮಹಿಮೆಯೇನಲ್ಲ ಖೊಟ್ಟಿ!)

ಮೈಸೂರು **ಸಿ. ಪಿ. ಕೆ.**

### ನೈತಿಕತೆ

'ಈ ತಿಂಗಳು' ನಾಡಿನ, ದೇಶದ ಜವಾಬ್ದಾರಿ, ಬದ್ಧತೆ, ನೈತಿಕತೆ ಇತ್ಯಾದಿ ಆದ್ಯತೆಗಳನ್ನು ಬಹಳ ಸಾವಧಾನದಿಂದ ಎಚ್ಚರಿಸಿದೆ. ಒಬ್ಬ ಪ್ರಜೆಯಾಗಿ, ಪ್ರಜ್ಞಾವಂತ ಓದುಗನಾಗಿ ತನ್ನ ಮಿತಿಯಲ್ಲಿ ಎಷ್ಟು ಹಾಗೂ ಹೇಗೆ ಆತ್ಮಾವಲೋಕನ ಮಾಡಿಕೊಂಡು ನಾಡಿನ ಮತ್ತು ದೇಶದ ಒಟ್ಟು ಏಳ್ಗೆಗೆ ಶ್ರಮಿಸಬಹುದು ಮತ್ತು ಬದ್ಧನಾಗಬಹುದೆಂಬುದು ಅವರವರ ವಿವೇಚನೆಗೆ ಬಿಟ್ಟಿದ್ದು. ಆದರೆ ಒಂದಂತೂ




ನಿಜ : ಸತ್ಯವನ್ನು ಸತ್ಯವೆಂದು ಒಪ್ಪುವುದರ ಜೊತೆಗೆ ಸೂಕ್ತವಾಗಿ ಸ್ಪಂದಿಸದಿದ್ದರೆ ಅದಕ್ಕಿಂತ ದೊಡ್ಡ ಭಂಡತನ, ಭ್ರಷ್ಟಾಚಾರ ಮತ್ತಾವುದೂ ಇರದು. ಈ ಹಿನ್ನೆಲೆಯಲ್ಲಾದರೂ ನಾಡಿನ ಶಾಸಕಾಂಗ, ಕಾರ್ಯಾಂಗ, ನ್ಯಾಯಾಂಗಗಳ ಅಂತರಂಗದ ಕಣ್ಣು ತೆರೆಯುವಂತಾಗಲಿ ಎಂದೇ ಆಶಿಸೋಣ.

ಚಿತ್ರದುರ್ಗ **ಚನ್ನಬಸವ ಪುತ್ತೂರ್ಕರ**

### ಶಿಕ್ಷಣ ವ್ಯವಸ್ಥೆಯಲ್ಲಿ ಗುಲಾಮಿ ಸಂಸ್ಕೃತಿ

'ಸ್ವಲ್ಪ ಆ್ಯಡ್‌ಜಸ್ಟ್ ಮಾಡಿಕೊಳ್ಳುವ' ಎನ್ನುವ ಸಂಸ್ಕೃತಿಯನ್ನು ಭಾರತೀಯರು ಅಭ್ಯಾಸಮಾಡಿಕೊಂಡು ಜೀವನದಲ್ಲಿ ಅಳವಡಿಸಿಕೊಂಡ ಪರಿಣಾಮವಾಗಿ, ಪ್ರತಿಭಟನೆ ಹಾಗೂ ಸ್ವಾತಂತ್ರ್ಯ ಒಂದೇ ನಾಣ್ಯದ ಎರಡು ಮುಖಗಳು ಎನ್ನುವ ಸಮಾಜಶಾಸ್ತ್ರದ ಮೂಲ ಮಂತ್ರವನ್ನು ಮರೆತು ಹುಲಿಯಾಗಿರಬೇಕಾದ ಸಂದರ್ಭಗಳಲ್ಲಿ ಇಲಿಗಳಾಗಿ ಇಲ್ಲದ ಉಸಾಬರಿ ನಮಗೇಕೆ ಎನ್ನುವ ತತ್ವವನ್ನು ಪರಿಪಾಲಿಸುವುದರಿಂದಾಗಿ ಶಿಕ್ಷಣ ವ್ಯವಸ್ಥೆಯಲ್ಲಿ ಗುಲಾಮಿತನ ವಿಜೃಂಭಿಸುತ್ತದೆ. ಗುರುಗಳ ಘನತೆ ಇರುವುದು ವಿದ್ವತ್ತು, ಚಾರಿತ್ರ್ಯದಿಂದ ಕೂಡಿದ ಸ್ವಾತಂತ್ರ್ಯ ಮತ್ತು ಬೋಧನ ಶಕ್ತಿಗಳಲ್ಲಿಯೇ ಹೊರತು ಜೀ ಹುಜೂರ್ ಎನ್ನುವ ಸ್ವಭಾವ ಮತ್ತು ಸಂಬಳದಲ್ಲಿ ಅಲ್ಲ ಎನ್ನುವ ತಿಳಿವಳಿಕೆ ಮುಖ್ಯವಾದುದು. ಪ್ರಾಮಾಣಿಕತೆ, ಪರಿಶುದ್ಧತೆ, ಸ್ವಾಭಿಮಾನ ಹಾಗೂ ಆತ್ಮಗೌರವಗಳನ್ನು ಬೆಳೆಸಿಕೊಂಡು ಬೆಲ್ ಮತ್ತು ಬಿಲ್‌ಗಳಿಗಾಗಿ ಕಾಯದೆ ವಿದ್ಯಾರ್ಥಿಗಳ ಸರ್ವತೋಮುಖ ಅಭಿವೃದ್ಧಿಗಾಗಿ ಶ್ರಮಿಸುತ್ತಾ ಬದಲಾವಣೆಗಳ ಹರಿಕಾರರಾಗಿ ನಿತ್ಯ ನಿರಂತರವಾಗಿ ಅಕ್ಷರ ದಾಸೋಹದಲ್ಲಿ ಶಿಕ್ಷಕರು ನಿರತರಾದಾಗ ಮಾತ್ರ ಗುಲಾಮಿ ಸಂಸ್ಕೃತಿಯ ಬಂಧನದಿಂದ ಬಿಡುಗಡೆ ಸಾಧ್ಯವಾದೀತು.

ಮೈಸೂರು **ನರೇಂದ್ರ ಸಿರಕಜೆ**

### ತಿದ್ದುಪಡಿ

ನವೆಂಬರ್ ಸಂಚಿಕೆಯ ಪುಟ ೪೮ರಲ್ಲಿ ಇರುವ ಡಾ॥ ಕೆ. ಎಸ್. ಪವಿತ್ರ ಅವರ ಲೇಖನದಲ್ಲಿ "ಪುರುಷ ಪ್ರಧಾನವಾದ ಭಾರತೀಯ ಸಮಾಜ ಮಹಿಳೆಯರಿಗೆಂದೇ ದೇವರ ಹೆಸರಿನಲ್ಲಿ ಧಾರ್ಮಿಕ ಕಟ್ಟಳೆಗಳನ್ನು **ವಿಧಿಸಿರುವುದೂ** ಇದಕ್ಕೆ ಕಾರಣವಿರಬಹುದು" ಎಂದು ಓದಿಕೊಳ್ಳಬೇಕು. ತಪ್ಪಾಗಿ ಮುದ್ರಿಸಿದ್ದಕ್ಕೆ ವಿಷಾದಿಸುತ್ತೇವೆ.

ಅದೇ ಸಂಚಿಕೆಯ ೫೯ನೆಯ ಪುಟದಲ್ಲಿ ಡಾ॥ ಬಾಲಗೋಪಾಲ್ ಅವರು ಶ್ರೀ ರಾಳ್ಳಪಲ್ಲಿ ಅನಂತಕೃಷ್ಣ ಶರ್ಮರ ಮಗಳ ಎಂಟನೆಯ ಮಗು ಎಂದು ಓದಿಕೊಳ್ಳಬೇಕು. ಬಾಲಗೋಪಾಲ್ ಅವರ ಬಗ್ಗೆ ಮಾಹಿತಿಗಾಗಿ http//kbalagopal.org ನೋಡಬಹುದು. ಕಾಶ್ಮೀರದ ಬಗೆಗಿನ ಅವರ ಕೃತಿ 'ಕಲ್ಲೋಲ ಲೋಯ' ಕನ್ನಡದಲ್ಲಿ ಪ್ರಗತಿ ಗ್ರಾಫಿಕ್ಸ್‌ನ ಡಾ॥ ಎಂ. ಬೈರೇಗೌಡ ಅವರಿಂದ ಪ್ರಕಟಿಸಲ್ಪಟ್ಟಿದೆ. ಅನುವಾದಕರು : ವಿ. ಎಸ್. ಶ್ರೀಧರ್ ಮತ್ತು ನಗರಗೆರೆ ರಮೇಶ್. ಬೇರೆ ಲೇಖನಗಳ ಸಂಕಲನ ಮುಂದೆ ಹೊರಬರಲಿದೆ.

**–ಸಂ.**

# ಸಾಟಿಯಿಲ್ಲದ ದೇವಿಪ್ರಸಾದ್

ಡಾ|| ಜಿ. ರಾಮಕೃಷ್ಣ

೧೯೯೩ರ ಫೆಬ್ರವರಿ ೧೧. ಸ್ಥಳ : ಕಲ್ಕತ್ತೆಯ ಏಷ್ಯಾಟಿಕ್ ಸೊಸೈಟಿ ಸಭಾಭವನ. ಆ ವಿದ್ವತ್ ಸಂಸ್ಥೆಯೊಂದಿಗೆ ಸುಮಾರು ಐದು ದಶಕಗಳ ಕಾಲ ನಿಕಟ ಸಂಬಂಧವಿರಿಸಿಕೊಂಡಿದ್ದ ಉದ್ದಾಮ ಚಿಂತಕ ಮತ್ತು ಲೇಖಕ ದೇವಿಪ್ರಸಾದ್ ಪುಟ್ಟ ಸಭೆಯನ್ನುದ್ದೇಶಿಸಿ ಒಂದು ಉಪನ್ಯಾಸ ನೀಡಲು ನಿಂತಿದ್ದರು. ಅಂತಹ ಎಷ್ಟೋ ಉಪನ್ಯಾಸಗಳನ್ನು ಅವರು ಅಲ್ಲಿ ನೀಡಿದ್ದುದುಂಟು. ಸಭೆಯಲ್ಲಿದ್ದವರು ಇಪ್ಪತ್ತೋ ಮೂವತ್ತೋ ಮಂದಿ. ಆದರೆ ಎಲ್ಲರೂ ಅವರವರ ಕ್ಷೇತ್ರಗಳಲ್ಲಿ ನಿಪುಣರು, ಹೆಸರು ಮಾಡಿರುವವರು. ದೇವಿಪ್ರಸಾದರ ಅಂದಿನ ವಿಷಯ : ಪ್ರಾಚೀನ ಭಾರತದಲ್ಲಿ ವಿಜ್ಞಾನದ ಮೂಲಸೆಲೆಗಳು. ಸಾಮಾನ್ಯವಾಗಿ ನಿಂತು ಮಾತನಾಡುವ ಪದ್ಧತಿಯ ದೇವಿಪ್ರಸಾದ್ ಅಂದು ಕುಳಿತೇ ಉಪನ್ಯಾಸ ನೀಡಬೇಕಾಗಿತ್ತು. ವಯಸ್ಸು ಅದಕ್ಕೆ ಕಾರಣವಲ್ಲ; ಆರೋಗ್ಯ ಕ್ಷೀಣಿಸಿದ್ದುದು ಕಾರಣ. ದೈಹಿಕವಾಗಿ ಕೃಶವಾಗಿದ್ದ ಈ ವಿದ್ವಾಂಸರು ಬೌದ್ಧಿಕವಾಗಿ ಗಟ್ಟಿಯಾಗಿಯೇ ಇದ್ದರು. ತಮ್ಮ ನೆಚ್ಚಿನ ಸಂಸ್ಥೆಯ ಆಹ್ವಾನವನ್ನು ತಿರಸ್ಕರಿಸಲಾರದೆ ಉಪನ್ಯಾಸ ನೀಡಲು ಬಂದಿದ್ದರು. ಅಲ್ಲದೆ, ವಿಷಯವು ರೋಚಕವಾದ್ದು, ಅವರಿಗೆ ಅತ್ಯಂತ ಪ್ರಿಯವಾದ್ದು. ಹಿಂದೆ ಹಲವು ವರ್ಷಗಳ ಕಾಲ ತಾವು ಕಾರ್ಯದರ್ಶಿಯಾಗಿ ಕೆಲಸ ಮಾಡಿದ್ದ ಸಂಸ್ಥೆಯಲ್ಲಿ ಇದೇ ಅವರ ಕೊನೆಯ ಉಪನ್ಯಾಸ. ಸಾರ್ವಜನಿಕ ವಿದ್ವತ್ಸಭೆಯಲ್ಲಿ ಕಾಣಿಸಿಕೊಂಡಿದ್ದೂ ಅದೇ ಕಡೆಯದು.

ಕೇವಲ ಆರು ತಿಂಗಳಿಗೆ ಮುಂಚೆ ಅವರು ಒಂದು ದೊಡ್ಡ ಸಭೆಯಲ್ಲಿ ಪಾಂಡಿತ್ಯ, ನಗೆ, ಚಾವಟಿ ಏಟು, ಅದಮ್ಯ ವಿಶ್ವಾಸ, ಮಗ್ನತೆ ಮತ್ತು ಬೌದ್ಧಿಕ ಔತಣದ ಸವಿಯನ್ನು ಉಣಿಸಿದ್ದರು. ಎರಡು ದಶಕಗಳ ಕಾಲ ಅವರು ಸಂಶೋಧನೆ ನಡೆಸಿದ್ದ ವಿಷಯ, ಅವರಿಗೆ ಪ್ರಿಯವಾದ್ದು: ಪ್ರಾಚೀನ ಭಾರತದಲ್ಲಿ ವಿಜ್ಞಾನಿಗಳು ಎದುರಿಸಿದ ತೊಡರುಗಳು, ''ವಿಜ್ಞಾನಕ್ಕೆ ಬೆದರಿಕೆ ಒಡ್ಡಿದ್ದವರು''. ದೇಶದ ಎಲ್ಲ ಭಾಗಗಳಿಂದ ವಿಜ್ಞಾನಿಗಳು ಬಂದು ತುಂಬಿದ್ದ ಸಭೆ ಅದು. ಸ್ಥಳ : ಬೆಂಗಳೂರಿನ ಭಾರತೀಯ ವಿಜ್ಞಾನ ಸಂಸ್ಥೆ. ಆಗ್ಗೆ ಭಾರತೀಯ ವಿಜ್ಞಾನ ಅಕಾಡೆಮಿಯ ಅರ್ಧವಾರ್ಷಿಕ ಸಮ್ಮೇಳನ ಜರುಗುತ್ತಿತ್ತು. ಅಡಿಪಾಯ ರೂಪದ ಉಪನ್ಯಾಸವೆಂದು ಅದನ್ನು ಕರೆದಿದ್ದರು. ಅಂತಹ ಉಪನ್ಯಾಸಗಳಲ್ಲಿ ಇದು ದೇವಿಪ್ರಸಾದರ ಐದನೆಯದೋ ಆರನೆಯದೋ ಉಪನ್ಯಾಸ.

ದೇವಿಪ್ರಸಾದ್ ಎಂಥವರೆಂದು ಇದರಿಂದ ತಿಳಿಯುತ್ತದೆ. ಅವರು ಹುಟ್ಟಿದ್ದು ೧೯ನೇ ನವೆಂಬರ್ ೧೯೧೮ರಂದು ಕಲ್ಕತ್ತೆಯಲ್ಲಿ ಮತ್ತು ಗತಿಸಿದ್ದು ೧೯೯೩ರ ಮೇ ೮ರಂದು, ತಮ್ಮ ೭೫ನೆಯ ವಯಸ್ಸಿನಲ್ಲಿ. ಎಂಥ ಅದ್ಭುತವಾದ ಕ್ರಿಯಾಶಾಲಿತ್ವದ ೭೫ ವರ್ಷಗಳು! ಸಂಶೋಧನೆ ಮತ್ತು ಬರವಣಿಗೆ ಅವರ ಜೀವನದ ಜೀವಾಳ. ೧೯೮೬ರಲ್ಲಿ ಪ್ರಕಟವಾದ್ದು ಅವರ ಉದ್ಗ್ರಂಥದ ಮೊದಲ ಸಂಪುಟ : ಪ್ರಾಚೀನ ಭಾರತದ ವಿಜ್ಞಾನ-ತಂತ್ರಜ್ಞಾನಗಳ ಇತಿಹಾಸ. ಅದು ಹೊರಬರುವವರೆಗೆ ಈ ವಿಷಯದ ಬಗೆಗೆ ಬರಡು ಬರಡಾದ ಇಲ್ಲವೆ ದಾಖಲೆಗಳಿಲ್ಲದ ಅತಿಶಯೋಕ್ತಿಗಳ ಸರಮಾಲೆಯು ಇತಿಹಾಸದ ಹೆಸರಲ್ಲಿ ಹರಿದಾಡುತ್ತಿದ್ದಿತು. ಆ ತಾಪವನ್ನು ತಣಿಸಲು ತಂಪು ಮಳೆ ಎರೆದಂತಿತ್ತು ಈ ಪುಸ್ತಕದ ಪ್ರಕಟಣೆ. ನಮ್ಮ ಪ್ರಾಚೀನ ವಿಜ್ಞಾನಿಗಳ ಮೂಲ ಗ್ರಹಿಕೆಗಳು, ಅವರ ವೈಜ್ಞಾನಿಕ ಪದ್ಧತಿ, ಅವರು ಹೇಗೆ ತೀರ್ಮಾನಗಳನ್ನು ತಲುಪಿದರು, ಎಂಬುವು ಸಮಗ್ರವಾಗಿ ನಿರೂಪಿತವಾಗಿರಲಿಲ್ಲ. ಅದನ್ನು ಮಾಡಿದವರು ದೇವಿಪ್ರಸಾದ್.

ಪ್ರಾಚೀನರ ಪ್ರತ್ಯಕ್ಷ ಅವಲೋಕನಗಳು ಹಾಗೂ ವೈಜ್ಞಾನಿಕ ಪ್ರಯೋಗಗಳು ನಿರ್ದಿಷ್ಟ ಸಾಮಾಜಿಕ ಸಂದರ್ಭಗಳಲ್ಲಿ, ಕೆಲವೊಮ್ಮೆ ಅವುಗಳ ಒತ್ತಾಯದ ಪರಿಣಾಮವಾಗಿ, ನಡೆಸಲಾಗಿದ್ದುವು. ಅದನ್ನು ಎಷ್ಟೋ ಚರಿತ್ರಕಾರರು ಗಣನೆಗೇ ತೆಗೆದುಕೊಂಡಿರಲಿಲ್ಲ. ಈ ನ್ಯೂನತೆಯನ್ನು ಸಮರ್ಥವಾಗಿ ಸರಿಪಡಿಸಿದ ದೇವಿಪ್ರಸಾದ್ ಹರಪ್ಪ ನಾಗರಿಕತೆಯ ಕಾಲದಿಂದ ಮೌರ್ಯರ ಕಾಲದವರೆಗೆ ತಮ್ಮ ಅಧ್ಯಯನದ ವ್ಯಾಪ್ತಿಯನ್ನು ಹಿಗ್ಗಿಸಿಕೊಂಡರು. ಮೊದಲ ಮತ್ತು ಎರಡನೆಯ ನಗರೀಕರಣದ ಘಟ್ಟಗಳು ಇವು. ೧೯೯೧ರಲ್ಲಿ ಈ ಇತಿಹಾಸದ ಎರಡನೆಯ ಸಂಪುಟ ಹೊರಬಿದ್ದಾಗ ಪ್ರಸಿದ್ಧ ನಿಯತಕಾಲಿಕ 'ನೇಚರ್'ನಲ್ಲಿ ರಾಬರ್ಟ್ ಟೆಂಪಲ್ ಅದನ್ನು ವಿಮರ್ಶಿಸುತ್ತಾ ಹೀಗೆಂದ : ''ಇದು ಕೇವಲ ವಿಜ್ಞಾನದ ಇತಿಹಾಸವಲ್ಲ. ಭಾರತಕ್ಕೆ ಭವಿಷ್ಯವಿದೆಯೋ ಇಲ್ಲವೋ ಎಂಬ ಪ್ರಶ್ನೆಯನ್ನು ನೇರವಾಗಿ ಎತ್ತಿಕೊಂಡಿರುವ ಗ್ರಂಥ ಇದು. ಚಟ್ಟೋಪಾಧ್ಯಾಯ ಒಬ್ಬ ಧೈರ್ಯಶಾಲಿ ಎನ್ನಬೇಕು, ಏಕೆಂದರೆ ಅವರು ಆ ಮೂಲಭೂತ ಸಮಸ್ಯೆಯನ್ನು ಎದುರಿಸಿದ್ದಾರೆ. ಕಾಲಾನುಕ್ರಮದಲ್ಲಿ ಭಾರತದಲ್ಲಿ ವಿಜ್ಞಾನದ ಬೆಳವಣಿಗೆಯನ್ನು ಅದುಮಿಟ್ಟ ಹಿಂದು ಅಂಧಶ್ರದ್ಧಾಳುಗಳ ಉಪಟಳದ ಇತಿಹಾಸವನ್ನು ಇಲ್ಲಿ ತೆಗೆದಿರಿಸಲಾಗಿದೆ. ಇದರಿಂದ ಸಮಕಾಲೀನ ಭಾರತಕ್ಕೆ ಸಂದೇಶ ಸ್ಪಷ್ಟವಾಗಿದೆ.''



ದೇವಿಪ್ರಸಾದ್ ತಮ್ಮೆಲ್ಲ ಸಂಶೋಧನೆಗಳಲ್ಲಿ ಕಲೆಹಾಕಿದ ಮಾಹಿತಿ, ವಿಶ್ಲೇಷಣೆ ಮತ್ತು ಸಂದೇಶ ಯಾರ ಕಣ್ಣನ್ನೂ ತಪ್ಪಿಸುವಂತಿಲ್ಲ: ವಿಶೇಷತಃ ನಮ್ಮ ಮುಂದೆ ಅಂಧಶ್ರದ್ಧಾಳುಗಳ ರೌದ್ರತೆ ಪ್ರದರ್ಶನವಾಗುತ್ತಿರುವಾಗ. ಇದೇ ಇತಿಹಾಸದ ಮೂರನೆಯ ಸಂಪುಟವು ದೇವಿಪ್ರಸಾದ್ ಗತಿಸಿದನಂತರ ಪ್ರಕಟವಾಯಿತು.

ತತ್ತ್ವಶಾಸ್ತ್ರದ ಇಬ್ಬರು ದೊಡ್ಡ ವಿದ್ವಾಂಸರು ದೇವಿಪ್ರಸಾದ್‌ಗೆ ಪದವಿ ತರಗತಿಗಳ ಹಾಗೂ ಸ್ನಾತಕೋತ್ತರ ಹಂತದಲ್ಲಿ (೧೯೩೯ ಮತ್ತು ೧೯೪೨) ತತ್ತ್ವಶಾಸ್ತ್ರ ಬೋಧಿಸಿದ್ದರು : ಎಸ್. ರಾಧಾಕೃಷ್ಣನ್ ಮತ್ತು ಎಸ್. ಎನ್. ದಾಸ್‌ಗುಪ್ತ; ಅದು ಕಲ್ಕತ್ತ ವಿಶ್ವವಿದ್ಯಾನಿಲಯದ ವಿದ್ಯಾರ್ಥಿಯಾಗಿದ್ದಾಗ. ಯುವ ದೇವಿಪ್ರಸಾದರ ಕಾಲೆಳೆಯುವುದು ಮೊದಲ ಪ್ರಾಧ್ಯಾಪಕರ ಹವ್ಯಾಸ : ಅದಕ್ಕಾಗಿ ಅವರು ಹಾಕುತ್ತಿದ್ದ ಪ್ರಶ್ನೆ – ''ಏನಪ್ಪಾ, ಇದನ್ನು ಕುರಿತು ನಿನ್ನ ಗುರು ಏನು ಹೇಳುತ್ತಾನೆ ?'' ಆ ಗುರು ಕಾರ್ಲ್ ಮಾರ್ಕ್ಸ್. ಯುವ ದೇವಿಪ್ರಸಾದ್ ಉತ್ತರಗಳಿಗೆ ತಡಕಾಡಿದ್ದುದಿಲ್ಲ. ಈ ಸ್ವಭಾವ ಇಡೀ ಜೀವನಪರ್ಯಂತ ಅವರದಾಗಿತ್ತು. ವಿದ್ಯಾರ್ಥಿದೆಸೆ ಮುಗಿದ ಕೆಲವು ದಶಕಗಳ ನಂತರ ಇದೇ ಪ್ರಾಧ್ಯಾಪಕರು ಒಮ್ಮೆ ತಮ್ಮ ಹಿರಿಯ ವಿದ್ಯಾರ್ಥಿಯನ್ನು ಭೇಟಿಯಾಗುವ ವೇಳೆಗೆ ಅವರು ದೇಶದ ಅಧ್ಯಕ್ಷರಾಗಿದ್ದರು. ಸಿಮ್ಲಾದಲ್ಲಿರುವ ಪ್ರೌಢ ಅಧ್ಯಯನಗಳ ಕೇಂದ್ರದಲ್ಲಿ ಒಂದು ವಿಚಾರಗೋಷ್ಠಿಯ ಉದ್ಘಾಟನೆಗೆಂದು ಅವರು ಬಂದಿದ್ದರು; ದೇವಿಪ್ರಸಾದ್ ಗೋಷ್ಠಿಯೊಂದರಲ್ಲಿ ಪಾಲ್ಗೊಳ್ಳಲು ಆಮಂತ್ರಿತರಾಗಿದ್ದರು. ಆಗ್ಗೆ ದೇವಿಪ್ರಸಾದ್

ವಯಸ್ಸು ೫೦ನ್ನು ಮೀರಿತ್ತು. ರಾಧಾಕೃಷ್ಣನ್ ತಮ್ಮ ಶಿಷ್ಯನನ್ನು ಗುರುತಿಸಿದರು, ಹತ್ತಿರಕ್ಕೆ ಕರೆದರು, ಮಾರ್ಕ್ಸ್‌ವಾದವನ್ನು ಶ್ರದ್ಧೆಯಿಂದ ಅಭ್ಯಾಸ ಮಾಡುವ ಕೆಲಸ ಮುಂದುವರಿಸಿದ್ದಕ್ಕಾಗಿ ಅಭಿನಂದಿಸಿದರು.

ಇವರನ್ನು ಅವರ ಆಪ್ತರೆಲ್ಲಾ ಕರೆಯುತ್ತಿದ್ದುದು 'ದೇಬಿದಾ' ಎಂದು. ಸಿಮ್ಲಾದಲ್ಲಿ ಅಂದು ಅವರ ಪಕ್ಕದಲ್ಲಿದ್ದವರು ಒಬ್ಬರು 'ದೇಬಿದಾ, ಇಂದಿಗೆ ನೀನು ಧನ್ಯನಾದೆ' ಎಂದರು. ಅದಕ್ಕೆ ಹಾದಿ ಎಷ್ಟು ಕಠಿಣವಾಗಿದ್ದಿತೆಂಬುದು ದೇಬಿದಾಗೆ ಮಾತ್ರವೇ ಗೊತ್ತಿರಲಿಲ್ಲ; ಅವರಂತೆ ಬೇರೆಯವರನೇಕರು ಅತಾರ್ಕಿಕ ವಿರೋಧಗಳನ್ನೆದುರಿಸಿದ್ದುದು ಎಲ್ಲರಿಗೂ ತಿಳಿದ ವಿಷಯ. ಸಹೋದ್ಯೋಗಿಗಳದೆಷ್ಟು ಮಂದಿ ದೇವಿಪ್ರಸಾದರನ್ನು ಕನಸುಗಾರನೆಂದು ಹಂಗಿಸಿದ್ದರು! ಮತ್ತಿನ್ನೆಷ್ಟು ಮಂದಿ ಅವರಿಗೆ ಬೌದ್ಧಿಕ ಬಹಿಷ್ಕಾರ ಹಾಕಿದ್ದರು! ''ಜ್ಞಾನದೇಗುಲ''ಗಳೆನ್ನಲಾದ ವಿಶ್ವವಿದ್ಯಾನಿಲಯಗಳಲ್ಲಿ ಅವರಿಗೆ ಪುರಸ್ಕಾರ ನೀಡಲು ಹಿಂದೇಟು ಹಾಕಿದವರೇ ಹೆಚ್ಚು. ಅದನ್ನೆಲ್ಲಾ ಹಿಮ್ಮೆಟ್ಟಿಸಿ ಖ್ಯಾತಿ ಗಳಿಸಿದಾಗ ದೇವಿಪ್ರಸಾದರ ಕೃತಿಗಳಿಗೆ ಮೌನವನ್ನೇ ಪ್ರತಿಕ್ರಿಯೆಯನ್ನಾಗಿ ನೀಡಿದವರೂ ಬೇಕಾದಷ್ಟು ಮಂದಿ ಇದ್ದರು. ಆದರೆ ಅವರಿಗೆ ದಕ್ಕಬೇಕಾದ ಶ್ಲಾಘನೆ ಮತ್ತು ಮಾನ್ಯತೆಯನ್ನು ಯಾರೂ ತಡೆಹಿಡಿಯಲಾಗಲಿಲ್ಲ. ಮುಜುಗರದಿಂದ ಅದನ್ನು ನೀಡಿದವರೂ ಉಂಟು. ಒಂದು ಚಾರಿತ್ರಿಕ ವ್ಯಂಗ್ಯವೆಂದರೆ, ಸ್ವದೇಶದಲ್ಲಿ ಅವರಿಗೆ ಮಾನ್ಯತೆ ನೀಡಲಾದ್ದು ಅನೇಕ ವಿದೇಶಗಳು ಅದನ್ನು ನೀಡಿದ ನಂತರ! ಇದೊಂದು ಅಪಥ್ಯವಾದ ಪದ್ಧತಿ, ಆದರೆ ನಮ್ಮ ದೇಶದಲ್ಲಿ ಯಾವಾಗಲೂ ಇದ್ದದ್ದೆ. ೧೯೭೦ರ ದಶಕದ ಅಂತ್ಯದಲ್ಲಿ ಅಖಿಲ ಭಾರತ ತತ್ತ್ವಶಾಸ್ತ್ರಜ್ಞರ ಸಮ್ಮೇಳನ ಜಾರಿಯಲ್ಲಿತ್ತು. ಪ್ರತಿ ಎರಡು ವರ್ಷಕ್ಕೊಮ್ಮೆ ನಡೆಯುವ ಸಮಾವೇಶ ಇದು. ಅಲ್ಲಿ ಒಬ್ಬ ಹಿರಿಯ ಪ್ರಾಧ್ಯಾಪಕರು ನಿರ್ಣಯವೊಂದನ್ನು ಚರ್ಚೆಗೆ ಮಂಡಿಸಿದ್ದರು. ಅದರ ಸಾರ ಇದು: ತನ್ನ ಕೃತಿಗಳ ಮೂಲಕ ದೇವಿಪ್ರಸಾದ ಚಟ್ಟೋಪಾಧ್ಯಾಯ ಯುವ ಪೀಳಿಗೆಯಲ್ಲಿ, ತತ್ತ್ವಶಾಸ್ತ್ರಕಾರರ ನಡುವೆ, ವಿಷಗಾಳಿ ಹಬ್ಬಿಸುತ್ತಿರುವುದನ್ನು ಪರಿಗಣಿಸಿ, ಅವರ ಅರುಚಿಕರ ಪ್ರಭಾವವನ್ನು ತಡೆಗಟ್ಟಲು ಕ್ರಮಗಳನ್ನು ಕೈಗೊಳ್ಳಬೇಕೆಂದು ಈ ಸಮಾವೇಶವು ನಿರ್ಣಯಿಸುತ್ತದೆ. ಚರ್ಚೆ ನಡೆದು ನಿರ್ಣಯವನ್ನು ಕೈಬಿಡಲಾಯಿತು, ನಿಜ; ಆದರೆ ದೇವಿಪ್ರಸಾದರು ಕೆಲವು ತತ್ತ್ವಶಾಸ್ತ್ರ ವಿದ್ವಾಂಸರಿಗೆ ಒಬ್ಬ ಭಯೋತ್ಪಾದಕರಾಗಿ ಕಂಡುಬಂದಿದ್ದುದು ನಮ್ಮ ಬೌದ್ಧಿಕ ಪ್ರಪಂಚದ ಅವಲಕ್ಷಣಕ್ಕೆ ಸಾಕ್ಷಿಯಾಗಿ ಉಳಿದಿದೆ. ''ವಿಷಗಾಳಿ ಹಬ್ಬಿಸಿದ'' ಎನ್ನಲಾದ ಪ್ರಾಧ್ಯಾಪಕ ದೇವಿಪ್ರಸಾದ್ ಕೆಲವೇ ವರ್ಷಗಳ ನಂತರ ಭಾರತೀಯ ತತ್ತ್ವಶಾಸ್ತ್ರ ಸಂಶೋಧನಾ ಸಮಿತಿಯ ಸದಸ್ಯರಾದರು, ಆ ಸಂಸ್ಥೆಗಾಗಿ ಕೆಲವು ಮೌಲಿಕ ಕೃತಿಗಳನ್ನು ಸಂಪಾದಿಸಿಕೊಟ್ಟರು, ಸಂಶೋಧನಾ ಯೋಜನೆಗಳನ್ನು ಸಿದ್ಧಗೊಳಿಸಿದರು. ಅಂತೆಯೇ ಅವರು ಭಾರತೀಯ ಇತಿಹಾಸ ಸಂಶೋಧನಾ ಸಮಿತಿಯ ಸದಸ್ಯರಾಗಿಯೂ ಜವಾಬ್ದಾರಿಗಳನ್ನು ನಿರ್ವಹಿಸಿ ಎಲ್ಲರಿಂದಲೂ ಮೆಚ್ಚುಗೆ ಪಡೆದರು. ಭಾರತೀಯ ವಿಜ್ಞಾನ-ತಂತ್ರಜ್ಞಾನ ಸಂಶೋಧನಾ ಸಮಿತಿಯ ಅಂಗವಾದ ''ನಿಸ್ಟಾಡ್ಸ್''ನ ಒಂದು ಯೋಜನೆಗೆ ನಿರ್ದೇಶಕರಾಗಿ ಹಲವು ವಿದ್ವಾಂಸರನ್ನು ಜೊತೆಗೂಡಿಸಿ ಮಹತ್ವದ ಪ್ರಕಟಣೆಗಳನ್ನು ಹೊರತಂದರು. ''ಪ್ರಾಚೀನ ಭಾರತೀಯ ವಿಜ್ಞಾನ ಮತ್ತು ತಂತ್ರಜ್ಞಾನದ ಇತಿಹಾಸ'' ಎಂಬ ಶೀರ್ಷಿಕೆಯಲ್ಲಿ ಅವರು ಪ್ರಕಟಿಸಿದ ಮೂರು ಸಂಪುಟಗಳು ಅನನ್ಯವಾದುವೆಂದು ವಿದ್ವಜ್ಜನ ಒಪ್ಪಿದ್ದಾರೆ.

ನನ್ನದೇ ಒಂದು ಸ್ವಾರಸ್ಯಕರ ಅನುಭವದ ಪ್ರಸ್ತಾಪ ಅಸಂಗತವಾಗಲಾರದು. ತಿರುಪತಿಯ ಶ್ರೀ ವೆಂಕಟೇಶ್ವರ ವಿಶ್ವವಿದ್ಯಾಲಯದ ತತ್ತ್ವಶಾಸ್ತ್ರ ವಿಭಾಗವು ಮೂರು ದಿನಗಳ ರಾಷ್ಟ್ರೀಯ ವಿಚಾರಗೋಷ್ಠಿಯನ್ನು ಆಯೋಜಿಸಿತ್ತು. ಕಾರ್ಲ್ ಮಾರ್ಕ್ಸ್ ತೀರಿಕೊಂಡ ಶತಮಾನದ ನಂತರದ ಒಂದು ಕಾರ್ಯಕ್ರಮ ಅದು. ಜಾದವಪುರ ವಿಶ್ವವಿದ್ಯಾಲಯದಿಂದ ಒಬ್ಬ ಯುವಕ ಬಂದಿದ್ದ, ಸುಮಾರು ಮೂವತ್ತರ ಹರೆಯದವನು. ಆತ ತತ್ತ್ವಶಾಸ್ತ್ರದ ಅಧ್ಯಾಪಕ. ಚರ್ಚೆಯೊಂದರಲ್ಲಿ ಭಾಗವಹಿಸುತ್ತಾ ಅಲ್ಲಿರದಿದ್ದ ದೇವಿಪ್ರಸಾದರ ಬಗ್ಗೆ ಅತ್ಯಂತ ಹೇಯವಾದ ಮೂದಲಿಕೆಯ ಮಾತುಗಳನ್ನಾಡಿ ಭಾವೋದ್ರೇಕ ತೋರ್ಪಡಿಸಿದ. ಅಂತಹ ಪ್ರಸಂಗ




ವೇನಿತ್ತು? ನನ್ನ ಪ್ರಬಂಧ ಮಂಡಿಸುವಾಗ ದೇವಿಪ್ರಸಾದರ ಯಾವುದೋ ಅಭಿಪ್ರಾಯವನ್ನು ಪ್ರಸ್ತಾಪಿಸಿ ಅದು ಸರಿಯಾದ ನಿಲುವೆಂದು ಸಮರ್ಥಿಸಿದ್ದೆ. ಋಗ್ವೇದದ ಒಂದು ಸೂಕ್ತಕ್ಕೆ ಸಂಬಂಧಿಸಿದ್ದ ಚರ್ಚೆ ಅದು. ''ಅರಣಿ''ಗಳನ್ನು ಲೈಂಗಿಕತೆಯ ಹಿನ್ನೆಲೆಯಲ್ಲಿ ದೇವಿಪ್ರಸಾದ್ ವ್ಯಾಖ್ಯಾನಿಸಿಬಿಟ್ಟಿದ್ದಾರೆಂದು ಈತನಿಗೆ ಕಸಿವಿಸಿಯಾಗಿ ಏನೇನೋ ಆರ್ಭಟಿಸಿದ. ತನ್ನ ಬಣದ ಸಾಂಪ್ರದಾಯಿಕ ವ್ಯಾಖ್ಯಾನವನ್ನು ದೇವಿಪ್ರಸಾದ್ ಬುಡಮೇಲು ಮಾಡಿದ್ದರೆಂದು ಕ್ರುದ್ಧನಾಗಿದ್ದ ಈತನಿಗೆ ಇನ್ನೆಲ್ಲಿ ತನ್ನವರ ವ್ಯಾಖ್ಯಾನ ಮುದುಡಿಹೋಗುವುದೋ ಎಂಬ ತಳಮಳ! ಚಾರಿತ್ರಿಕವಾಗಿ ದೇವಿಪ್ರಸಾದ್ ನೀಡಿದ್ದ ವಿವರಣೆಯನ್ನು ಸಹನೆಯಿಂದ ಅಭ್ಯಾಸ ಮಾಡುವಷ್ಟು ಬೌದ್ಧಿಕ ಶಿಸ್ತು ಆತನಲ್ಲಿಲ್ಲದಿದ್ದುದು ಶೋಚನೀಯ. ಅಂತಹ ವಿದ್ವಾಂಸರು ಹಲವರು ಆಗಿಹೋಗಿದ್ದಾರೆ.

ಯಾವುದೇ ಅರ್ಥೈಸುವಿಕೆಯನ್ನು ಹಂಗಿಸಿ ಲೇವಡಿ ಮಾಡುವುದಾಗಲಿ, ಅದನ್ನು ವಿರೋಧಿಸಿ ಕೇಕೆ ಹಾಕುವುದಾಗಲಿ ದೇವಿಪ್ರಸಾದರ ಪದ್ಧತಿಯಲ್ಲ. ಭಾರತೀಯ ಪರಂಪರೆಯ ಬಗೆಗಿನ ಅವರ ಅಪಾರ ಹೆಮ್ಮೆಯನ್ನು ತಿಳಿಯಲು ಅವರ ಮಾತುಗಳನ್ನು ಕೇಳಬೇಕಿತ್ತು ಇಲ್ಲವೆ ಅವರ ಕೃತಿಗಳನ್ನು ಓದಬೇಕಿತ್ತು. ಹರಪ್ಪ ನಾಗರಿಕತೆಯ ಶ್ರೇಷ್ಠ ಸಾಧನೆಗಳು, ಋಗ್ವೇದದ ಅಮೋಘ ಕಾವ್ಯತ್ವ, ಉಪನಿಷತ್ತುಗಳ ಗಹನ ಚಿಂತನೆ, ಮುಂತಾದುವುಗಳು ಅವರನ್ನು ಪುಳಕಿತರನ್ನಾಗಿಸುತ್ತಿದ್ದವು. ಛಾಂದೋಗ್ಯ ಉಪನಿಷತ್ತಿನ ಉದ್ದಾಲಕ ಆರುಣಿಯ ವೈಜ್ಞಾನಿಕ ಪ್ರಯೋಗಶೀಲತ್ವವು ವಿಶ್ವದ ವಿಜ್ಞಾನದ ಇತಿಹಾಸದಲ್ಲಿ ಅಮರವಾದುದೆಂದೂ ಆದಿಯಾದುದೆಂದೂ ಸ್ಥಾಪಿಸುವಾಗ ಅವರ ಹುಮ್ಮಸ್ಸು ಮತ್ತು ಹೆಮ್ಮೆ ಅವಿಸ್ಮರಣೀಯವಾಗಿರುತ್ತಿತ್ತು. ವಿಶ್ವದ ಮೊದಲ ಪ್ರಯೋಗ ವಿಜ್ಞಾನಿಯ ಪಟ್ಟವನ್ನು ಉದ್ದಾಲಕನಿಗೆ ನೀಡಿದ್ದನ್ನು ಪ್ರಶ್ನಿಸಿದವರು ಹಲವರು. ಪ್ರಾಚೀನ ಚೀನಾದ ಸಂಸ್ಕೃತಿ ಮತ್ತು ನಾಗರಿಕತೆಯ ಇತಿಹಾಸವನ್ನು ಹಲವು ಸಂಪುಟಗಳಲ್ಲಿ ರಚಿಸಿದ್ದ ಕೇಂಬ್ರಿಜ್ಜಿನ ಉದ್ದಾಮ ಜೀವಶಾಸ್ತ್ರಜ್ಞ-ಇತಿಹಾಸಕಾರ ಜೋಸೆಫ್ ನೀಡ್‌ಹ್ಯಾಮ್ ಸಮ್ಮುಖದಲ್ಲಿ ಉದ್ದಾಲಕನ ಪ್ರಶಂಸನೀಯ ಪ್ರಯೋಗಗಳನ್ನು ದೇವಿಪ್ರಸಾದ್ ವಿಸ್ತಾರವಾಗಿ ಬಣ್ಣಿಸಿ ಅವನು ಏನಿಲ್ಲವೆಂದರೂ ಕ್ರಿ.ಪೂ. ಎಂಟು ಅಥವಾ ಏಳನೆಯ ಶತಮಾನದವನೆಂದು ದಾಖಲೆಗಳ ಸಮೇತ ಸ್ಥಾಪಿಸಿದರು. ಉದ್ದಾಲಕನು ಮೂಲತಃ ತರ್ಕಬದ್ಧವಾದ ಜ್ಞಾನ ಪಡೆಯಲು ಅವಲೋಕನ ಮತ್ತು ಪ್ರಯೋಗಗಳನ್ನು ಅವಲಂಬಿಸಿದ್ದನೆಂಬುದನ್ನು ನೀಡ್‌ಹ್ಯಾಮ್ ಅಂಗೀಕರಿಸಿದರು.

ದೇವಿಪ್ರಸಾದರ ಯಾನ ಆರಂಭವಾದುದು ಮುಂಬೈನ ಒಂದು ಕಾಲೇಜಿನಲ್ಲಿ ಅಧ್ಯಾಪಕರಾಗಿ; ೧೯೪೦ರ ದಶಕದ ಆರಂಭದಲ್ಲಿ. ಆಶ್ಚರ್ಯವೆಂದರೆ ಅವರು ಮೊದಲಿಗೆ ಮುಂಬೈಗೆ ಹೋದದ್ದು ಚಲನಚಿತ್ರಗಳಿಗೆ ಕತೆ-ಸಂಭಾಷಣೆ ಬರೆಯುವ ಉದ್ದೇಶದಿಂದ. ಎರಡೋ ಮೂರೋ ಚಿತ್ರಗಳಿಗೆ ಬರೆದು ವಿರಮಿಸಿದರು. ಅದರಲ್ಲಿ ಒಂದು ಪ್ರಸಿದ್ಧಿಗೆ ಬಂದಿದ್ದಿತೆಂದು ಹೇಳುತ್ತಾರೆ. ಕೆಲಕಾಲದನಂತರ ಕಲ್ಕತ್ತೆಗೆ ಹಿಂದಿರುಗಿ ಸಿಟಿ ಕಾಲೇಜಿನಲ್ಲಿ ಅಧ್ಯಾಪಕರಾಗಿ ೧೯೭೦ರ ದಶಕದ ಕಡೆಯವರೆಗೂ ಅಲ್ಲಿದ್ದರು. ಕಲ್ಕತ್ತ ವಿಶ್ವವಿದ್ಯಾನಿಲಯ ಅವರಿಗೆ ಮುಂದೊಂದು ದಿನ ಡಿ.ಲಿಟ್. ಪದವಿ ನೀಡಿತು, ಆದರೆ ಎರಡು ಮೂರು ಬಾರಿ ಅಭ್ಯರ್ಥಿಯಾಗಿದ್ದಾಗ ಅಧ್ಯಾಪಕನ ಕೆಲಸ ನೀಡಲಿಲ್ಲ. ಕಾಲಿದಾಸ ಭಟ್ಟಾಚಾರ್ಯ ಎಂಬ ಪ್ರಸಿದ್ಧ ವೇದಾಂತಿ ಅಲ್ಲಿ ಮುಖ್ಯಸ್ಥರು. ಅವರೊಮ್ಮೆ ಹೇಳಿದ್ದರಂತೆ : ''ಈ ವಿಭಾಗದಲ್ಲಿ ನಾನಿರಬೇಕು, ಇಲ್ಲವೇ ನೀನಿರಬೇಕು. ಇಬ್ಬರೂ ಇರುವುದು ಅಸಾಧ್ಯ,'' ಎಂದು. ಆಮೇಲೆ ೧೯೭೦ರ ದಶಕದ ನಂತರ ಪೂರ್ಣಾವಧಿ ಸಂಶೋಧಕ-ಲೇಖಕನಾಗಿ ದೇವಿಪ್ರಸಾದ್ ಶಿಸ್ತು-ಶ್ರದ್ಧೆಗಳಿಂದ ಕೆಲಸ ಮಾಡಿದರು. ಅದಕ್ಕೆ ಮುನ್ನ ೧೯೫೦ರ ದಶಕದ ಆದಿಭಾಗದಲ್ಲಿ ಅವರು ಲಂಡನ್ನಿಗೆ ತೆರಳಿ ಬ್ರಿಟಿಷ್ ಮ್ಯೂಸಿಯಂನಲ್ಲಿ ಆಳವಾದ ಅಧ್ಯಯನದಲ್ಲಿ ಮುಳುಗಿದ್ದರು. ಯಾವ ವಿದ್ಯಾರ್ಥಿವೇತನವೂ ಇಲ್ಲದೆ ಸ್ವಂತ ಖರ್ಚಿನಲ್ಲಿ ಹಾಗೆ ಹೋದದ್ದು ಅವರ ಅಧ್ಯಯನ ನಿಷ್ಠೆಗೆ ಸಾಕ್ಷಿ. ಊಟ ಇದ್ದರೆ ಇತ್ತು, ಇಲ್ಲದಿದ್ದರೆ ಇಲ್ಲ; ಉಳಿತಾಯದ ಯೋಜನೆ ಹಾಗಿದ್ದಿತಂತೆ. ಅವರ ಅಧ್ಯಯನದ ವಿಧಾನಗಳನ್ನು ಚರ್ಚಿಸಲು ಆಗಿಂದಾಗ್ಗೆ ಬರ್ಮಿಂಗ್‌ಹ್ಯಾಮ್‌ಗೆ ಬೇರೆ ಹೋಗಬೇಕಾಗುತ್ತಿತ್ತು. ಏಕೆಂದರೆ, ಕೇಂಬ್ರಿಜ್‌ನಿಂದ ದೂಡಲ್ಪಟ್ಟಿದ್ದ ಜಾರ್ಜ್ ಥಾಮ್ಸನ್ ಇದ್ದುದು ಅಲ್ಲಿ. ಥಾಮ್ಸನ್

ಇಡೀ ಯೂರೋಪಿನಲ್ಲಿ ಪ್ರಾಚೀನ ಗ್ರೀಸ್ ಸಾಹಿತ್ಯ-ಸಂಸ್ಕೃತಿಗಳ ಬಗ್ಗೆ ಅಪ್ರತಿಮ ಪಾಂಡಿತ್ಯ ಹೊಂದಿದ್ದವರೆಂದು ಪ್ರಸಿದ್ಧರಾಗಿದ್ದರು. ಲಂಡನ್ನಿನ ಅಧ್ಯಯನದ ಫಲವೇ ೧೯೫೯ರಲ್ಲಿ ಪ್ರಕಟವಾದ 'ಲೋಕಾಯತ'. (ಮೊದಲು ಅದು ಬಂಗಾಳಿ ಭಾಷೆಯಲ್ಲಿ ಪ್ರಕಟವಾಗಿತ್ತು. ನಂತರದ ದಶಕಗಳಲ್ಲಿ ಅದು ಹಿಂದಿ, ರಷ್ಯನ್, ಚೀನಿ, ಜಪಾನಿ, ಜರ್ಮನ್, ಹೀಗೆ ಅನೇಕ ಭಾಷೆಗಳಿಗೆ ಅನುವಾದಿಸಲ್ಪಟ್ಟಿದೆ.) ಈ ಮಹದ್ಗ್ರಂಥವು ವಿದ್ವಜ್ಜನರನ್ನು ಚುಚ್ಚಿತು, ಹೊಡೆದೆಬ್ಬಿಸಿತು, ಬೆಚ್ಚಿಬೀಳಿಸಿತು; ಕೆಲವರಿಗೆ ಆಘಾತವೂ ಆಯಿತು. ವಿದ್ವಾಂಸರಲ್ಲಿ ಮೂರು ಬಗೆಯವರು ಕಂಡುಬಂದರು: ಸಮರ್ಥಕರು, ಕಟ್ಟಾ ವಿರೋಧಿಗಳು, ಮತ್ತು ಓದದೆ ಮುಗುಳ್ನಕ್ಕು ಸುಮ್ಮನೆ ಕೂತವರು. ಕ್ರಾಂತಿಕಾರಿ ಹೋರಾಟದ ಒಂದು ಭಾಗವು ಬೌದ್ಧಿಕ ಸಂಘರ್ಷವೆಂದು ಲೆನಿನ್ ನಂಬಿದ್ದರು. ದೇವಿಪ್ರಸಾದ್ ಆ ಹೋರಾಟವನ್ನು ನಮ್ಮಲ್ಲಿ ಮೊನಚಾಗಿ ಆರಂಭಿಸಿದರು. ಅದರಿಂದ ಭಾರತ ಕಮ್ಯುನಿಸ್ಟ್ ಪಕ್ಷವು ಬಲಿಷ್ಠವಾಯಿತೋ ಇಲ್ಲವೋ ಅದು ಬೇರೆ ಪ್ರಶ್ನೆ. (ತಮ್ಮ ವಿದ್ಯಾರ್ಥಿ ದೆಸೆಯಿಂದ ಕೊನೆಯವರೆಗೆ ದೇವಿಪ್ರಸಾದ್ ಪಕ್ಷದ ಸದಸ್ಯರಾಗಿದ್ದವರು). ಆದರೆ ತರ್ಕಶುದ್ಧ ಮಂಥನ, ವೈಚಾರಿಕ ತಳಹದಿ, ಚಾರಿತ್ರಿಕ ದೃಷ್ಟಿಕೋಣ, ಸೈದ್ಧಾಂತಿಕ ಸ್ಪಷ್ಟತೆ, ಇವೆಲ್ಲಾ ಗಟ್ಟಿಗೊಂಡಿದ್ದಂತೂ ನಿಜ. ದುಡಿಯುವ ಜನರ ತತ್ತ್ವಶಾಸ್ತ್ರವೆಂಬುದೇನಾದರೂ ಇದ್ದರೆ ಭಾರತದಲ್ಲಿ ಅದನ್ನು ಅವರಿಗೆ ಕೊಡಮಾಡಿದವರು ದೇವಿಪ್ರಸಾದ್. ಅದು ಅವರ ಅಮೋಘ ಸಾಧನೆ. ಆದ್ದರಿಂದಲೇ ಅವರನ್ನು ''ಪ್ರತಿಗಾಮಿ ಅಂಧಶ್ರದ್ಧೆಯ ವಿರುದ್ಧದ ಏಕವ್ಯಕ್ತಿ ಸೈನ್ಯ'' ಎಂದು ಕರೆಯಲಾಗುತ್ತಿತ್ತು.




'ಲೋಕಾಯತ'ದ ನಂತರ ದೇವಿಪ್ರಸಾದರ ಲೇಖನಿಯಿಂದ ಸತತವಾಗಿ ಪಾಂಡಿತ್ಯಪೂರ್ಣವಾದ ಸೈದ್ಧಾಂತಿಕ ಗ್ರಂಥಗಳು ಹಲವಾರು ಬಂದವು. ಪ್ರತಿಯೊಂದೂ ಆಳವಾದ ವಿದ್ವತ್ತು, ಹರಹು, ಒಳನೋಟಗಳಿಂದ ಸಂಪದ್ಭರಿತವಾಗಿದ್ದಿತು. ಇಂದಿಗೂ ಅವು ದಿಗ್ದರ್ಶನ ಮಾಡುವಂತಹ ದೀವಿಗೆಗಳು. ಅಲ್ಲಿಂದಾಚೆಗೆ ಅವರ ಕಾರ್ಯಕ್ಷೇತ್ರ ವಿಶಾಲವಾಗಿ ಬೆಳೆಯಿತು, ಹತ್ತಾರು ವಿಶ್ವವಿದ್ಯಾನಿಲಯಗಳು ಅವರನ್ನು ಬರಮಾಡಿಕೊಂಡವು. ೧೯೭೦ರಲ್ಲಿ ಮೈಸೂರು ವಿಶ್ವವಿದ್ಯಾನಿಲಯಕ್ಕೆ ಅವರನ್ನು ಡಾ॥ ಹಾ. ಮಾ. ನಾಯಕ್ ಅವರು ಆಹ್ವಾನಿಸಿದರು. ನಮ್ಮ ರಾಜ್ಯಕ್ಕೆ ಅದೇ ಅವರ ಮೊದಲ ಭೇಟಿ. ನಮ್ಮ ಪರಸ್ಪರ ಪರಿಚಯವೂ ಆಗಲೇ ಆದದ್ದು. ಈ ಭೇಟಿಯ ಪರಿಣಾಮ ಅವರಿಗೆ ಅತೀವ ಸಂತಸದ್ದು. ಹಾಗೆಂದು ಆಗ್ಗೆ ಅವರು ಅಮೆರಿಕಾದ ಸ್ನೇಹಿತ ಡೇಲ್ 'ರೀಪ್'ಗೆ ಬರೆದ ಪತ್ರದಲ್ಲಿ ದಾಖಲಿಸಿದ್ದಾರೆ. ''ನಾನು ಮಾಡುತ್ತಿರುವ ಕೆಲಸ ನಿರರ್ಥಕವಲ್ಲವೆಂದು ಬೆಂಗಳೂರಿನ ಅನುಭವ ಖಚಿತಪಡಿಸಿದೆ'' ಎಂದವರು ಹೇಳಿದ್ದಾರೆ. ಅದು ಅವರಿಗಿದ್ದಂತೆ ನಮಗೂ ಹುರುಪಿನ ಸಂದರ್ಭವೇ ಆಗಿತ್ತು. ಬೇರಾವುದೇ ಊರಿಗಿಂತ ಹೆಚ್ಚಾಗಿ ಅವರು ಭೇಟಿ ನೀಡಿದ್ದು ಬೆಂಗಳೂರಿಗೆ. ಕಲ್ಕತ್ತೆಯನ್ನು ಬಿಟ್ಟು ಬೇರೆಲ್ಲೂ ಅವರಿಗೆ ಬೆಂಗಳೂರು-ಮೈಸೂರುಗಳಲ್ಲಿದ್ದಷ್ಟು ಸ್ನೇಹಿತರಿರಲಿಲ್ಲ. ಬೆಂಗಳೂರಿನ ಭಾರತೀಯ ವಿಜ್ಞಾನ ಸಂಸ್ಥೆಯ ಜೊತೆಗಿನ ಅವರ ನಂಟು ಸದಾ ಅವರಿಗೆ ಉಲ್ಲಾಸ ತರುತ್ತಿತ್ತು, ಬೌದ್ಧಿಕ ಸವಾಲುಗಳನ್ನೆಸೆಯುತ್ತಿತ್ತು. ಕಲ್ಕತ್ತೆಯ ಸಿಟಿ ಕಾಲೇಜಿನಲ್ಲಿ ಅಧ್ಯಾಪನ ಕಾರ್ಯ ಮುಂದುವರಿಸುತ್ತಾ ದೇಶ-ವಿದೇಶಗಳ ಅನೇಕ ಉನ್ನತ ಶಿಕ್ಷಣ ಮತ್ತು ಸಂಶೋಧನಾ ಸಂಸ್ಥೆಗಳಿಗೆ ದೇವಿಪ್ರಸಾದ್ ಹೋಗಿಬರುತ್ತಿದ್ದರು. ಆಂಧ್ರ ಮತ್ತು ಪುಣೆ ವಿಶ್ವವಿದ್ಯಾನಿಲಯಗಳಲ್ಲಿ ಸಂದರ್ಶಕ ಪ್ರಾಧ್ಯಾಪಕರಾಗಿ ಕೆಲಸ ಮಾಡಿದರು, ಕಲ್ಕತ್ತೆ ವಿಶ್ವವಿದ್ಯಾನಿಲಯದ ಡಿ.ಲಿಟ್. ಪದವಿ ಪಡೆದರು, ವಿಶ್ವವಿದ್ಯಾಲಯ ಧನಸಹಾಯ ಆಯೋಗದ ಪ್ರತಿಷ್ಠಿತ 'ಹರಿ ಓಂ' ಪ್ರಶಸ್ತಿ ಪಡೆದರು. ಇದು ವಿಜ್ಞಾನದ ಸಂಶೋಧನೆಗಾಗಿ ಮೀಸಲಾದ ಪ್ರಶಸ್ತಿ. ಕಲ್ಕತ್ತ ವಿಶ್ವವಿದ್ಯಾಲಯ ಡಿ.ಲಿಟ್. ಪದವಿ ಕೊಡುವ ಮುನ್ನ ಅದನ್ನು ಪಡೆಯಲು ಅವರು ಅರ್ಹರೇ ಎಂದು ಕೇಳಲು ಹಲವು ವಿದ್ವಾಂಸರಿಗೆ ಪತ್ರ ಬರೆದಿತ್ತು. ಅವರಲ್ಲಿ ಕೇಂಬ್ರಿಜ್‌ನ ಜೋಸೆಫ್ ನೀಡ್‌ಹ್ಯಾಮ್ ಸಹ ಒಬ್ಬರು. ಅವರು ಬರೆದ ಉತ್ತರದ ಸಾರ ಹೀಗಿತ್ತು: ''ಇದೇನು ಹೀಗೆ ಕೇಳುತ್ತಿದ್ದೀರಿ ? ಅವರು ಅರ್ಹರಲ್ಲದಿದ್ದರೆ ಮತ್ತಾರು ಅರ್ಹರಾಗಲು ಸಾಧ್ಯ ? ಈವರೆಗೆ ಅದನ್ನವರಿಗೆ ನೀವು ನೀಡಿಲ್ಲವೆಂದು ತಿಳಿದು ಆಶ್ಚರ್ಯವಾಯಿತು.'' ಜರ್ಮನ್ ಪ್ರಜಾಪ್ರಭುತ್ವವಾದಿ ಗಣರಾಜ್ಯ ಮತ್ತು ಸೋವಿಯೆತ್ ಒಕ್ಕೂಟಗಳ ವಿಜ್ಞಾನ ಅಕಾಡೆಮಿಗಳು ಅವರಿಗೆ ಸದಸ್ಯತ್ವ ನೀಡಿದವು ಮತ್ತು ಪಶ್ಚಿಮ ಬಂಗಾಳ ಸರ್ಕಾರ ವಿದ್ಯಾಸಾಗರ ಪ್ರಶಸ್ತಿ ನೀಡಿತು. ಇದಾವುದರಿಂದಲೂ ದೇವಿಪ್ರಸಾದ್ ಉಬ್ಬಿಹೋಗಲಿಲ್ಲ. ಅವರು ಅದೇ ಹಳೆಯ ಅಧ್ಯಯನಶೀಲ, ಜನಪರ ವಿದ್ವಾಂಸರಾಗಿ ಮುಂದುವರಿದರು.

ಅವರ ಹತ್ತಾರು ಕೃತಿಗಳ ಪೈಕಿ ಕೆಲವನ್ನು ಹೆಸರಿಸಬಹುದು: ಭಾರತೀಯ ತತ್ತ್ವಶಾಸ್ತ್ರ - ಒಂದು ಜನಪ್ರಿಯ ಕೈಪಿಡಿ (೧೯೬೪), ಭಾರತೀಯ ನಾಸ್ತಿಕತೆ (೧೯೬೯), ಭಾರತೀಯ ತತ್ತ್ವಶಾಸ್ತ್ರದಲ್ಲಿ ಕಾಳು-ಜೊಳ್ಳು (೧೯೭೬), ಪ್ರಾಚೀನ ಭಾರತದಲ್ಲಿ ವಿಜ್ಞಾನ ಮತ್ತು ಸಮಾಜ (೧೯೭೭), ತತ್ತ್ವಶಾಸ್ತ್ರಜ್ಞನಾಗಿ ಲೆನಿನ್ (೧೯೭೯), ಜ್ಞಾನ ಮತ್ತು ಮಧ್ಯಪ್ರವೇಶ (೧೯೮೫), ಧರ್ಮ ಮತ್ತು ಸಮಾಜ (೧೯೮೭), ಇತ್ಯಾದಿ. ಪ್ರಸ್ತುತ ಲೇಖಕ ಮತ್ತು ಎನ್. ಗಾಯತ್ರಿಯವರ ಜೊತೆ ಸೇರಿ 'ದಕ್ಷಿಣ ಭಾರತದ ಸಂಸ್ಕೃತಿಯ ವಿಶ್ವಕೋಶ' (೧೯೮೩) ಎಂಬುದನ್ನು ಸಂಪಾದಿಸಿದ್ದುದು ನಮಗೆ ಹೆಮ್ಮೆಯ ವಿಷಯ. ಭಾರತೀಯ ತತ್ತ್ವಶಾಸ್ತ್ರದ ಪರಂಪರೆಯಲ್ಲಿ ಭೌತವಾದ ಮತ್ತು ಭಾವನಾವಾದದ ಹೊಳೆಗಳು ಮೊದಲಿನಿಂದಲೂ ಇವೆ, ಪರಸ್ಪರ ಸಂಘರ್ಷ ನಡೆಸಿವೆ ಹಾಗೂ ಪ್ರಭಾವ ಬೀರಿವೆ ಎಂಬುದನ್ನು ಸಪ್ರಮಾಣವಾಗಿ ವಿಶದೀಕರಿಸಿದ್ದು ದೇವಿಪ್ರಸಾದರ ಮಹತ್ತರ ಕೊಡುಗೆ. ''ಭಾರತೀಯ ತತ್ತ್ವಶಾಸ್ತ್ರದ ಎರಡು ಪ್ರವೃತ್ತಿಗಳು'' ಎಂಬ ಉಪನ್ಯಾಸವನ್ನು ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಅವರು ನೀಡಿದ್ದರು ಮತ್ತು ಅದು ಪ್ರಕಟವಾಗಿದೆ. ಹೀಗೆ ದೀಪಧಾರಿಯಾಗಿ ನಮ್ಮನ್ನು ಮುನ್ನಡೆಸಿದ ದೇವಿಪ್ರಸಾದ್ ತಾವಿಲ್ಲದಿದ್ದರೂ ಕಂಗೊಳಿಸುವ ದೀಪವನ್ನು ಬಿಟ್ಟುಹೋಗಿದ್ದಾರೆ. ಅದನ್ನು ನಂದದೆ ಪ್ರಕಾಶಮಾನವಾಗಿ ಉಳಿಯುವಂತೆ ಮಾಡುವ ಕೆಲಸ ನಮ್ಮ ಪೀಳಿಗೆಯವರದ್ದಾಗಿದೆ. ಇತ್ತೀಚಿನ ದಶಕಗಳಲ್ಲಿ ಹಲವು ಅವೈಜ್ಞಾನಿಕ ಸ್ಲಂಶೋಧನೆಗಳು ಪ್ರಖರವಾದ ಸಂಶೋಧನೆಗಳೆಂಬ ರೀತಿಯಲ್ಲಿ ಬಿಂಬಿತವಾಗುತ್ತಿವೆ. ಉಚ್ಚಕಂಠದಿಂದ ಕೂಗಿದರೆ ಅದೇ ಸತ್ಯವೆಂಬ ಮೋಹ ವ್ಯಾಪಿಸುತ್ತಿದೆ, ''ಇತಿಹಾಸದ ತಪ್ಪುಗಳನ್ನು ತೊಡೆದುಹಾಕುವ'' ಯತ್ನದ ಹೆಸರಲ್ಲಿ ಭೀಕರ ಹಿಂಸೆ ಮತ್ತು ಅವೈಚಾರಿಕತೆಗಳು ಹೆಚ್ಚುತ್ತಿವೆ. ಅಂತಹ ಸನ್ನಿವೇಶದಲ್ಲಿ ದೇವಿಪ್ರಸಾದ್ ಮೊಳಗಿಸಿದ ಧ್ವನಿ ಮತ್ತು ಹೊತ್ತಿಸಿದ ದೀಪ ನಮಗೆ ಪ್ರಚಂಡ ಬೌದ್ಧಿಕ ಆಯುಧಗಳಾಗಿ ಕಂಡುಬರುತ್ತವೆ. ಭೂತದ ವೈಜ್ಞಾನಿಕ ಶೋಧ ಮತ್ತು ಭವಿಷ್ಯತ್ತಿನ ಅಡಿಪಾಯ, ಎರಡಕ್ಕೂ ಅವರ ಅಸಾಧಾರಣ ಕಾಣಿಕೆ ಇದೆ. ಭಾರತದ ಪ್ರಾಚೀನ ಚಿಂತನೆ-ಸಂಸ್ಕೃತಿಗಳನ್ನು ಅರ್ಥಹೀನವಾದ್ದು ಅಥವಾ ಕಳಪೆಯಾದ್ದು ಎಂದು ಹೇಳಿ ಕೈತೊಳೆದುಕೊಳ್ಳುವುದು ಎಷ್ಟು ಮೂರ್ಖತನವೋ ಅವನ್ನು ನಿರರ್ಥಕವಾಗಿ ವೈಭವೀಕರಿಸುವುದು ಅಷ್ಟೇ ಅಚಾರಿತ್ರಿಕವಾದ್ದು. ನಮ್ಮ ಪ್ರಾಚೀನ ಸಂಸ್ಕೃತಿಯಲ್ಲಿ ಅಮೋಘವಾದ ಅಂಶಗಳಿವೆ, ಖಂಡನೀಯ ಸಂರಚನೆಗಳೂ ಇವೆ. ಅವುಗಳಲ್ಲಿ ಒಂದನ್ನು ತಿಳಿದು ಪೋಷಿಸಿ ಬೆಳೆಸಬೇಕು, ವಿಸ್ತರಿಸಬೇಕು ಮತ್ತು ಇನ್ನೊಂದನ್ನು ವರ್ಜ್ಯವೆಂದು, ಜನವಿರೋಧಿಯೆಂದು ದೂರೀಕರಿಸಬೇಕು. ಒಂದು ದೊಡ್ಡ ಆಸ್ತಿ, ಇನ್ನೊಂದು ಹೆಣಭಾರ; ಒಂದು ಮಧುರ ಗಾನದಂತೆ, ಇನ್ನೊಂದು ಕುತ್ತಿಗೆಯ ಸುತ್ತ ತೂಗಿಹಾಕಿಕೊಂಡ ಬೀಸುವ ಕಲ್ಲು. ಒಂದು ನಮ್ಮನ್ನು ಉಜ್ವಲ ಭವಿಷ್ಯದತ್ತ ಕೊಂಡೊಯ್ಯುತ್ತದೆ, ಇನ್ನೊಂದು ಅಪಥ್ಯವಾದ ಭೂತದತ್ತ ಎಳೆದು ಬಾಧಿಸುತ್ತದೆ. ಎರಡನ್ನೂ ಗುರುತಿಸಿ ಶುದ್ಧವಾದ್ದನ್ನು ಭವ್ಯವಾದ್ದನ್ನು, ಆತುಕೊಳ್ಳಬೇಕು ಮತ್ತು ಮಲಿನವಾದ್ದನ್ನು, ಅಬದ್ಧವಾದ್ದನ್ನು ತಳ್ಳಿಹಾಕಬೇಕು. ಆಯ್ಕೆ ನಮ್ಮದು ಮತ್ತು ಜೀವನ ನಮ್ಮದು. ದೇವಿಪ್ರಸಾದ್ ಭವಿಷ್ಯದ ಹರಿಕಾರ, ಜನಪರ ದಾರ್ಶನಿಕ.

ದೇವಿಪ್ರಸಾದರು ಬೆಳಗುವ ನಾಳೆಗಳನ್ನು ಬಿಡಿಸಿಟ್ಟಿರುವುದು ಅವರ ಅತ್ಯುಚ್ಚ ಸಾಧನೆ, ಕೊಡುಗೆ. ಅದರಿಂದ ಹಿಂದಕ್ಕೆ ಸರಿಯುವ ಪ್ರಶ್ನೆಯೇ ಇಲ್ಲ. ಹಿಂದಕ್ಕೆ ಸರಿಯುವುದೆಂದರೆ ಕ್ರಮೇಣ ಶಿಲಾಯುಗದತ್ತ ಧುಮುಕುವುದು ಎಂದಾಗುತ್ತದೆ.

**ಡಾ॥ ಜಿ. ರಾಮಕೃಷ್ಣ**
೨-ಎಫ್, ಪವನ ಪರಂಜ್ಯೋತಿ ಅಪಾರ್ಟ್‌ಮೆಂಟ್ಸ್, ೨೨/೧, ೪ನೇ ಅಡ್ಡರಸ್ತೆ
ಕಾವೇರಿ ನಗರ, ಬನಶಂಕರಿ ೩ನೇ ಹಂತ, ಬೆಂಗಳೂರು - ೫೬೦ ೦೮೫



# ಬೆಲೆಗಳು

ತುತ್ತಿನ ಚೀಲ ತುಂಬುವ
ಆಹಾರ ಧಾನ್ಯಗಳ ಬೆಲೆಗಳು
ಗಗನಕ್ಕೇರುತ್ತಲಿವೆ
ಯಾವ ಅಡೆತಡೆ ಇಲ್ಲದೆ

ಏರುತ್ತಿರುವ ಬೆಲೆಗಳ
ನಾಗಾಲೋಟವ ಕಂಡು
ಮುಗಿಲೆತ್ತರದ ಗಗನ ಚುಂಬಿ
ಕಟ್ಟಡಗಳು ನಾಚಿ ತಲೆ ತಗ್ಗಿಸಿವೆ

ಸ್ಕಡ್ ಕ್ಷಿಪಣಿಗಳು
ರಾಕೆಟ್ಟುಗಳ ಸದ್ದಡಗಿ
ನೀರಲ್ಲಿ ಬಿದ್ದ ಪಟಾಕಿಯಂತೆ
ಟುಸ್ಸು ಎಂದು ಬಿದ್ದಿವೆ.

ಉಪಗ್ರಹಗಳು ಹಾದಿ
ಬದಲಿಸುತ್ತಲಿವೆ ಇವುಗಳ
ವೇಗವ ಕಂಡು

ಆಕಾಶಕಾಯಗಳು
ಡಿಕ್ಕಿ ಹೊಡೆಯಬಹುದೆಂದು
ಭಯದಿಂದ ಗದಗದನೆ
ನಡುಗುತ್ತ ದಿಕ್ಕೆಟ್ಟು ಓಡುತ್ತಲಿವೆ.

ಭಯಗೊಂಡ ನಕ್ಷತ್ರ
ಗ್ರಹಗಳನ್ನು ಕಂಡು ಸೂರ್ಯನು
ದಂಗಾಗಿದ್ದಾನೆ ದಿಕ್ಕು ತೋಚದೆ

ಮೊಗದಾರವ ಹಾಕುವ
ಮಹಾಪ್ರಭುಗಳು ಧರೆಯ
ದೊಡ್ಡಣ್ಣನ ಹರಿದ ಪಂಚೆಯ
ತೇಪೆ ಹಾಕುವುದು ಹೇಗೆಂದು
ಚಿಂತಿತರಾಗಿ ಸೂಜಿದಾರವ
ಕೈಯಲ್ಲಿಡಿದು ಮಂಡಿಯೂರಿ ಧಣಿಯ
ಕಣ್ಸನ್ನೆಗಾಗಿ ಕಾತರದಿಂದ ಕಾಯ್ದುಕುಳಿತಿದ್ದಾರೆ

ಮುಂಬೈ ನಗರಿ ಜೂಜುಪೇಟೆಯ
ಕರಡಿ ಕುಣಿತ ಕನಸಿನಲ್ಲಿ
ಬಂದು ಕಾಡುತ್ತಲಿದೆ
ಮಟಾಷ ಮಲಗಿದ ಪೇಟೆಯ

ಚೇತರಿಕೆಗಾಗಿ ಗೂಳಿಗೆ ಕೂಳು
ಹಾಕಲು ಒಂದೊಂದೇ ಸಾರ್ವಜನಿಕರ
ಸೊತ್ತು ಸದ್ದಿಲ್ಲದೆ ಕರುಗುತಿದೆ

ಸುನಾಮಿ ಹೊಡೆತಕ್ಕೆ ಸಿಕ್ಕ
ರಾಜನರಮನೆಯ ರಿಪೇರಿಗೆ
ಗುಡಿಸಿಲಿನವನ ಪುಡಿಗಾಸು
ರಾಕ್ಷಸಿ ಹೊಟ್ಟೆಗೆ ಅರೆಕಾಸು
ಮಜ್ಜಿಗೆ ಸುರಿದಂತೆ

ಜಗದೊಡೆಯ ನಿದ್ರೆಯಿಲ್ಲದೆ
ಅನ್ನ ನೀರು ಬಿಟ್ಟು ಹಾಸಿಗೆ
ಹಿಡಿದಾಗ ಕ್ಷಣ ಕ್ಷಣಕ್ಕೂ
ಅವನ ಆರೋಗ್ಯದ ಚಿಂತೆ
ಮಾಡಲೇಬೇಕಾದ ಅನಿವಾರ್ಯತೆ
ಯಲ್ಲಿರುವ ಈ ನಾಡನ್ನಾಳುವ
ಮಹಾಪ್ರಭುಗಳಿಗೆ ಬೆಳೆ ಕಾಳುಗಳ
ಬೆಲೆ ಜಿಗಿತಗಳು ಯಾತರದ ಲೆಕ್ಕ

ಹಬ್ಬ ಹರಿದಿನಗಳಂತೆ
ಮೇಲಿಂದ ಮೇಲೆ
ಬರುತ್ತಿರುವ ಚುನಾವಣೆಗಳಿಗೆ
ಮತ ಹಾಕಿ ಮರೆಯಾಗಿ
ಮಳೆ ಇಲ್ಲದೆ ಬಾಡಿ ನಿಂತ
ಬೆಳೆಗಳಂತಿರುವ ಬಡಜೀವಗಳಿಗೆ
ಈ ಪುಣ್ಯಭೂಮಿಯಲ್ಲಿ
ಯಾವ ಬೆಲೆ ?
ಯಾತಕ್ಕಾಗಿ ಬೆಲೆ ?

**ಈಶ್ವರಪ್ಪ ಕಟ್ಟಿಮನಿ**
ಮನೆ ನಂ. ೧೮, ಬಸವರಾಜನಗರ, ರಾಘವೇಂದ್ರ ಬಡಾವಣೆ
ಹಳೇ ಆಕಾಶವಾಣಿ ವಿತರಣಾ ಕೇಂದ್ರ ಹಿಂದುಗಡೆ, ಜೇವರ್ಗಿ ರಸ್ತೆ
ಗುಲಬರ್ಗಾ - ೫೮೫ ೧೦೨



ಕಸ್ತೂರಿರಂಗ

# ನಂ. ೩೮ ಅರಳೇಪೇಟೆ ಮುಖ್ಯರಸ್ತೆ...

**ಚಂದ್ರಪ್ರಭ ಕಠಾರಿ**

**ಧೂ**ಮ, ಧೂಪಗಳ ಹೊಗೆಯಿಂದ ಕಗ್ಗತ್ತಲೆ ಗೂಡಾದ ಆ ಕೋಣೆಯಲ್ಲಿ, ಆ ಕೋಣೆಯ ಸಹಿತ ಅಲ್ಲಿದ್ದ ದೇಹಗಳು ವಮ್ಮುಗಟ್ಟಿ ದೇಕುತ್ತಿದ್ದವು. ಗುಡ್ಡೆಯೇ ಆಚೆ ಬೀಳುವಂತಿದ್ದ ಕಣ್ಣುಗಳು, ಗದ್ದ ತಾಕಿಸಿದ ಕೆಂಪುನಾಲಿಗೆ, ಕೈಲಿ ಹಿಡಿದ ಭರ್ಜಿ, ಗುರಾಣಿ ಆಯುಧಗಳೊಂದಿಗೆ ಚಿತ್ರವಿಚಿತ್ರ ಗೊಂಬೆಗಳು – ದೊಡ್ಡವರಿಗೆ ತಮ್ಮನ್ನು ಕಾಪಿಡುವ ದೇವರಂತೆ ಕಂಡರೆ, ಸಣ್ಣವರಿಗೆ ರಾತ್ರಿ ಕನಸಲ್ಲಿ ಕಾಡುವ ರಾಕ್ಷಸರಂತೆ ಕಂಡು ಅವನ್ನು ನೋಡಲಾಗದೆ ಹೆದರಿ ಕೈಗಳಿಂದ ಕಣ್ಣುಮುಚ್ಚಿದ್ದವು. ಅಂಥ ಉಸಿರುಕಟ್ಟಿದ ವಾತಾವರಣದಲ್ಲಿ ಮನುಷ್ಯರಿರಲಿ, ಅಲ್ಲಿದ್ದ ದೇವರುಗಳು ಕೂಡ ಭಕ್ತರು ಕೇಳಿದ ವರವನ್ನು ಕೊಟ್ಟು ಅಲ್ಲಿಂದ ಪರಾರಿಯಾದರೆ ಸಾಕೆಂಬ ಉಮೇದಿನಲ್ಲಿದ್ದವು. ಆದರೆ, ಸೊಂಟಕ್ಕೊಂದು ದಟ್ಟಿ ಮಾತ್ರ ಸುತ್ತಿ ತನ್ನ ಅಷ್ಟಗಲ ದೇಹವನ್ನು ಹರಡಿ ಕುಳಿತಿದ್ದ ಇಳಿವಯಸ್ಸಿನ ಗಡ್ಡಧಾರಿ ಮಾಂತ್ರಿಕ, ನಾಟಿವೈದ್ಯ, ದೇವಾಂಶ ಸಂಭೂತ ಇತ್ಯಾದಿ ನಾಮಾವಳಿಗಳನ್ನು ಹೊತ್ತ ಶಂಭೂನಾಥ - ಅಷ್ಟು ಸುಲಭವಾಗಿ ದೇವರನ್ನಾಗಲಿ ಅಥವಾ ಭಕ್ತರೋಗಿಗಳನ್ನಾಗಲಿ ಬಿಡುವವನಲ್ಲ. ತನ್ನ ಭಕ್ತರೋಗಿಗಳನ್ನು ಕಾಡುವ ಕ್ಷುದ್ರದೇವತೆಗಳನ್ನು ''ಹ್ರಾಂ ಹ್ರೀಂ ಫಟ್'' ಎಂದು ಮಂತ್ರಕ್ಕಿಂತ ಉಗುಳೇ ಜಾಸ್ತಿ ಮಾಡಿ ಬೈಗುಳದ ಮಳೆಯನ್ನೇ ಕರೆದು ಕಂಗಾಲಾಗುವಂತೆ ಮಾಡುತ್ತಿದ್ದನು. ಇನ್ನು ಭಕ್ತರಿಗೆ ಬೇವಿನ ಸೊಪ್ಪಿನ ಹೊಡೆತದ ರುಚಿ ತೋರಿಸಿ, ಆಗಲೂ ಕಣ್ಣೀರು ಬರದಿದ್ದರೆ ಬೂದಿಯನ್ನು ಕಣ್ಣಿಗೆ ಊದಿ ಕಣ್ಣೀರನ್ನು ತರಿಸುತ್ತಿದ್ದನು. ಚಿಕಿತ್ಸೆ ಅಥವಾ ಪೂಜೆ ಮುಗಿದಾಯಿತು ಎನ್ನುವಾಗ್ಗೆ ಕಾಡುಪ್ರಾಣಿಯಂತೆ ಘರ್ಜಿಸಿ ಕಾಣಿಕೆಯನ್ನು ಅಲ್ಲಿಟ್ಟಿದ್ದ ಮರದ ಪೆಟ್ಟಿಗೆ ಹುಂಡಿಯಲ್ಲಿ ತೂರಿಸಲು ಆಜ್ಞಾಪಿಸಿ, ಹಾಗೊಮ್ಮೆ ತಾನ್ಹೇಳಿದ್ದಕ್ಕಿಂತ ಕಡಿಮೆ ಹಣ ಹಾಕಿದರೆ, ಮತ್ತೆರಡು ಬಾರಿ ಬೇವಿನ ಸೊಪ್ಪಿನ ಹೊಡೆತದ ರುಚಿಯನ್ನು ಜ್ಞಾಪಿಸುತ್ತಿದ್ದನು.

ಅಮ್ಮನ ಸೆರಗಲ್ಲೇ ಭಯದಿಂದ ಅವಿತ ಮಗುವಿನ ತಲೆಯ ಮೇಲೆ ತಾಮ್ರದ ಕಡವನ್ನಿಟ್ಟು, ಅದರ ಮೇಲೆ ತನ್ನ ಮೊರದಗಲ ಅಂಗೈಯಿಟ್ಟು, ಕಣ್ಮುಚ್ಚಿ ಪಠಿಸುತ್ತ ಶಂಭೂನಾಥ ನುಡಿದ ''ಈ ಬಾಲಕನಿಗೆ ರಾತ್ರಿ ದುಃಸ್ವಪ್ನಗಳು ಬೀಳುತ್ತಿವೆ!''

''ಹೌದು! ನಿಜ ಸ್ವಾಮಿ. ರಾತ್ರಿಯೆಲ್ಲ ಹಾವು ಹಾವು ಅಂತ ದಿಗಿಲು ಬೀಳುತ್ತೆ ಮಗಾ!''

''ನಾಗದೋಷ! ಇದು ನಾಗದೋಷ! ತಾಯಿತ ಕಟ್ಟುತ್ತೇನೆ. ದಿನಾ ದೇವರ ಮುಂದೆ ನಾಗರಹಾವಿನ ಹಾಗೆ ಮಗುವನ್ನು ಮಲಗಿಸಿ ದೇವರ ಪೂಜೆ ಮಾಡಬೇಕು. ಕನಸು ಬೀಳುವುದು ನಿಲ್ಲುತ್ತದೆ. ಹಾಗೆ ನಿಲ್ಲದಿದ್ದರೆ ಮುಂದಿನ ಅಮಾವಾಸ್ಯೆಗೆ ಬರುವುದು. ನಾಗರ ಕಲ್ಲನ್ನು ಪ್ರತಿಷ್ಠಾಪಿಸಬೇಕು'' ಎಂದು, ''ತಾಯಿತ ತಾ ಇಲ್ಲಿ'' ಎಂದು ಒಳಕೋಣೆಯತ್ತ ನೋಡಿ ಕೂಗಿದ. ಐವತ್ತು ಹರೆಯದ ಹೆಂಗಸೊಬ್ಬಳು ತಾಯಿತವನ್ನು ಹಿಡಿದು ಬಂದು ನಮಸ್ಕರಿಸಿ ಕೊಟ್ಟಳು. ಅದನ್ನು ಮಗುವಿನ ತೋಳಿಗೆ ಕಟ್ಟಿ, ಎರಡು ನೂರರ ಗಾಂಧಿ ನೋಟನ್ನು ಕಾಣಿಕೆ ಹುಂಡಿಗೆ ಹಾಕುವಂತೆ ಗುಟುರಿದ. ತಡಬಡಿಸಿದ ಹೆಂಗಸು ಸೆರಗಿನಲ್ಲಿ ಕಟ್ಟಿದ್ದ ಮೂವತ್ತಾರು ಮಡಿಕೆಗಳಿದ್ದ ಹತ್ತು ಇಪ್ಪತ್ತರ ನೋಟುಗಳನ್ನು ಬಿಡಿಸುತ್ತ, ಇನ್ನೂರು ರೂಪಾಯಿಯನ್ನು ಹೊಂದಿಸಲು ತಿಣಕಾಡುತ್ತ ''ಸ್ವಾಮಿ, ನೂರರ ನೋಟಿಲ್ಲ. ಹತ್ತಿಪ್ಪತ್ತರವು ಆದೀತೇ?'' ಎಂದಳು.

''ನಡಿಯುತ್ತೆ. ಹುಂಡಿಗೆ ಹಾಕಿ ಬೇಗ ನಡಿ, ಬೇರೆಯವರಿಗೆ ದಾರಿ ಬಿಡು'' ಎಂದ.

ಕೋರ್ಟಿನಲ್ಲಿ ವಿಚಾರಣೆ ಮುಗಿದು ಪಾಂಡುರಂಗ ಅಪರಾಧಿಯೆಂದು ಸಾಬೀತಾಗಿ, ಎರಡು ವರ್ಷ ಜೈಲು ಸಜೆಯಾಯಿತು. ಜೈಲಿಗೆ ಹಾಕಿ ಒಂದೆರಡು ದಿನದಲ್ಲೇ ವ್ಯಾಕುಲರಾಗಿದ್ದ ಪಾಂಡುರಂಗ ತೀವ್ರ ಹೃದಯಾಘಾತದಿಂದ ತೀರಿಕೊಂಡರು. ಅಲ್ಲಿಯವರೆಗೂ ಹಾಗೂ ಹೀಗೂ ದೇವರ ಧ್ಯಾನದಲ್ಲಿ ಸಮಾಧಾನ ಕಾಣುತ್ತಿದ್ದ ಶ್ರೀರಂಗ, ಅಪ್ಪನ ಸಾವಿನಿಂದ ಮತ್ತಷ್ಟು ಘಾಸಿಗೊಂಡನು. ಶವಸಂಸ್ಕಾರವಾದ ಮೇಲೆ ಚಿತಾಭಸ್ಮವನ್ನು ಗಂಗೆಗೆ ಸಮರ್ಪಿಸಿಬರುತ್ತೇನೆಂದು ಹೊರಟ. ಹಾಗೆ ಅವನು ಹೊರಟು ಬಹಳ ವರುಷಗಳೇ ಉರುಳಿದರೂ ಮತ್ತೆ ವಾಪಸ್ಸು ಬರದಿದ್ದಾಗ...

''ಅವರು ರಾಮಕೃಷ್ಣಾಶ್ರಮಕ್ಕೆ ಸೇರಿಕೊಂಡು ಸ್ವಾಮೀಜಿಯಾಗಿದ್ದಾರಂತೆ. ಹಿಮಾಲಯದಲ್ಲಿ ತಪಸ್ಸು ಮಾಡಿ ಅಲ್ಲೇ ಸಮಾಧಿ ಹೊಂದಿದರಂತೆ'' ...ಹೀಗೆ ಜನ ತರಹೇವಾರಿಯಾಗಿ ಮಾತಾಡಿಕೊಳ್ಳತೊಡಗಿದರು.

ಹೀಗೆ ಎಂಟು ದಶಕಗಳ ಕಾಲ ನಂಬರ್ ೩೮, ಅರಳೇಪೇಟೆ ಮುಖ್ಯರಸ್ತೆಯಲ್ಲಿನ ಈ ಜಾಗ, ವೈದ್ಯರಲ್ಲಿರುವ ದೇವದಾನವರ ಕಂಡು ಮೂಕವಿಸ್ಮಿತವಾಗಿತ್ತು.

ನಡುಗುವ ಮಗುವನ್ನು ಕಂಕುಳಲ್ಲಿಟ್ಟು. ಮರದ ಪೆಟ್ಟಿಗೆ ಮೇಲಿದ್ದ ತೂತಿನಲ್ಲಿ ನೋಟುಗಳನ್ನು ತುರುಕಿ, ಶಂಭೂನಾಥನ ಕಾಲಿಗೆ ಎರಗಿದಳು. ತನ್ನಂತೆ [illegible]ತೆ ನಿವಾರಣೆಗಾಗಿ ಸರದಿ ಕಾದು ಕುಳಿತವರನ್ನು ದಾಟಿ ಹೊರಕೋಣೆಗೆ ಬಂದಳು. ಅಲ್ಲಿಯೂ ಒತ್ತೊತ್ತಾಗಿ ಕುಳಿತವರ ಮಧ್ಯೆ ಪಾದವಿರಿಸಲು ಜಾಗ ಮಾಡಿಕೊಂಡು, ಗೋಡೆಯಲ್ಲಿ ನೇತುಹಾಕಿದ್ದ ಹೊಗೆಯಿಂದ ಕರಕಲಾಗಿದ್ದ ಮೂವರು ಮನುಷ್ಯರ ಪಟಗಳಿಗೆ ಕೈಮುಗಿದು ರಸ್ತೆಗೆ ಬಂದಳು. ಆ ಮೂರು ಕೋಣೆಯ - ನಂಬರ್ ೩೮, ಅರಳೇಪೇಟೆ ಮುಖ್ಯರಸ್ತೆಯಲ್ಲಿನ ಜಾಗ - ಅತ್ತ ಅಂಗಡಿಮನೆಯೂ ಅಲ್ಲದ ಇತ್ತ ದೇವಾಲಯವೂ ಆಗಿರದ ಕಟ್ಟಡದ ಮುಂದೆ ಇಕ್ಕೆಲಗಳಲ್ಲಿ ಭಿಕ್ಷುಕರು, ಕಾವಿ ತೊಟ್ಟ ಸಾಧುಸಂತರು ನೆರೆದಿದ್ದರು. ಕೆಲವರು ಭಿಕ್ಷೆ ಬೇಡುತ್ತ ಕಾಸಿದ್ದ ತಟ್ಟೆಯಿಂದ ತಾಳ ಹಾಕುತ್ತಿದ್ದರೆ, ಮತ್ತೆ ಕೆಲವರು ಮೋಟು ಬೀಡಿ ಸೇದುತ್ತಿದ್ದರು. ಮತ್ತೊಬ್ಬ ಕುಳಿತಲ್ಲಿಯೇ ಯೋಗಮುದ್ರೆಯಲ್ಲಿ ಧ್ಯಾನಸ್ಥನಾಗಿದ್ದ.

ಕಟ್ಟಡದ ಮೇಲೆ - ಮನುಷ್ಯನ ತಲೆಬುರುಡೆ, ಕಾಳಿ ಮಾತೆಯ ಚಿತ್ರವಿದ್ದ 'ಶಂಭೂನಾಥ ಯಂತ್ರ ಮಂತ್ರ ಚಿಕಿತ್ಸಾಲಯ' ಎಂಬ ಬೋರ್ಡ್ ತೂಗುತ್ತಿತ್ತು. ಆ ಬೋರ್ಡಿನ ಹಿಂದೆ ತುಕ್ಕು ಹಿಡಿದ ಹಳೇ ಬೋರ್ಡೊಂದು ಇದ್ದು ಗಾಳಿ ಬೀಸಿದಾಗ ಒಂದಕ್ಕೊಂದು ಬಡಿದುಕೊಂಡು ಢಮಾರ್, ಢಡಾರೆಂದು ಕರ್ಣಕಠೋರ ಶಬ್ದ ಮಾಡುತ್ತಿತ್ತು. ಹಾಗೆ ಹಾರಾಡುವಾಗ ಹಿಂಬದಿ ಬೋರ್ಡಿನಿಂದ ಕೆಲವು ಅಕ್ಷರಗಳು ಇಣುಕುತ್ತಿದ್ದವು. ಅವೆಂದರೆ ದಪ್ಪಕ್ಷರಗಳಲ್ಲಿ 'ಕಸ್ತೂರಿರಂಗ ಚಿಕಿತ್ಸಾಲಯ' ಎಂದಿದ್ದರೆ, ಕೆಳಗಡೆ ಸಣ್ಣಕ್ಷರಗಳಲ್ಲಿ ಎಡಬದಿಗೆ 'ಡಾ|| ಪಾಂಡುರಂಗ...ಎಮ್.ಬಿ.ಬಿ.ಎಸ್., ಬಲಬದಿಗೆ ಡಾ|| ಶ್ರೀರಂಗ... ಎಮ್.ಬಿ.ಬಿ.ಎಸ್., ಎಮ್.ಡಿ.' ಎಂದಿತ್ತು.

ಡಾ|| ಕಸ್ತೂರಿರಂಗರು ಅಲ್ಲಿ ವೈದ್ಯವೃತ್ತಿ ಪ್ರಾರಂಭಿಸಿದಾಗ ಈಗಿರುವಂತೆ ಅಲ್ಲಿ ಯಾವುದೇ ದೇವರು ದಿಂಡರಿರಲಿಲ್ಲ. ಆದರೂ ಜನಸಾಮಾನ್ಯರಿಂದ ಚಿಕಿತ್ಸಾಲಯ ಕಿಕ್ಕಿರಿದು ತುಂಬಿರುತ್ತಿತ್ತು. ಬರಬಾರದ ಕಾಯಿಲೆಗಳು ಬಂದಾಗಲೂ ಕೂಡ ಅದನ್ನು ವಾಸಿ ಮಾಡುವ ಕೈಗುಣ ಕಸ್ತೂರಿರಂಗರಿಗೆ ಇತ್ತು. ಹಾಗೆ ನೊಂದವರ ಮನ ಮುದಗೊಳಿಸುವ ಮಾಂತ್ರಿಕ ಶಕ್ತಿ ಅವರ ಮಾತಿನಲ್ಲಿತ್ತು. ಕಸ್ತೂರಿರಂಗರ ಆ ದೇವರ ಗುಣದಿಂದಲೇ ಅರಳೇಪೇಟೆ, ಅಕ್ಕಿಪೇಟೆಯಿಂದಲ್ಲದೆ ದೂರದ ನೆಲಮಂಗಲ, ಯಲಹಂಕದಿಂದಲೂ ರೋಗರುಜಿನವೆಂದು ಜನರು ಬರುತ್ತಿದ್ದರು. ಚಿಕಿತ್ಸೆಗೆ ಇಂತಿಷ್ಟೇ ಎಂದು ಹಣ ಕೇಳದ ಅವರ ದೊಡ್ಡತನ - ಹೊರ ಕೋಣೆಯಲ್ಲೊಂದು ಸಣ್ಣ ಮರದಪೆಟ್ಟಿಗೆಯ ಹುಂಡಿಯನ್ನಿಟ್ಟಿತ್ತು. ರೋಗಿಗಳು ತಮ್ಮ ದುಡಿಮೆಗೆ ತಕ್ಕಂತೆ ನಾಲ್ಕಾಣೆಯೋ, ಎಂಟಾಣೆಯೋ ಹಾಕಿ ಕೈಮುಗಿದು ಹೋಗುತ್ತಿದ್ದರು. ಒಮ್ಮೆ ಇಡೀ ನಗರವೇ ಕಾಲರಾ ರೋಗಕ್ಕೆ ತುತ್ತಾಗಿ ತತ್ತರಿಸಿದಾಗ, ಕಸ್ತೂರಿರಂಗರು ತಮ್ಮ ಉಪಕರಣಗಳ ಬ್ಯಾಗನ್ನು ಹಿಡಿದು ಅಹೋರಾತ್ರಿ ಮನೆ ಮನೆಗೆ ಹೋಗಿ ರೋಗಿಗಳನ್ನು ಉಪಚರಿಸಿ ಉಪಕರಿಸಿದ್ದರು.

ಅಂಥ ಮಾನವೀಯ ಮೂರ್ತಿಗೆ ಹುಟ್ಟಿದವರಾರೂ ತಂದೆಗೆ ತಕ್ಕ ಮಕ್ಕಳಾಗಲಿಲ್ಲ. ಮೊದಲ ಮೂವರು ಮಕ್ಕಳು ತಾಯ್ನೆಲದಲ್ಲೇ ತಮ್ಮ ವೈದ್ಯಕೀಯ ಶಿಕ್ಷಣ ಪಡೆದರೂ ಪರದೇಶದಲ್ಲಿರುವ ರೋಗಿಗಳ ಸೇವೆಗೆ ಕಾತರಿಸಿ ಹೊರಟರು. ಉಳಿದ ಕೊನೆಯವ ಪಾಂಡುರಂಗ ತಂದೆಗೆ ಅಭಿಮಾನದ ಮಗನಾಗದೆ ವೈದ್ಯಕೀಯ ಕಾಲೇಜಿನಲ್ಲಿ ಓದುವಾಗಲೇ ಕುಡಿತ, ಮಾದಕವಸ್ತುಗಳ ಚಟಕ್ಕೆ ಬಿದ್ದು ದುಶ್ಚಟಗಳ ಗುಲಾಮನಾಗಿದ್ದ.

ಮಗನನ್ನು ಸನ್ಮಾರ್ಗಕ್ಕೆ ತರಲು ತಂದೆ ಹೂಡಿದ್ದ ಚತುರೋಪಾಯಗಳು, ಅಡ್ಡದಾರಿಯಿಂದ ಹಿಡಿದು ತರುವುದಿರಲಿ ಅವನನ್ನು ಮುಟ್ಟಲೂ ಸಾಧ್ಯವಾಗದೆ ನಿಟ್ಟುಸಿರುಬಿಟ್ಟವು. ಒಡೆದ ಹಾಲು ಹೆಪ್ಪಿಗೆ ಬಾರದೆಂದು ಚಿಂತಿಸಿದ ಕಸ್ತೂರಿರಂಗರು, ಪಾಂಡುರಂಗನಿಗೆ ಸರ್ಕಾರಿ ನೌಕರಿಯೊಂದನ್ನು ಕೊಡಿಸಿ ಶಾಸ್ತ್ರಕ್ಕೊಂದು ಮದುವೆ ಅಂತ ಮಾಡಿ ಮನೆಯಿಂದ ಮನದಾಚೆಗೆ ಹೊರಗಟ್ಟಿದರು.

ದಾಂಪತ್ಯ ಜೀವನದ ಜವಾಬ್ದಾರಿ ಹೆಗಲ ಮೇಲೆ ಬಿದ್ದರೂ, ಪಾಂಡುರಂಗನ ದುಶ್ಚಟಗಳು ಸುಧಾರಣೆ ಕಾಣಲಿಲ್ಲ. ಸರ್ಕಾರಿ ವೈದ್ಯನಾಗಿ ಏನನ್ನೂ ಕಡಿದು ಗುಡ್ಡೆ ಹಾಕದಿದ್ದರೂ, ಕೆಲಸದ ಹೊತ್ತಲ್ಲೇ ಕುಡಿದು ಆಸ್ಪತ್ರೆಯಲ್ಲಿ ರಂಪಾಟ ಮಾಡಿ, ಖ್ಯಾತ ವೈದ್ಯ ತಂದೆಯ ಹೆಸರು ಪತ್ರಿಕೆಗಳಲ್ಲಿ ಬರುವಂತೆ ಮಾಡಿದ್ದ. ಇಳಿವಯಸ್ಸಿನ ಹೆತ್ತ ತಂದೆಯ ಸ್ಥಿತಿ ಇಂತಾದರೆ, ಗಂಡುಮಗುವಿನ ತಂದೆಯಾಗಿದ್ದ ಪಾಂಡುರಂಗನ ಮನೆಯು ಪಾಡು ಸುಡುಗಾಡಾಗಿತ್ತು. ಬರುವ ಸಂಬಳ ವಿಸ್ಕಿ, ರಮ್, ಬ್ರಾಂದಿಯೆಂಬ ದುಬಾರಿ ಮದ್ಯಗಳಿಗಿರಲಿ, ಕೂಲಿಕಾರರು ಕೆಲಸದ ದಣಿವು ನೀಗಲೆಂದು ಕುಡಿಯುವ ಸಾರಾಯಿಗೂ ಸಾಕಾಗುತ್ತಿರಲಿಲ್ಲ. ಹೆಂಡತಿಗೆ ತವರು ಮನೆಯಿಂದ ಹಣ ತರುವಂತೆ ಥಳಿಸಿ, ಪೀಡಿಸುತ್ತಿದ್ದ. ಕೈಸಾಲ ಮಾಡಿ ಮಗಳ ಸಂಸಾರವನ್ನು ನೇರ್ಪು ಮಾಡಲು ಒದ್ದಾಡಿದ ತವರುಮನೆಯವರು, ಕೈಸಾಲ ಹೆಚ್ಚಾಗಿ ಮೈಸಾಲವಾದಾಗ ಮಗಳ ಹಣೆಬರಹವಿಷ್ಟೆ ಎಂದು ಮುಖ ಮರೆಮಾಡಿ ದೂರ ಉಳಿದರು.

ಕಸ್ತೂರಿರಂಗರು ಕಣ್ಣೆದುರಿಗಿದ್ದೊಬ್ಬ ಮಗನ ಕುತ್ಸಿತಾಚಾರಕ್ಕೆ ಕೊರಗಿ, ಕನಲಿದರು. ಆ ವಯಸ್ಸಿನಲ್ಲೂ ಚೈತನ್ಯದ ಬುಗ್ಗೆಯಾಗಿದ್ದವರು ಕೊರಡಾಗಿ, ಮತ್ತೆ ಕೊನರದೆ ಆಗೊಂದು ದಿನ ಕೊನೆಯುಸಿರೆಳೆದರು. ಇಡೀ ಮೈಯೆಲ್ಲ ಮಚ್ಚೆಯಷ್ಟೂ ಬಿಡದಂತೆ ಬಾಸುಂಡೆ ಹೊತ್ತ ಆ ಹೆಣ್ಣುಮಗಳು-ಪಾಂಡುರಂಗನ ಹೆಂಡತಿ, ಇದ್ದೊಬ್ಬ ಮಗುವಿನ ಮುದ್ದು ಮೊಗವನ್ನೂ ನೆನೆಯದೆ ಮಗದೊಂದು ದಿನ ಮನೆಯಿಂದ ಮಾಯವಾದಳು.

ತಂದೆಯ ನಿಧನ, ಹೆಂಡತಿಯ ಪಲಾಯನ - ಪಾಂಡುರಂಗನ ಅಮಲಿನ ಕಣ್ಣುಗಳನ್ನು ತೆರೆಸಿ ಮತ್ತಿನ ಆಚೆಗಿನ ವಾಸ್ತವಲೋಕವನ್ನು ಕಾಣಿಸಿತು. ನೋಡಿದರೆ, ಆರು ವರುಷದ ಮಗ ಶ್ರೀರಂಗ ''ಅಮ್ಮ ಬೇಕೂ...'' ಎಂದು ರಚ್ಚೆಹಿಡಿದು ರೋದಿಸುತ್ತಿದ್ದ. ಹೆಂಡ ತುಂಬಿದ ಹೊಟ್ಟೆ, ಕರುಳು 'ಚುರ್' ಎಂದು, ಅಷ್ಟು ದಿನ ಕುಡಿದು ನೆತ್ತಿಗೇರಿದ್ದ ನಶೆಯೆಲ್ಲ ಭೂಮಿಗಿಳಿಯಿತು. ಇನ್ನು ಕುಡಿತಕ್ಕೆ ಅಲ್ಪವಿರಾಮವಾದರೂ ಹಾಕದಿದ್ದರೆ, ಮಗನ ಭವಿಷ್ಯಕ್ಕೆ ಪೂರ್ಣವಿರಾಮವಾಗುವುದೆಂದು ತಡವಾಗಿ ಯೋಚಿಸಿದ.

ರಾಮಕೃಷ್ಣ ಆಶ್ರಮಕ್ಕೆ ಮಗನನ್ನು ಕರೆತಂದು, ಸ್ವಾಮೀಜಿಯ ಕಾಲಿಗೆ ಎರಗಿ ಪಾದವನ್ನು ಕಣ್ಣೀರಲ್ಲಿ ತೊಳೆದು, ''ತಂದೆ ನೀವೇ, ತಾಯಿ ನೀವೇ. ಬಂಧು ಬಳಗ ಎಲ್ಲ ನೀವೇ...'' ಎಂದು ನುಡಿದ. ಪಾಂಡುರಂಗನ ಪುಣ್ಯಕೋಟಿಯಂಥ ಮಾತನ್ನು, ಅವನ ಮಗನ ಕರುಣಾಜನಕ ಕತೆಯನ್ನು ಕೇಳಿ ಕರಗಿದ ಸ್ವಾಮೀಜಿಗಳು, ಕತೆಯಲ್ಲಿ ಅವನೇ ವ್ಯಾಘ್ರನೆಂಬುದನ್ನು ಗುರುತಿಸದಾದರು. ಮುಗ್ಧ ಮೊಗದ ಶ್ರೀರಂಗನ ಮೈದಡವಿ ಆಶ್ರಮದಲ್ಲಿ ಆಶ್ರಯ ಕೊಟ್ಟು ವಿದ್ಯಾರ್ಜನೆ ಮಾಡುವ ಭರವಸೆಯಿತ್ತರು. ಮತ್ತೊಮ್ಮೆ ಉದ್ದಂಡ ನಮಸ್ಕಾರ ಹಾಕಿ ಅಲ್ಲಿಂದ ಬಂದವನು ಸರ್ಕಾರಿ ವೈದ್ಯವೃತ್ತಿಗೂ ಸಲಾಮ್ ಹೊಡೆದು, ತಂದೆಯ ಚಿಕಿತ್ಸಾಲಯಕ್ಕೆ ಬಂದು ಅವರ ತಿರುಗುವ ಕುರ್ಚಿಯಲ್ಲಿ ಕುಳಿತು ವಿರಾಜಮಾನನಾದನು (?).

ಮೈಮನಸ್ಸಿನ ಯಾವುದೇ ನೋವುಗಳಿಗೆ ಪರಿಹಾರವಾಗಿದ್ದ ದೈವಸ್ವರೂಪಿ ಕಸ್ತೂರಿರಂಗರು ಕಾಲವಾದಾಗ, ದಿನನಿತ್ಯವೂ ಬರುತ್ತಿದ್ದ ಜನ ಅವರಿಲ್ಲದೆ ತಮಗೆ ರೋಗ ಬಂದರೆ ವಾಸಿಮಾಡುವವರು ಯಾರು ಎಂದು ಕಂಗಾಲಾದರು. ಮಗ ಪಾಂಡುರಂಗ ಮತ್ತೆ ಚಿಕಿತ್ಸಾಲಯದ ಬಾಗಿಲನ್ನು ತೆರೆದನಾದರೂ, ಅವನ ಕೆಟ್ಟ ಚರಿತ್ರೆಯ ಆಳ ಅಗಲ ತಿಳಿದಿದ್ದ ಜನರು ಚಿಕಿತ್ಸೆಗಾಗಿ ಅವನಲ್ಲಿಗೆ ಹೋಗಲು ಹೆದರಿದರು. ಮಾಮೂಲಾಗಿ ಬರುವ ಅಂಥ ಜನರ ನಾಡಿಮಿಡಿತವನ್ನು ಬಲ್ಲ ಪಾಂಡುರಂಗ, ಕಾಯಿಲೆ ಕಸಾಲೆ ಇಲ್ಲದಿದ್ದರೂ ತಂದೆಯ ಸಾಂತ್ವನದ ಮಾತು ಕೇಳಲೆಂದೇ ಬರುತ್ತಿದ್ದ ಹಿರೀಕರನ್ನು ಒಮ್ಮೆ ಕರೆಸಿ, ಪಶ್ಚಾತ್ತಾಪದ ಮನವಿ ಮಾಡಿ ಮತ್ತೆ ತನ್ನ ಹಳೆ ಸೂತ್ರದಂತೆ ಪುಣ್ಯಕೋಟಿಯ ಮಾತಾಡಿ ''ಮುಂದೆ ಬಂದರೆ ಹಾಯಬೇಡಿ, ಹಿಂದೆ ಬಂದರೆ ಒದೆಯಬೇಡಿ...'' ಪ್ರಲಾಪಿಸಿದ. ಅವನ ಆ ಮೃದುಮಾತಿಗೆ ಬೆಣ್ಣೆಯಂತೆ ಕರಗಿದ ಹಿರೀಕರು, ಅವನ ಮತ್ತು ಅವನ ಮಗನ ಸ್ಥಿತಿಗೆ ವಿಷಾದಗೊಂಡರು.

ಅಂದಿನಿಂದ ಚಿಕಿತ್ಸಾಲಯದಲ್ಲಿ ಮೊದಲಿನಂತೆ ಜನಸಾಗರವೇ ಬರದಿದ್ದರೂ, ಸಣ್ಣಪುಟ್ಟ ನದಿಗಳಂತೂ ಹರಿದವು. ದೇವಾಲಯವೆಂದು ಭಾವಿಸಿದ ಜಾಗದಲ್ಲಿ ದೇವರು ಬದಲಾದೊಡೆ ಅರಿಕೆಗೆ ಕೊರತೆಯೇನು, ಎಂದು ಜನರು ನಿಶ್ಚಯಿಸಿದಂತಿತ್ತು. ಅಲ್ಲಿಗೆ ''ಬದುಕಿದೆಯಾ ಕುಡುಕ ಜೀವವೇ'' ಎಂದು ಸಮಾಧಾನದ ನಿಟ್ಟುಸಿರಿಟ್ಟ ಪಾಂಡುರಂಗ ಹೊರಕೋಣೆಯಲ್ಲಿಟ್ಟಿದ್ದ ಕಾಣಿಕೆ ಹುಂಡಿಯನ್ನು ತಂದು ತನ್ನ ಟೇಬಲ್ಲಿನ ಮೇಲಿಟ್ಟ.

ಅತ್ತ ಮಗ ಶ್ರೀರಂಗ, ತಂದೆ ತಾಯಿ ಇಲ್ಲದ ತಬ್ಬಲಿ

### ಮನವಿ

"ಹೇ ಪಾರು, ಹೇ ಪಾರು
ಎಂದರಚುವ ಮೈಕಾಸುರನ
ಧ್ವನಿ ಕಿವಿಗಳಿಗೆ ಮುಂಬರುವ
ವರುಷಗಳಲ್ಲಾದರೂ ಬೀಳದಂತೆ
ಪಾರು ಮಾಡೆಂದು ಈಶನಲ್ಲಿ
ಗಣೇಶನಿಟ್ಟ ಮೊರೆ"

ಎನ್. ಶ್ರೀನಿವಾಸ
ಪ್ರ.ದ.ಸ. ಜಿಲ್ಲಾ ಕೃಷಿ ತರಬೇತಿ ಕೇಂದ್ರ
ವಿ. ಸಿ. ಫಾರಂ, ಮಂಡ್ಯ

ತಾನೆಂಬ ಭಾವನೆ ಮೂಡದ ಆಶ್ರಮದ ಶಾಂತ ವಾತಾವರಣದಲ್ಲಿ ಬೆಳೆದ. ಭಗವದ್ಗೀತೆಯ ಪಠಣವಾಗಲಿ, ವೇದ ಉಪನಿಷತ್ತುಗಳ ಅಭ್ಯಾಸದಲ್ಲಾಗಲಿ ಅವನು ತೋರುತ್ತಿದ್ದ ಕುತೂಹಲ, ಆಸಕ್ತಿ ಅವನನ್ನು ಗುರುಗಳ, ಶ್ರೀಗಳ ಅಚ್ಚುಮೆಚ್ಚಿನ ಶಿಷ್ಯನನ್ನಾಗಿಸಿತು. ತರಗತಿಯ ಪಠ್ಯದ ಅಭ್ಯಾಸದಲ್ಲೂ ಮುಂದಿದ್ದು, ಶಾಲೆಯಲ್ಲಿ ಪ್ರತಿ ವರುಷ ಉತ್ತಮ ವಿದ್ಯಾರ್ಥಿಯಾಗಿ ಹೊರಬರುತ್ತಿದ್ದ. ಆದರೆ ಅವನಿಗೆ ಅಧ್ಯಾತ್ಮ ವಿಚಾರಗಳ ಕಡೆಗೆ ಒಲವು ತುಸು ಹೆಚ್ಚಾಗಿಯೇ ಇತ್ತು.

ಒಬ್ಬನೇ ಕನ್ನಡಿ ಮುಂದೆ ನಿಂತು ''ನೀನ್ಯಾರು ?'' ಎಂದು ಪ್ರಶ್ನಿಸಿಕೊಳ್ಳುವುದು.

''ನಾನು ಶ್ರೀರಂಗ''

''ಈ ಶ್ರೀರಂಗನ್ಯಾರು ?''

''ಪಾಂಡುರಂಗರ ಮಗ''

''ಅವರಾರು ?''

''ಅವರು ಕಸ್ತೂರಿರಂಗರ ಮಗ''

''ಅವರಾರು ?''

''.....''

ಹೀಗೆ ವಶೀಕರಣಗೊಂಡವನಂತೆ ಪ್ರಶ್ನೆ ಕೇಳಿ ಕೊಳ್ಳುತ್ತಲೇ ಹೋದಾಗ,

''ನೀನ್ಯಾಕೆ ಇಲ್ಲಿಗೆ ಬಂದೆ ?'' ಎಂಬ ಪ್ರಶ್ನೆ ಬಂದಾಗ ತಬ್ಬಿಬ್ಬಾಗಿ ಯಾವುದೋ ಲೋಕಕ್ಕೆ ಬಂದವನಂತೆ ತನ್ನನ್ನೇ ತಾನು ಪೂರ್ತಿಯಾಗಿ ನೋಡಿಕೊಂಡು ''ನಾನ್ಯಾರು ?'' ಎಂದು ಗೊಂದಲಗೊಳ್ಳುತ್ತಿದ್ದ. ತನಗೆ ಪ್ರತಿ ಬಾರಿ ಆಗುವ ಇಂಥ ವಿಚಿತ್ರ ಅನುಭವಗಳ ಬಗ್ಗೆ ಸ್ವಾಮೀಜಿಯವರಲ್ಲಿ ಚರ್ಚಿಸುತ್ತಿದ್ದ. ಅವನಿಗೆ ಹುಟ್ಟುವ ಇಂಥ ಕುತೂಹಲ ಪ್ರಶ್ನೆಗಳಿಂದ ಉತ್ತೇಜಿತರಾಗಿ ಜನ್ಮ, ಕರ್ಮಸಿದ್ಧಾಂತ ಹೀಗೆ ಮತ್ತಷ್ಟು ಹೊಸ ವಿಚಾರಗಳನ್ನು ತಿಳಿಸುತ್ತಿದ್ದರು.

ಆಧ್ಯಾತ್ಮಿಕ ವಿಷಯಗಳ ಅಭ್ಯಾಸ, ದೇವರ ನಂಬಿಕೆ, ಪೂಜೆ, ಧ್ಯಾನಗಳಲ್ಲಿರುವ ಕೂದಲೆಳೆಯಂಥ ಸೂಕ್ಷ್ಮ ವ್ಯತ್ಯಾಸಗಳು ಮತ್ತು ಬದುಕಲ್ಲಿ ಅವುಗಳ ಪಾತ್ರ, ಶ್ರೀರಂಗನಿಗೆ ಯಾವತ್ತೂ ಹೊಳೆಯಲಿಲ್ಲ. ಅದರ ಬಗ್ಗೆ ಯಾರಲ್ಲೂ ಚರ್ಚಿಸಲಿಲ್ಲ. ಇದರಿಂದ ಆಶ್ರಮದ ನೆರಳಲ್ಲಿ ಶಾಲೆ ಮುಗಿಸಿ, ನಂತರ ಕಾಲೇಜೆಂದು ಹಾಸ್ಟೆಲ್ಲಿನಲ್ಲಿ ಉಳಿದಾಗ ಹಲವು ಬಾರಿ ನಗೆಪಾಟಲಿಗೆ ಗುರಿಯಾಗುತ್ತಿದ್ದ. ಬೆಳಿಗ್ಗೆ ಬೇಗನೆ ಎದ್ದು ಸ್ನಾನ ಮಾಡಿ, ಮಡಿ ಉಟ್ಟು ದೇವರ ಮೂರ್ತಿಯ ಮುಂದೆ ಪೂಜೆಗೆ ಕೂತರೆ ಕಾಲೇಜು ಪ್ರಾರಂಭವಾಗುವ ಹೊತ್ತಾದರೂ ಮೇಲೇಳುತ್ತಿರಲಿಲ್ಲ. ಆಗೆಲ್ಲ ಸಹಪಾಠಿಗಳು 'ಕೂಚು ಭಟ್ಟ', 'ದೇವರಮಗ' ಎಂದೆಲ್ಲ ರೇಗಿಸಿ ಗೋಳು - ಹೊಯ್ದುಕೊಳ್ಳುತ್ತಿದ್ದರು. ಹೊರಗಡೆ ಓಡಾಡುವಾಗ - ದೇವಾಲಯವಿರಲಿ, ದೇವರ ಮೂರ್ತಿಯಂತೆ ಕಾಣುವ ಕಲ್ಲು, ಮಣ್ಣಿನ ಗುಡ್ಡೆ ಇರಲಿ ಅಥವಾ ರಸ್ತೆಯಲ್ಲಿ ಬಿದ್ದಿದ್ದ ಹರಿದ ಕ್ಯಾಲೆಂಡರ್‌ನಲ್ಲಿ ದೇವರಚಿತ್ರ ಕಂಡರೂ ಅಲ್ಲೇ ಚಪ್ಪಲಿ ಕಳಚಿ ಅದಕ್ಕೆ ಪ್ರದಕ್ಷಿಣೆ ಹಾಕಿ, ಮೂವತ್ತಾರು ಬಾರಿ ನಮಸ್ಕರಿಸಿ, ಮಣಮಣ ಮಂತ್ರ ಹೇಳಲು ಪ್ರಾರಂಭಿಸುತ್ತಿದ್ದ. ನೋಡಿದವರು ತನ್ನನ್ನು ಗೇಲಿಮಾಡಿಯಾರು ಎಂಬುದರ ಬಗ್ಗೆಯೂ ಅವನು ತಲೆಕೆಡಿಸಿಕೊಳ್ಳುತ್ತಿರಲಿಲ್ಲ.

ಮುಂದೆ ಪಾಂಡುರಂಗನ ಆಣತಿಯಂತೆ ವೈದ್ಯಕೀಯ ಕಾಲೇಜಿಗೆ ಸೇರಿದ ಶ್ರೀರಂಗನಿಗೆ, ಮೊದಲ ವರುಷಗಳಲ್ಲಿ ಹಣದ ತೊಂದರೆ ಬಹುವಾಗಿ ಕಾಡಿತು. ಪತ್ರ ಬರೆದು ಹಣದ ಅವಶ್ಯಕತೆ ತಿಳಿಸಿದಾಗಲೆಲ್ಲ ಪಾಂಡುರಂಗ ''ಕಳಿಸುತ್ತೇನೆ, ಮಗು. ಪ್ರಾಕ್ಟೀಸ್ ಸರಿಯಾಗಿ ನಡೆಯುತ್ತಿಲ್ಲ, ಪೇಶೆಂಟ್‌ಗಳು ಬರುವುದು ಕಡಿಮೆ'' ಎನ್ನುತ್ತಿದ್ದ. ಆದರೆ ಬರಬರುತ್ತ ತಾನು ಕೇಳಿದ್ದಕ್ಕಿಂತ ಹೆಚ್ಚಿಗೆ ಹಣ ಬರತೊಡಗಿದಾಗ ಬಹುಶಃ ಪ್ರಾಕ್ಟೀಸ್ ಚೆನ್ನಾಗಿ ನಡೆಯುತ್ತಿರಬಹುದೆಂದು ಖುಷಿಪಟ್ಟಿದ್ದ.

ಬಹು ನಿರೀಕ್ಷಿತ ಆ ಒಂದು ದಿನ ಬಂತು. ಹಗಲು ಕಾಲೇಜಿನಲ್ಲಿ, ರಾತ್ರಿಯೆಲ್ಲ ಹಾಸ್ಟೆಲ್ಲಿನಲ್ಲಿ ನಿದ್ದೆಗೆಟ್ಟು ಅಭ್ಯಾಸ ಮಾಡಿ ಶ್ರೀರಂಗ ವೈದ್ಯನಾಗಿ ತೇರ್ಗಡೆಯಾಗಿದ್ದ. ಪಾಂಡುರಂಗನ ಸಂತೋಷಕ್ಕೆ ಸೀಮೆಯೇ ಇರಲಿಲ್ಲ. ತನ್ನಿಂದಾಗಿ ಮಗನಿಗೆ ಭವಿಷ್ಯವೇ ಇಲ್ಲವಾಯಿತು ಅನ್ನುವಾಗ್ಗೆ, ಶ್ರೀರಂಗನನ್ನು ಸಾಕಿ ಸಲುಹಿದ ಆಶ್ರಮದ ಸ್ವಾಮೀಜಿಯ ನೆನೆದು ಕಣ್ಣೀರು ತುಂಬಿಕೊಂಡ. ಮಗನನ್ನು ಅಪ್ಪಿಕೊಂಡು, ಒಂದಷ್ಟು ದಿನ ಆರಾಮವಾಗಿರಲು ಹೇಳಿದ. ಆದರೆ ತಾತ ಕಸ್ತೂರಿರಂಗರನ್ನು ಆದರ್ಶವಾಗಿರಿಸಿಕೊಂಡು ಅವರನ್ನೇ ತಲೆತುಂಬಿಕೊಂಡವನು ಅದಕ್ಕೆ ಒಪ್ಪದೆ ರೋಗಿಗಳ ಸೇವೆ ಮಾಡುವ ಧಾವಂತ ತೋರಿದ.

ಕಸ್ತೂರಿರಂಗ ಚಿಕಿತ್ಸಾಲಯದ ಬೋರ್ಡು ಬದಲಾಗಿ, ಅಪ್ಪ ಮಗನ ಹೆಸರಿರುವ ಹೊಸ ಬೋರ್ಡ್ ನೇತಾಕಿಕೊಂಡಿತು. ಅಪ್ಪ, ಮಗ ಒಂದೇ ಟೇಬಲ್ಲಿನಲ್ಲಿ ಎದುರು ಬದುರು ಕುಳಿತು ಕೆಲಸಮಾಡುವುದು, ಜನರಿಗೆ ಒಂದು ರೀತಿ ಪುಳಕ, ಕುತೂಹಲ ಉಂಟುಮಾಡಿತು. ವಯಸ್ಸಿನ ಅಂತರವಿಲ್ಲದೆ ರೋಗಿಗಳನ್ನು ಮಕ್ಕಳಂತೆ ಮಾತಾಡಿಸುವ ಶೈಲಿಯಿಂದ ಜನರಿಗೆ ಶ್ರೀರಂಗ ಆತ್ಮೀಯವಾಗಿ ಕಂಡ. ಕೆಲವರು ಪದೇಪದೇ ಪುಸ್ತಕವನ್ನು ನೋಡಿ ಔಷಧಿ ಬರೆದುಕೊಡುವುದನ್ನು ನೋಡಿ ''ಡಾಕ್ಟ್ರು ಇನ್ನೂ ಎಳಸು. ಈ ಹೊಸ ಡಾಕ್ಟ್ರುಗಿಂತ ಹಳೆ ಪೇಶೆಂಟ್‌ಗಳು ತಾವೇ ವಾಸಿ'' ಎಂದು ಆಡಿಕೊಂಡು, ಪಾಂಡುರಂಗನಿಗೆ ತೋರಿಸಲು ಸರದಿಯಲ್ಲಿ ಕಾಯುತ್ತಿದ್ದರು. ಚಿಕಿತ್ಸೆ, ಉಪಚಾರದ ನಂತರ ರೋಗಿಗಳ ಇಷ್ಟಾನಿಷ್ಟಗಳನ್ನು ಕೇಳುವುದರ ಜೊತೆಗೆ ಧರ್ಮ, ಕರ್ಮ, ದೇವರು, ದಿಂಡರು, ಪೂಜೆ, ಧ್ಯಾನ ಎಂದೆಲ್ಲ ಶ್ರೀರಂಗ ಬೋಧಿಸುತ್ತಿದ್ದದ್ದು ಹಲವರಿಗೆ ಪ್ರಿಯವಾಗಿ ಅವನದೇ ರೋಗಿಗಳ ಗುಂಪೊಂದು ಸೃಷ್ಟಿಯಾಯಿತು.



ವೃತ್ತಿಜೀವನಕ್ಕೆ ಹೊಂದಿಕೊಳ್ಳುತ್ತಿದ್ದೇನೆ ಎಂದುಕೊಳ್ಳುತ್ತಿದ್ದಾಗಲೇ, ಶ್ರೀರಂಗನಿಗೆ ಚಿಕಿತ್ಸೆಗೆಂದು ಪಾಂಡುರಂಗನ ಬಳಿ ಮಾಮೂಲಿ ಬರುತ್ತಿದ್ದ ರೋಗಿಗಳ ಚಲನವಲನಗಳು ಮತ್ತು ತನ್ನಪ್ಪನ ನಡವಳಿಕೆ ವಿಚಿತ್ರವಾಗಿ ಕಾಣತೊಡಗಿತು. ಮೊದಲಿಗೆ ಅವನು ಗಮನಿಸಿದ್ದು ತಾತ ಇಟ್ಟಿದ್ದ ಕಾಣಿಕೆ ಹುಂಡಿ ಹೊರಗಿರದೆ ಟೇಬಲ್ಲಿನ ಮೇಲಿರುವುದು. ನಂತರ ಪಾಂಡುರಂಗ ಏಕಪ್ರಕಾರವಾಗಿ ಚಿಕಿತ್ಸೆಯ ಹಣ ತೆಗೆದುಕೊಳ್ಳದೆ, ಸಿರಿವಂತರ ಬಳಿ ದುಪ್ಪಟ್ಟು ಹಣ ಪೀಕುತ್ತಿದ್ದ. ಹಾಗೆಂದು ಬಡವರ ಬಳಿ ಕಡಿಮೆಯೇನು ತೆಗೆದುಕೊಳ್ಳುತ್ತಿರಲಿಲ್ಲ.

ಹೆಚ್ಚೆಂದರೆ ಸಾಮಾನ್ಯರು ಕೊಡುವ ಹಣವನ್ನು ಹುಂಡಿಗೆ ಹಾಕಲು ಹೇಳಿ, ಸಿರಿವಂತರು ಕೊಟ್ಟಿದ್ದನ್ನು ಜೇಬಿಗೆ ಇಳಿಸುತ್ತಿದ್ದ. ಕೆಲವರು ತಮ್ಮಲ್ಲಿ ಹಣವಿಲ್ಲವೆಂದು ಗೋಗರೆದಾಗ ಒಂದೆರೆಡು ಬಾರಿ ಶ್ರೀರಂಗ ''ಪರವಾಗಿಲ್ಲ, ಹೋಗಿ'' ಎಂದು ಕಳುಹಿಸಿದ್ದ. ಅದಕ್ಕೆ ಸಿಟ್ಟಿಗೆದ್ದ ಪಾಂಡುರಂಗ ''ನಿನಗೆ ಖರ್ಚುವೆಚ್ಚ, ವ್ಯವಹಾರ ತಿಳಿಯೋದಿಲ್ಲ'' ಎಂದು ಹಣಕಾಸಿನ ವಿಷಯದಲ್ಲಿ ಮೂಗು ತೂರಿಸದಿರುವಂತೆ ಗದರಿಸಿದ್ದ. ಶ್ರೀರಂಗ ತಾತನಿಗಿದ್ದ ಜನಸಾಮಾನ್ಯರ ಕಾಳಜಿ, ಕರುಣೆ ಅವರಪ್ಪನಲ್ಲಿ ಕಾಣೆಯಾಗಿರುವುದನ್ನು ಕಂಡು ಬೇಸರ ಪಟ್ಟ.

ಆದಿನ ಬೆಳಿಗ್ಗೆ ಅಪ್ಪ, ಮಗ ಇಬ್ಬರೂ ಕೆಲಸಕ್ಕೆ ಹೊರಟಾಗ, ಪಾಂಡುರಂಗ ''ನೋಡು ರಂಗ, ಕೆಲವು ಮೆಡಿಸನ್ನು ಖಾಲಿಯಾಗಿದೆ. ತರೋದಿಕ್ಕೆ ಹೋಗ್ತಿದೀನಿ. ಕ್ಲಿನಿಕ್ ಕಡೆ ನೋಡ್ಕೊ, ಸಂಜೆ ಹೊತ್ತಿಗೆ ಬರ್ತೀನಿ'' ಎಂದು ಹೇಳಿ ಮನೆಯಿಂದ ಹೊರಟ. ಶ್ರೀರಂಗ ಚಿಕಿತ್ಸಾಲಯದ ಬಾಗಿಲು ತೆಗೆದು, ಆಗಲೇ ಕಾಯುತ್ತಿದ್ದ ರೋಗಿಗಳನ್ನು ಉಪಚರಿಸುತ್ತ ಕುಳಿತ. ಬಂದ ಕೆಲವರು ಪಾಂಡುರಂಗರೇ ತಮ್ಮನ್ನು ನೋಡಬೇಕೆಂದಾಗ ಸಂಜೆಗೆ ಬರಲು ತಿಳಿಸಿದ. ಇಬ್ಬರು ಕಾಲೇಜು ಯುವಕರು ಅವರು ಬರುವವರೆಗೆ ಕಾಯುತ್ತೇವೆಂದು ಅಲ್ಲೇ ಉಳಿದರು. ತಲೆಕೂದಲು ಕೆದರಿಕೊಂಡು, ಮಾಸಿದ್ದ ಜೀನ್ಸ್‌ಪ್ಯಾಂಟ್ ತೊಟ್ಟಿದ್ದ ಅವರು ಕುಡಿದವರಂತೆ ನಿಲ್ಲಲಾರದೆ ತಟ್ಟಾಡುತ್ತಿದ್ದರು. ಮಾತಾಡುವ ಶೈಲಿಯಲ್ಲಿ ಶ್ರೀಮಂತಿಕೆಯ ಅಹಂಕಾರ, ಸೊಕ್ಕು ತುಂಬಿ ತುಳುಕಾಡುತ್ತಿತ್ತು.

ಮಧ್ಯಾಹ್ನ ಊಟಕ್ಕೆಂದು ಚಿಕಿತ್ಸಾಲಯ ಮುಚ್ಚುವ ಸಮಯವಾದರೂ ಯುವಕರು ಅಲ್ಲೇ ಕುಳಿತದ್ದನ್ನು ನೋಡಿ ''ನೀವು ಕಾಯುವುದರಿಂದ ಪ್ರಯೋಜನವಿಲ್ಲ. ಅವರು ಸಂಜೆಗೇ ಬರುವುದು. ಅರ್ಜೆಂಟಿದ್ದರೆ ನಾನೇ ನೋಡುತ್ತೇನೆ'' ಎಂದ ಶ್ರೀರಂಗ. ಒಮ್ಮೆಗೆ

ಬುಸುಗುಡುತ್ತ ಕುಳಿತಲ್ಲಿಂದ ಎದ್ದ ಒಬ್ಬ "ನಮಗೆ... ಡ್ರಗ್ಸ್ ಬೇಕು, ಡ್ರಗ್ಸ್. ಕೊಡ್ತೀರಾ? ದೊಡ್ಡದಾಗಿ ಅಡ್ವಾನ್ಸ್ ಮೊದ್ಲೆ ಇಸ್ಕೊತೀರಾ! ಹೇಳಿದ್ ಟೈಮ್ಗೆ ಕೊಡೋಕಾಗಲ್ವ?" ಎಂದು ತಿರುಗಿಬಿದ್ದ. ಶ್ರೀರಂಗನಿಗೆ ಒಂದು ಕ್ಷಣ ಅವಾಕ್ಕಾಗಿ. ಏನೊಂದೂ ಹೊಳೆಯಲಿಲ್ಲ.

ಚಿಕಿತ್ಸಾಲಯದ ಬಾಗಿಲ ಬಳಿ ಯುವಕರು ಸನ್ನೆ ಮಾಡಿದಾಗ ಪಾಂಡುರಂಗ ಎದ್ದುಹೋಗಿ ಅವರ ಬಳಿ ಗುಸುಗುಸು ಮಾತಾಡಿಬರುತ್ತಿದ್ದ, ಕೆಲವರು ಹತ್ತಿರ ಬಂದು ಕಿವಿಯಲ್ಲಿ ಏನೋ ಉಸುರಿದಾಗ ಪ್ಯಾಕೇಟೊಂದನ್ನು ಕೊಟ್ಟು ಹಣ ಪಡೆಯುತ್ತಿದ್ದ, ಮತ್ತೆ ಕೆಲವೊಮ್ಮೆ ಸಿರಿಂಜ್ ಮತ್ತು ಔಷಧಿಯನ್ನು ಕೊಟ್ಟು ಅವರೇ ಚುಚ್ಚಿಕೊಳ್ಳಲು ಹೇಳುತ್ತಿದ್ದಾಗ, ಶ್ರೀರಂಗ ಕೇಳಿದರೆ "ಷುಗರ್ ಪೇಶೆಂಟ್, ಅವರಿಗೆ ರೂಢಿಯಿದೆ" ಎನ್ನುತ್ತಿದ್ದ. ತನ್ನಪ್ಪನ ವಿಚಿತ್ರ ನಡವಳಿಕೆಗೆ ಶ್ರೀರಂಗನಿಗೆ ಈಗ ಉತ್ತರ ಸಿಕ್ಕಂತಾಗಿತ್ತು. ಅತೀವ ಯಾತನೆಪಡುವ ರೋಗಿಗಳಿಗೆ ಕೊಡುವ ನಿದ್ರೆ ಮಾತ್ರೆ, ಅರವಳಿಕೆ ಮದ್ದನ್ನು ಸೇವಿಸಿ ಅಮಲಿನಲ್ಲಿ ಇರಬಯಸುವ ಗಿರಾಕಿಗಳ ಹಿಂಡೇ ತನ್ನಪ್ಪನ ಬಳಿಯಿದೆ. ಯುವಕರ ಜೀವನ ನಾಶಮಾಡುವ ಇಂಥ ಪೈಶಾಚಿಕ ಧಂಧೆಯನ್ನು ಸ್ವತಃ ವೈದ್ಯರಾಗಿ ಮಾಡುತ್ತಿರುವುದನ್ನು ಕಂಡು ಶ್ರೀರಂಗನಿಗೆ ಅಸಹ್ಯವಾಯಿತು.

ಸಂಜೆ ಚಿಕಿತ್ಸಾಲಯಕ್ಕೆ ಪಾಂಡುರಂಗ ತಡವಾಗಿ ಬರುವ ಹೊತ್ತಿಗೆ ಮಾದಕ ವ್ಯಸನಿಗಳ ದಂಡೇ ಅವನಿಗಾಗಿ ಕಾಯುತ್ತಿತ್ತು. ಮಗನ ಮುಂದೆ ತನ್ನ ಕಳ್ಳ ವ್ಯವಹಾರವನ್ನು ತೋರ್ಪಡಿಸಿಕೊಳ್ಳಲು ಇಚ್ಛಿಸದೆ ಎಲ್ಲರಿಗೂ ಮರುದಿನ ಬರಲು ಹೇಳುತ್ತಿದ್ದ. ಆದರೆ ನಶೆ ಏರಿಸುವ ತವಕದಲ್ಲಿದ್ದ ನಿಶಾಚರರಿಗೆ ಯಾವುದೇ ಮಾತನ್ನು ಕೇಳುವ ಸ್ಥೈರಣೆ ಇರಲಿಲ್ಲ. ಚಿಕಿತ್ಸಾಲಯದ ತುಂಬ "ಈಗಲೇ ಬೇಕು, ಈಗಲೇ ಬೇಕು"ಎನ್ನುವ ಕೂಗಾಟ ಜಾಸ್ತಿಯಾಗಿ, ಬೆಲ್ಲದ ಮೇಲೆ ನೊಣ ಮುತ್ತಿದಂತೆ ಪಾಂಡುರಂಗನ ಮೇಲೆ ಬಿದ್ದರು. ಅವನ ಕೈಲಿದ್ದ ರಟ್ಟಿನ ಡಬ್ಬಕ್ಕೆ ಕಿತ್ತಾಟ, ಎಳೆದಾಟ ಜೋರಾದಾಗ - ಕೋಪಸಿಟ್ಟುಗಳೇನೆಂದು ಗೊತ್ತಿರದ ಶ್ರೀರಂಗ ದುಮುಗುಡುತ್ತ ಬಂದು ಅಪ್ಪನ ಕೈಲಿದ್ದ ಸರಕನ್ನು ಕಸಿದುಕೊಂಡು ರಸ್ತೆಗೆ ತಂದು ಎಸೆದುಬಿಟ್ಟ. ಅವನು ಎಸೆದ ರಭಸಕ್ಕೆ ಅದರೊಳಗಿದ್ದ ಚಿಕ್ಕ ಔಷಧಿ ಬಾಟಲಿಗಳು, ಸಿರಿಂಜ್‌ಗಳು, ಮಾತ್ರೆಗಳ ಸ್ಟ್ರಿಪ್‌ಗಳು ಚೆಲ್ಲಾಪಿಲ್ಲಿಯಾದವು. ಅವು ರಸ್ತೆಯಲ್ಲಿ ಒಂದಾದ ಮೇಲೊಂದರಂತೆ ವೇಗದಿಂದ ಓಡುವ ವಾಹನಗಳ ಚಕ್ರಕ್ಕೆ ಸಿಕ್ಕು ಪುಡಿಪುಡಿಯಾದವು.

"ನೀವೆಲ್ಲ ಹಾಳಾಗಿ ಹೋಗ್ತೀರಾ! ನರಕಕ್ಕೆ ಹೋಗ್ತೀರಾ!" ಎಂದು ಜೋರಾಗಿ ಕೂಗಿದ ಶ್ರೀರಂಗ ಅಲ್ಲಿಂದ ಕಾಲ್ತೆಗೆದ.

ಇಷ್ಟು ದಿನ ಮುಚ್ಚಿಟ್ಟಿದ್ದ ತನ್ನ ಸಂಪಾದನೆಯ ಗುಟ್ಟೆಲ್ಲ ಮಗನೆದುರಿಗೆ ರಟ್ಟಾಗಿದ್ದಕ್ಕೆ ಪಾಂಡುರಂಗ ಕಳವಳಗೊಂಡ. ಅವನಿಗೆ ಹೇಗೆ ಸಮಜಾಯಿಷಿ ಹೇಳುವುದೆಂದು ಯೋಚಿಸುತ್ತ, ಎಂದಿಗಿಂತ ಹೆಚ್ಚಾಗಿಯೇ ಕುಡಿದು ರಾತ್ರಿ ಮನೆಗೆ ಬಂದ. ಶ್ರೀರಂಗ ದೇವರಮನೆಯಲ್ಲಿ ಮುಡಿ ಉಟ್ಟು ಧ್ಯಾನ ಭಂಗಿಯಲ್ಲಿ ಶಿಲೆಯಾಗಿದ್ದ. ಹಾಗೆ ರಾತ್ರಿ ಅದೆಷ್ಟು ಹೊತ್ತು ಇದ್ದನೋ, ಬೆಳಿಗ್ಗೆ ಎದ್ದು ನೋಡಿದರೆ ಅಲ್ಲೇ ನಿದ್ದೆ ಹೋಗಿದ್ದ.

ಪಾಂಡುರಂಗ ಎಬ್ಬಿಸಿ ಕಾಫಿ ಕೊಟ್ಟರೂ ಕುಡಿಯಲಿಲ್ಲ. ಶ್ರೀರಂಗನನ್ನು ಓದಿಸಲು ಇದ್ದ ಹಣದ ಕೊರತೆಯ ಬಗ್ಗೆ ಹೇಳುತ್ತ "ನಿನ್ನ ಮೆಡಿಕಲ್ ಕಾಲೇಜಿನ ಖರ್ಚನ್ನು ಹೊಂದಿಸುವಷ್ಟು ನನ್ನ ಸಂಪಾದನೆಯಿರಲಿಲ್ಲ. ಆಗ ಕಾಣಿಸಿದ್ದು ಇದೊಂದೇ ದಾರಿ. ಡ್ರಗ್ಸ್ ಬೇಕೆಂದು ಬರುವುದಾದರೂ ಯಾರು? ಎಲ್ಲಾ ಶ್ರೀಮಂತರೇ. ಅಪ್ಪಂದಿರು ಕದ್ದು ಮಾಡಿದ ಕಪ್ಪು ಹಣವನ್ನು ಚೆಲ್ಲಿ ಮೋಜು ಮಾಡುವವರು. ಇದರಿಂದ ಬಡವರಿಗೆ ಯಾವ ಅನ್ಯಾಯವಾಗಿದೆ?..." ಎಂದೆಷ್ಟೇ ಹೇಳಿದರೂ ಶ್ರೀರಂಗನಿಗೆ ಸಮಾಧಾನವಾಗಲಿಲ್ಲ. 'ಯಾವ ಜನರಾದರೇನು? ಅವರು ಮನುಷ್ಯರಲ್ಲವೇ, ಒಮ್ಮೆ ನಾನೂ ಹಾಗೆ ಹಾಳಾಗಿದ್ದರೆ ನೀವು ವ್ಯಥೆಪಡುತ್ತಿರಲಿಲ್ಲವೆ, ಇಂಥ ಮನೆಹಾಳು ದುಡ್ಡಿಂದ ನಾನು ಡಾಕ್ಟರ್ ಆಗಬೇಕಿತ್ತಾ' ಎಂದು ಗೋಳಾಡತೊಡಗಿದ.

ಸಾಕಷ್ಟು ಹೇಳಿ, ಅವನೇ ಸಮಾಧಾನ ಮಾಡಿಕೊಳ್ಳುತ್ತಾನೆಂದು ಪಾಂಡುರಂಗ ಚಿಕಿತ್ಸಾಲಯಕ್ಕೆ ಬಂದ. ರಾತ್ರಿ ನಡೆದ ರಾದ್ಧಾಂತ ದೊಡ್ಡ ಸುದ್ದಿಯಾಗಿ, ಪೊಲೀಸರಿಗೆ ವಿಷಯ ತಿಳಿದು ಪಾಂಡುರಂಗನಿಗಾಗಿ ಕಾಯುತ್ತಿದ್ದರು. ಅವನು ಕಂಡೊಡನೆ ಕೈಗೆ ಕೋಳ ತೊಡಿಸಿ ಠಾಣೆಗೆ ಕರೆದೊಯ್ದರು.

ಅಪ್ಪ ಜೈಲಿಗೆ ಹೋದ ವಿಷಯ ತಿಳಿದು ಆಘಾತಗೊಂಡ ಶ್ರೀರಂಗನಿಗೆ ಚೇತರಿಸಿಕೊಳ್ಳಲಾಗಲಿಲ್ಲ. ತಾನು ಮಾಡಿದ ಕುಕೃತ್ಯಕ್ಕೆ ತಕ್ಕ ಶಾಸ್ತಿಯಾಯಿತು ಎಂದು ಅವನು ಕಲಿತ ವಿದ್ಯೆ ಹೇಳಿದರೆ, ತನ್ನನ್ನು ವೈದ್ಯನನ್ನಾಗಿ ಮಾಡಲು ತನ್ನಪ್ಪ ಇಂಥ ನೀಚತ್ವಕ್ಕೆ ಇಳಿಯಬೇಕಾಯಿತೆಂದು ಶ್ರೀರಂಗನ ಹೃದಯ ಹೇಳಿತು. ಗೊಂದಲದ ಗೂಡಾಗಿದ್ದ ಅವನ ಮನಸ್ಸು ಧ್ಯಾನದ ಮೊರೆಹೊಕ್ಕಿತು. 'ಈ ಬದುಕಿಗೇನು ಅರ್ಥ? ಈ ನೋವಿಗೆ ಕೊನೆಯೆಲ್ಲಿ?' ಎಂದು ಚಿಂತಿಸತೊಡಗಿದ.

ಶ್ರೀರಂಗನ ಮಾತನ್ನು ಕೇಳುವ ಸಲುವಾಗಿ ಬರುತ್ತಿದ್ದ ಜನರು ಮತ್ತೆ ಚಿಕಿತ್ಸಾಲಯ ತೆರೆಯಬೇಕೆಂದು ದುಂಬಾಲು ಬಿದ್ದರು. ಜನರ ಸಂಪರ್ಕದಲ್ಲಿದ್ದರೆ ಬೇಗುದಿ ಕಡಿಮೆಯಾಗುವುದೆಂದು ತಿಳಿ ಹೇಳಿದರು. ಅವರ ಮಾತಿಗೆ ಮಣಿದು ಶ್ರೀರಂಗ ಚಿಕಿತ್ಸಾಲಯ ತೆರೆದ. ಆದರೆ ರೋಗಿಗಳು ಕಡಿಮೆ ಸಂಖ್ಯೆಯಲ್ಲಿ ಬರುತ್ತಿದ್ದು, ಅವನ ಆಧ್ಯಾತ್ಮಿಕ ಬೋಧನೆಯನ್ನು ಕೇಳಲು ಜನ ಬರುವುದು ಜಾಸ್ತಿಯಾಯಿತು. ಜನರ ಅಭೀಪ್ಸೆಯಂತೆ ಶಿರಡಿ ಸಾಯಿಬಾಬನ ಮೂರ್ತಿಯನ್ನು ಒಳಮನೆಯಲ್ಲಿ ಪ್ರತಿಷ್ಠಾಪಿಸಲಾಯಿತು. ಜೊತೆಗೆ ಬೆಳಿಗ್ಗೆ, ಸಂಜೆ ಭಜನೆಗಳು ನಡೆಯಲು ಪ್ರಾರಂಭವಾದವು.

ಕೋರ್ಟಿನಲ್ಲಿ ವಿಚಾರಣೆ ಮುಗಿದು ಪಾಂಡುರಂಗ ಅಪರಾಧಿಯೆಂದು ಸಾಬೀತಾಗಿ, ಎರಡು ವರ್ಷ ಜೈಲು ಸಜೆಯಾಯಿತು. ಜೈಲಿಗೆ ಹಾಕಿದ ಒಂದೆರಡು ದಿನದಲ್ಲೇ ವ್ಯಾಕುಲರಾಗಿದ್ದ ಪಾಂಡುರಂಗ ತೀವ್ರ ಹೃದಯಾಘಾತದಿಂದ ತೀರಿಕೊಂಡರು. ಅಲ್ಲಿಯವರೆಗೂ ಹಾಗೂ ಹೀಗೂ ದೇವರ ಧ್ಯಾನದಲ್ಲಿ ಸಮಾಧಾನ ಕಾಣುತ್ತಿದ್ದ ಶ್ರೀರಂಗ, ಅಪ್ಪನ ಸಾವಿನಿಂದ ಮತ್ತಷ್ಟು ಘಾಸಿಗೊಂಡನು. ಶವಸಂಸ್ಕಾರವಾದ ಮೇಲೆ ಚಿತಾಭಸ್ಮವನ್ನು ಗಂಗೆಗೆ ಸಮರ್ಪಿಸಿ ಬರುತ್ತೇನೆಂದು ಹೊರಟ. ಹಾಗೆ ಅವನು ಹೊರಟು ಬಹಳ ವರುಷಗಳೇ ಉರುಳಿದರೂ ಮತ್ತೆ ವಾಪಸ್ಸು ಬರದಿದ್ದಾಗ...

"ಅವರು ರಾಮಕೃಷ್ಣಾಶ್ರಮಕ್ಕೆ ಸೇರಿಕೊಂಡು ಸ್ವಾಮೀಜಿ ಯಾಗಿದ್ದಾರಂತೆ. ಹಿಮಾಲಯದಲ್ಲಿ ತಪಸ್ಸು ಮಾಡಿ ಅಲ್ಲೇ ಸಮಾಧಿ ಹೊಂದಿದರಂತೆ" ...ಹೀಗೆ ಜನ ತರಹೇವಾರಿಯಾಗಿ ಮಾತಾಡಿಕೊಳ್ಳತೊಡಗಿದರು.

ಹೀಗೆ ಎಂಟು ದಶಕಗಳ ಕಾಲ ನಂಬರ್ ೩೮, ಅರಳೇಪೇಟೆ ಮುಖ್ಯರಸ್ತೆಯಲ್ಲಿನ ಈ ಜಾಗ, ವೈದ್ಯರಲ್ಲಿ ಇರುವ ದೇವದಾನವರ ಕಂಡು ಮೂಕವಿಸ್ಮಿತವಾಗಿತ್ತು.

ಶಂಭೂನಾಥನ ಮಂತ್ರ ಪಠಣ ಮಾತ್ರ ಕೇಳುತ್ತಿದ್ದ 'ಶಂಭೂನಾಥ ಯಂತ್ರ ಮಂತ್ರ ಚಿಕಿತ್ಸಾಲಯ'ದ ಮುಂದೆ ಇದ್ದಕ್ಕಿದ್ದಂತೆ ಜನರ ಕೂಗಾಟ, ಕಿರುಚಾಟ ಶುರುವಾಯಿತು. ದೇವಾಲಯದ ವಾತಾವರಣ ಸೃಷ್ಟಿಯಾಗಲೆಂದು ಭಿಕ್ಷೆ

ಬೇಡಲು ಬಿಟ್ಟರೆ ತನ್ನ ಕಮಾಯಿಗೆ ಕುತ್ತು ತಂದರಲ್ಲಾ! ಎಂದು ಶಂಭೂನಾಥ ಗೊಣಗುತ್ತ ಹೊರಬಂದ. ಅಲ್ಲೊಬ್ಬ ಕಾವಿಧಾರಿ ''ಬಡ್ಡೀ ಮಕ್ಳ! ಕೂತಲ್ಲೆ ನಿಮ್ಗೆ ದುಡ್ಡು ಬೇಕಾ? ಹೋಗ್ರೋ, ಯಾವುದಾದರೂ ಚಾಕ್ರಿ ಮಾಡಿ ಹೊಟ್ಟೆ ತುಂಬಿಸ್ಕೊಳ್ಳಿ. ಒಳಗೊಬ್ಬ ಎಲ್ಲ ತಲೆ ಮೇಲೆ ಕೈಯಿಟ್ಟು ದುಡ್ಡು ಮಾಡ್ತಿದ್ರೆ, ನೀವ್‌ಗಳು ಎಲ್ರ ಕಾಲ್ ಹಿಡ್ದು ಕಾಸು ಮಾಡ್ತೀರಾ!'' ಎಂದು ಅಲ್ಲಿ ಕುಳಿತಿದ್ದ ಸನ್ಯಾಸಿ, ಭಿಕ್ಷುಕರನ್ನು ಕೋಲಿನಿಂದ ಹಿಗ್ಗಾಮುಗ್ಗಾ ಬಾರಿಸುತ್ತಿದ್ದ. ಅವನ ರೌದ್ರತೆಯಿಂದ ಭಯ ಭೀತರಾದ ಭಿಕ್ಷುಕರು, ಭಕ್ತರು ಒದೆ ತಿಂದು ದಿಕ್ಕಾಪಾಲಾಗಿ ಕಿರುಚುತ್ತ ಓಡುತ್ತಿದ್ದರು.

ಓಡೋಡಿ ಬಂದ ಶಂಭೂನಾಥ ಅವನ ಕೈ ಹಿಡಿದು ಹೊಡೆವುದನ್ನು ನಿಲ್ಲಿಸಿ ''ಯಾರಯ್ಯ ನೀನು? ಎಲ್ಲುನ್ನೂ ಯಾಕ್ ಹೊಡೀತಿದೀಯ?'' ಎಂದು ಕೇಳಿದ.

''ನಾನ್ಯಾರು ಅಂತ ಹೇಳ್ತೀನಿ. ಇವ್ರೆಲ್ಲ ಗುಡ್ಡೆ ಹಾಕ್ಕೊಂಡು ನೀನಿಲ್ಲೇನ್ ಮಾಡ್ತಿದೀಯ ಅಂತ ಆಮೇಲೆ ಹೇಳು'' ಎಂದು ಶಂಭೂನಾಥನ ಕೈ ಹಿಡಿದು ಚಿಕಿತ್ಸಾಲಯದ ಹೊರ ಕೋಣೆಗೆ ಎಳೆದುಕೊಂಡು ಬಂದ. ಗೋಡೆಯ ಮೇಲಿದ್ದ ಒಂದೊಂದೇ ಪಟ ತೋರಿಸುತ್ತ ''ಇವರು ಡಾಕ್ಟರ್ ಕಸ್ತೂರಿರಂಗ... ಆರ್‌ಎಂಪಿ., ನಮ್ ತಾತ, ಇವ್ರು ನಮ್ಮಪ್ಪ ಡಾಕ್ಟರ್ ಪಾಂಡುರಂಗ, ಎಮ್‌ಬಿಬಿಎಸ್... ಬಾ ಇಲ್ಲಿ ಸರಿಯಾಗಿ ನೋಡು, ಇದು ನಾನು, ಡಾಕ್ಟರ್ ಶ್ರೀರಂಗ... ಎಮ್‌ಬಿಬಿಎಸ್, ಎಂ.ಡಿ. ಈಗ್ಹೇಳು ನೀನ್ಯಾರು? ಇಲ್ಲೇನ್ ಮಾಡ್ತಿದ್ದಿ ಅಂತ? ನೀನೇನು ಡಾಕ್ಟ್ರ? ಜನರಿಗೆ ಸುಳ್ಳು ಸುಳ್ಳೇ ತಾಯಿತ ಕಟ್ಟಿ, ಇಲ್ಲದ ಮಂತ್ರ ಹೇಳಿ ಮೋಸ ಮಾಡ್ತೀಯ. ಅಮಾಯಕ ಹೆಣ್ಣು ಮಗಳು ಸಿಕ್ಕಳೂಂತ ಆಸ್ತಿ ಮೇಲೆ ನಿನ್ ಕಣ್ ಬಿತ್ತಾ?''

ಅವನ ಮಾತಿನಿಂದ ಶಂಭೂನಾಥನ ಮೈಮೇಲೆ ಬೆವರು ಧಾರಾಕಾರವಾಗಿ ಇಳಿಯುತ್ತಿತ್ತು. ತಡವರಿಸುತ್ತ ''ಹಾಗಿದ್ದರೆ ಇಷ್ಟು ದಿನ ಎಲ್ಲಿ ಮಾಯವಾಗಿದ್ದಿ? ನೀನ್ಯಾರೋ ಹುಚ್ಚ, ಜನ್ರಿಗೆ ಮಂಕು ಬೂದಿ ಎರಚಲು ಬಂದಿದ್ದೀಯ'' ಎಂದ ಶಂಭೂನಾಥ.

''ನೀನೇಳಿದ್ದು ಸರಿ. ನಾನು ನಿಜಕ್ಕೂ ಹುಚ್ಚನಾಗಿದ್ದೆ. ಸತ್ತ ತಂದೆಯ ಬೂದಿಯನ್ನು ಗಂಗೆಗೆ ಬಿಟ್ಟಾಗಲೇ ವಾಪಸ್ಸು ಬರಬೇಕಿತ್ತು. ಕಾಣದ ದೇವರನ್ನು ಹುಡುಕುತ್ತ ಹೊರಟೆ. ಆದರೆ ಎಲ್ಲಾ ಕಷ್ಟಗಳನ್ನು ಪಾರುಮಾಡೋ ದೇವರು ಎಲ್ಲೂ ಸಿಗಲಿಲ್ಲ. ಈಗ ನನಗೆ ಬುದ್ಧಿ ಬಂದಿದೆ. ನಾನು ಕಲಿತ ವಿದ್ಯೆಯಲ್ಲೇ ದೇವರನ್ನಿಟ್ಟುಕೊಂಡು ದೇಶವೆಲ್ಲಾ ಸುಮ್ಮನೆ ಅಲೆದಾಡಿದೆ. ಅದರ ಬದಲಿಗೆ ನನ್ನ ತಾತ ಮಾಡಿದಂತೆ ಕಾಯಿಲೆ ಬಿದ್ದ ಬಡವರ ಸೇವೆ ಮಾಡಬಹುದಿತ್ತು...''

ಅಷ್ಟರಲ್ಲಿ ಈರ್ವರ ಮಾತನ್ನು ಅಚ್ಚರಿಯಿಂದ ಕೇಳುತ್ತಿದ್ದ ಜನರ ಗುಂಪಲ್ಲಿ ಒಂದಿಬ್ಬರು ಬಂದು ದಾಡಿಯ ಹಿಂದಿನ ಶ್ರೀರಂಗನ ಮುಖವನ್ನು ಗುರ್ತಿಸಿ ''ಬಂದೆಯಾ ಸ್ವಾಮಿ, ನನ್ನಪ್ಪ'' ಎಂದು ಕಾಲಿಗೆ ಬಿದ್ದರು. ಅವರೊಂದಿಗೆ ಶ್ರೀರಂಗನ ಬಲ್ಲವರೆಲ್ಲರೂ ಬಂದು ಕಾಲಿಗೆ ಬೀಳತೊಡಗಿದರು. ಹೊರಗಡೆಯ ಗಲಾಟೆಯಿಂದ ಬೆದರಿ ಒಳಕೋಣೆ ಸೇರಿದ್ದ ಶಂಭೂನಾಥನ ಬಳಿ ಇದ್ದ ಹೆಂಗಸು ಯಾರೋ ಸ್ವಾಮೀಜಿ ಬಂದಿದ್ದಾರೆಂದು ಹೊರಕ್ಕೆ ಬಂದು ಶ್ರೀರಂಗನ ಪಾದಕ್ಕೆರಗಿದಳು.

''ಎದ್ದೇಳಿ, ತಾಯಿ. ಯಾವ ತಾಯಿಯೂ ಮಗ ಎಷ್ಟೇ ದೊಡ್ಡವನಾಗಿರಲಿ, ಅವನ ಕಾಲಿಗೆ ಬೀಳಬಾರದು'' ಎಂದಾಗ, ಆ ಹೆಂಗಸು ಹೌಹಾರಿದಳು. ತನ್ನ ಕಷ್ಟಗಳಿಂದ ಪಾರಾಗಲು ಬಿಟ್ಟುಬಂದ ಮಗನೇ ಇವನು ಎಂದು ತಿಳಿದು ರೋದಿಸತೊಡಗಿದಳು.

ಕತೆಯಲ್ಲಿ ಇಷ್ಟೆಲ್ಲ ನಾಟಕದ ತಿರುವುಗಳು ನಡೆದಾಗ, ಸದ್ದಿಲ್ಲದೆ 'ಗುಂಪಲ್ಲಿ ಗೋವಿಂದ' ಎಂದು ಶಂಭೂನಾಥ ಕಂಕುಳಲ್ಲಿ ಕಾಣಿಕೆ ಹುಂಡಿಯನ್ನಿರಿಸಿ ಪರಾರಿಯಾಗಲು ಪ್ರಯತ್ನಿಸಿದ. ಅದನ್ನು ಗಮನಿಸಿದ ಶ್ರೀರಂಗ ''ನಿಮ್ಮ ಹಾಳು ದುಡ್ಡು ನನಗೆ ಬೇಡ. ಆದರೆ ಖಾಲಿ ಪೆಟ್ಟಿಗೆ ಮಾತ್ರ ಕೊಟ್ಟು ಹೊರಡಿ'' ಎಂದ.

ಬಿಕ್ಕಿಬಿಕ್ಕಿ ಅಳುತ್ತಿದ್ದ ಶ್ರೀರಂಗನ ತಾಯಿ ''ಯಾರಿಂದಲೂ ನನಗೆ ಸುಖ ಸಿಗಲಿಲ್ಲ. ನಾನೂ ನೊಂದೆ, ನಿನಗೂ ಅನ್ಯಾಯ ಮಾಡಿದೆ. ಸಾಯುವ ಮುಂಚೆ ನಿನ್ನೊಡನಿರಲು ಅವಕಾಶ ಕೊಡು'' ಎಂದು ಸೆರಗೊಡ್ಡಿದಳು.

''ಹೆತ್ತ ತಾಯಿ ಅದೆಷ್ಟೇ ಕ್ರೂರಿಯಾಗಿರಲಿ, ಅವಳು ಮಕ್ಕಳಿಗೆ ಯಾವತ್ತಿಗೂ ತಾಯಿಯೇ. ನೀವು ನನ್ನೊಡನೆ ಇರಬಹುದು. ಆದರೆ ನನ್ನ ತಾಯಿಯಾಗಿ ಮಾತ್ರವಲ್ಲ, ಬಡರೋಗಿಗಳೆಲ್ಲರ ತಾಯಿಯಾಗಿ ಇರುವುದಾದರೆ ಅಡ್ಡಿಯಿಲ್ಲ'' ಎಂದ ಶ್ರೀರಂಗ.

ಶಂಭೂನಾಥ ಖಾಲಿ ಮಾಡಿಟ್ಟುಹೋದ ಕಾಣಿಕೆ ಹುಂಡಿಯನ್ನು, ತಾನುಟ್ಟಿದ್ದ ಕಾವಿ ಅಂಗಿಯಲ್ಲಿ ಒರೆಸಿ, ಆ ಬಟ್ಟೆಯನ್ನು ಬಿಸಾಡಿದ ಶ್ರೀರಂಗ ಅದನ್ನು ತಂದು ಹೊರಕೋಣೆಯಲ್ಲಿ ತಾತನಿಟ್ಟಿದ್ದ ಜಾಗದಲ್ಲಿ ಇರಿಸಿದ.

ಚಂದ್ರಪ್ರಭ ಕಠಾರಿ
ನಂ. ೧೦೭/ಎ, ೪೬ನೇ ಕ್ರಾಸ್, ೪ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು - ೫೬೦ ೦೧೦



# ಫಕೀರ

ಎತ್ತಲೋ ಹೊರಟಿದ್ದೆ
ಗಪ್ಪನೆ ಕೈ ಹಿಡಿದಳಾಕೆ.

ಏಕೆ? ಏನು? ಪ್ರಶ್ನೆಗಳ
ಸುಳಿವೇಯಿರಲಿಲ್ಲ; ಯಾರನ್ನು
ಕಾಡಲು ಹೋಗಿದ್ದವೋ ಏನೊ?
ತೆಪ್ಪಗೆ ಕುಳಿತೆ. ಎಲ್ಲಾ ಅರ್ಥವಾದಂತೆ;
ಏನೂ ಅರ್ಥವಾಗದಂತೆ.

ಹೊಟ್ಟೆಯಲ್ಲಿದ್ದ ಕೆಟ್ಟ ಹಸಿವು
ಮೈ-ಕೈ, ನರ-ನಾಡಿಗಳಿಗೆಲ್ಲ ಆಡರಿತ್ತು
ಅವಳಿಗೋ, ಹಸಿವು ನೀಗಿಸುವುದೇ ಬೇಕಿತ್ತು
ಮೊಗೆ, ಮೊಗೆದು ಕೊಟ್ಟಂತೆ; ಉಂಡದ್ದೇ ಗೊತ್ತು
ಗೊತ್ತಾಗಲೇಯಿಲ್ಲ ಹೋಗಿದ್ದು ಹೊತ್ತು.

'ಕೈ ಹಿಡಿದವಳು ಯಾರಾಕೆ?'
ನಿಮ್ಮ ತಲೆಗಳಲಿ ಪ್ರಶ್ನೆ ಎದ್ದು ನಿಂತಿರಬೇಕಲ್ಲವೆ?
ನನ್ನ ತಲೆಯೊಳಗೂ ನಿಲ್ಲುವುದರೊಳಗಿತ್ತು; ತಕ್ಷಣ
ಉತ್ತರವಾಗಿಬಿಟ್ಟಳಾಕೆ
ಈಗ ನನಗಾವುವೂ ಪ್ರಶ್ನೆಗಳಿಲ್ಲ, ಎಲ್ಲ ಉತ್ತರಗಳೆ
ಉತ್ತರಗಳಿಗೆ ಪ್ರಶ್ನೆಗಳ ಹುಡುಕಬೇಕೆ?

ದಾರಿಯ ಎಲ್ಲಾ ತಿರುವುಗಳೀಗ ನೇರ
ಗುರಿಯಿರದ ಪಯಣವೀಗ; ಗಾವುದ ದೂರ
'ಆರದ ಕಾಮ, ಬತ್ತದ ಒಲವು';
ಬಗಲ ಜೋಳಿಗೆ ಭಾರ
ನಾನೊಬ್ಬ ಫಕೀರ.

ಮೃತ್ಯುಂಜಯ ಎಂ. ಸಾಲಿಮಠ
ನಂ. ೧೮೯, ೩ನೇ 'ಎ' ಕ್ರಾಸ್, ೧ನೇ ಬ್ಲಾಕ್, ೩ನೇ ಹಂತ
ಬಸವೇಶ್ವರನಗರ, ಬೆಂಗಳೂರು - ೫೬೦ ೦೭೯

# ದೂರ್ವಾಸ ಕೂಸಪ್ಪ



**ಕೂ**ಸಪ್ಪನಿಗೂ ನನಗೂ ಇಪ್ಪತ್ತೈದು ವರುಷಗಳ ಗೆಳೆತನ. ಜಾತಿಯಲ್ಲಿ ನಿಮ್ನ ಜಾತಿಯವನಾದರೂ ನಮ್ಮಿಬ್ಬರಲ್ಲಿನ ಆತ್ಮೀಯತೆಗೆ ಯಾವ ಧಕ್ಕೆಯೂ ಬಂದಿಲ್ಲ. ಆತ ನಮ್ಮ ಆಫೀಸಿನ ಅಟೆಂಡರ್. ಸರಕಾರದ 'ಮೀಸಲಾತಿ' ವಿಧಿಯಿಂದ ಆತ ಅಸಿಸ್ಟೆಂಟ್ ಆಗಿದ್ದಾನೆ. ನಮ್ಮ ಗಲ್ಲಿ ದಾಟಿ ಒಂದು ಕಿಲೋಮೀಟರ್ ಸಾಗಿದರೆ ಅವನ ಮನೆ. ಹಾಗಾಗಿ ಹಲವು ಬಾರಿ ಆತ ಆಫೀಸು ಬಿಟ್ಟಮೇಲೆ ನನ್ನ ಸ್ಕೂಟರ್‌ನಲ್ಲಿ ನಮ್ಮ ಮನೆಯವರೆಗೆ ಬರುತ್ತಿರುತ್ತಾನೆ. ಮಹಾ ಮಾತಿನ ಮಲ್ಲ ಆತ. ಮಾತನಾಡಲು ಆರಂಭಿಸಿದರೆ ಇಂದಿಗೆ ಸಾಕು ಎಂದು ನಾನೇ ಮಧ್ಯಮಾವತಿ ರಾಗ ತಗೋಬೇಕು. ಆದರೂ ಕೆಲವಾರು ಬಾರಿ ಆತ ಬೀಚಿಯವರಿಗೆ 'ತಿಂಮ'ನೆಂಬ ನೆಂಟನಿದ್ದಂತೆ ನನ್ನ ಬರಹಗಳಿಗೆ ಆತ 'ಕೂಸಪ್ಪ' ಆಗಿದ್ದಾನೆ. ಮೊನ್ನೆಯೊಂದು ದಿನ ಆತ ಆಫೀಸು ಬಿಟ್ಟು ಬರುವಾಗ ಮಳೆ ಬಳಿ ಇಳಿದಾತ ಕೊಡೆ ತಾರದ ಕಾರಣ ಮನೆಗೂ ಬಂದಿದ್ದ. ಆತ ಆಗಾಗ್ಗೆ ನಮ್ಮ ಮನೆಗೆ ಬಂದು ಚಹ ಕುಡಿದು ಹೋಗುತ್ತಿದ್ದರೂ ಮೊನ್ನೆಯ ದಿನ ಅದೇನೋ ಹೊಟ್ಟೆ ತುಂಬಿಸಿಕೊಂಡ ವಿಚಾರ ನನ್ನೊಡನೆ ಹೇಳದಿದ್ದರೆ ಹೊಟ್ಟೆ ಮತ್ತಷ್ಟು ಉಬ್ಬರಿಸಿಹೋಗಬಹುದೆಂದು ಮನೆಯೊಳಗೆ ಬಂದಿದ್ದ. ಅಂದಿನ ಅವನ ಮಾತುಗಳನ್ನು ಅವನ ಬಾಯಿಂದಲೇ ಕೇಳುವ ಕುತೂಹಲ. ನೀವು ಕೇಳಿಲ್ಲದ ಕಾರಣ ಅವನ ಮಾತುಗಳನ್ನು ಸೂಕ್ಷ್ಮವಾಗಿ ಹೇಳುತ್ತೇನೆ.

''ಮಳೆ ಬರ್‍ತಾ ಇದೆ ಸರ್. ಕೊಡೆ ತಂದಿಲ್ಲ ಒಂದರ್ಧ ಗಂಟೆ ನಿಮ್ಮ ಮನೇಲಿ ಕುಳಿತು ಹೋಗ್ತೇನೆ'' ಎಂದ ಆತ ಕುಡಿದ ಚಹಾದ ಲೋಟವನ್ನು ತೊಳೆಯಲು ಎದ್ದಾಗ ನಾನೇ ಅದನ್ನು ತಗೊಂಡು ಒಳಗೆ ತಂದಿಟ್ಟೆ. ಸರಿ, ಆರಂಭವಾಯ್ತು ಅವನ ಪುರಾಣ.



''ಸರ್ ನಲುವತ್ತು ಐವತ್ತು ವರುಷಗಳ ಹಿಂದೆ ಮೇಲ್ಜಾತಿ, ಕೆಳಜಾತಿ ಇದ್ದಿರಬಹುದು. ಆದರೆ ನನಗೇ ಸಂಕೋಚ ಆದರೂ ನೀವೇ ಅದನ್ನು ತಗೊಂಡು ತೊಳೆದಿಟ್ಟಿರಿ.. ಈಗ ನಮ್ಮದು ಜಾತ್ಯತೀತ ಸಮಾಜವಾದರೂ ಜಾತಿ ಭೇದವಿಲ್ಲ. ನೋಡಿ ನಾನು, ನೀವು ಅಣ್ಣತಮ್ಮಂದಿರಂತೆ ಇದೀವಿ. ಆದರೆ ರಾಜಕೀಯ ಪುಢಾರಿಗಳು ಐವತ್ತು ವರ್ಷ ಕಳೆದರೂ ''ಆ ಜಾತಿ, ಈ ಜಾತಿ, ಎಸ್.ಟಿ., ಎಸ್.ಸಿ.,'' ಅಂತ ಜನರನ್ನು ಪ್ರಚೋದಿಸುತ್ತಾ ಇದ್ದಾರೆ. ಒಂದು ವಿಚಾರ ನಾನು ಸ್ಪಷ್ಟವಾಗಿ, ಜೋರಾಗಿ, ಎಲ್ಲರಿಗೂ ಕೇಳುವಂತೆ ಹೇಳ್ತೇನೆ ಸರ್. ಈ ಧಾರಾವಾಹಿಗಳಲ್ಲಿ ಈ ಚಿತ್ರ ಯಾವ ವ್ಯಕ್ತಿಗಾದರೂ ವಿಷಯಕ್ಕಾದರೂ ಸಂಬಂಧಪಟ್ಟಿಲ್ಲ. ಇದು ಕೇವಲ ಕಾಲ್ಪನಿಕ ಅಂತಾರಲ್ಲಾ? ಹಾಗೆಯೇ ನನ್ನ ಮಾತು ಕೂಡ. ಈ ಕೊಟೇಶನ್ ಹೇಳಿಯೇ ನನ್ನ ಮನಸ್ಸಿನ ವಿಚಾರಗಳನ್ನು ತಮ್ಮಲ್ಲಿ ಹೇಳಿಕೊಳ್ತಾ ಇದ್ದೇನೆ ಸರ್.

''ಸರ್... ಎಲ್ಲಾ ಜಾತಿಯವರಿಗೂ ಅವರವರ ಭಾವನೆ, ಗೌರವಗಳು ಇದ್ದೇ ಇವೆ. ಆದರೆ ಯಾವ ಪುಢಾರಿಯೂ ತನ್ನ ಮಗಳನ್ನು ಬೇರೆ ಜಾತಿಯವರಿಗೆ ಕೊಡೋಕೆ ಇಷ್ಟಪಡೋದಿಲ್ಲ. ಆದರೆ ಎಲೆಕ್ಷನ್ ಸಮಯದಲ್ಲಿ ಓಟಿಗಾಗಿ ಮೀಸಲಾತಿ, ನಿಮ್ನ ವರ್ಗ, ಹಿಂದುಳಿದವರು, ಎಸ್.ಸಿ., ಎಸ್.ಟಿ., ಇವೆಲ್ಲಾ ಬೇಕೆಂದೇ ಸೃಷ್ಟಿಸುತ್ತಾರೆ. ಸರ್, ಪ್ರತೀ ಜಾತಿಯವರಿಗೂ ಇನ್ನೊಬ್ಬರಿಗೆ ನೋವುಮಾಡದೆ, ಅವ ಶೇರಿಗಾರ, ಅವ ಬ್ರಾಹ್ಮಣ, ಇವ ಗೌಡ ಸಾರಸ್ವತ, ಆತ ಪೂಜಾರಿ, ಈತ ಶೆಟ್ಟಿ ಎಂಬ ವಿಚಾರ ತಿಳಿದಿದೆ. ಅವರೂ ಒಪ್ತಾರೆ. ಗಾಂಧೀಜಿಯವರು ತೋರಿಸಿಕೊಟ್ಟ ಕೀಳುಮಟ್ಟದ ಜನರಿಗೂ ಗೌರವ ಕೊಟ್ಟಮೇಲೂ, ಶಾಲೆಗೆ, ಕೆಲಸಕ್ಕೆ ಅಪ್ಲಿಕೇಶನ್ ಕೊಡುವಾಗ ಒಂಭತ್ತನೇ ಪ್ರಶ್ನೆ, ''ನೀನು ಎಸ್.ಟಿ.ಯೋ, ಎಸ್.ಸಿ.ಯೋ'' ಎಂದು ಕೇಳುವ ಪದ್ಧತಿ ಅರುವತ್ತ ಮೂರು ವರ್ಷವಾದರೂ ನಿಂತಿಲ್ಲ. ನಮ್ಮನ್ನು ಜಾತಿಯ ಹೆಸರಿಟ್ಟು ಕರೆಯುವ ಬದಲು ನೀನು ಎಸ್.ಸಿ.ಯೋ, ಎಸ್.ಟಿ.ಯೋ ಎಂದು ಬೆರಳುಮಾಡಿ ತೋರಿಸುವ ಪ್ರಶ್ನೆ ಇನ್ನೂ ಮುಗಿದಿಲ್ಲ ಸರ್. ಯಾಕೆ ನಮಗೆ ಎಸ್.ಸಿ., ಎಸ್.ಟಿ. ಎಂದು ನಾಮಕರಣ ಮಾಡಬೇಕು ? ನಮಗೂ ಸರ್‌ನೇಮ್ ಇಲ್ವೆ ? ಜಾತ್ಯತೀತ ರಾಜ್ಯವಾದಮೇಲೆ ಈ ಜಾತಿಯ ಪ್ರಶ್ನೆ ಯಾಕೆ ? ನನಗೋ ಇಂತಹ ಪ್ರಶ್ನೆಗಳನ್ನು ನೋಡಿದ್ರೆ ನಿಮ್ಮ ಪುರಾಣದ ದೂರ್ವಾಸ ಮುನಿಯೇ ನಾನಾಗ್ತೇನೆ. ಅದಕ್ಕೇ ಮೊನ್ನೆ ನನ್ನ ಪ್ರಮೋಶನ್ ಅಪ್ಲಿಕೇಷನ್‌ನಲ್ಲಿ ಈ ವಿಚಾರದ ಪ್ರಶ್ನೆ ಬಂದಾಗ ನಾನು 'ಜಾತಿ' ಎಂಬ ಕಾಲಂನಲ್ಲಿ 'ಗಂಡಸು' ಎಂದಿಷ್ಟೇ ಬರೆದೆ. ನನ್ನ ಸಣ್ಣಮಕ್ಕಳ ಶಾಲಾ ಪ್ರವೇಶಕ್ಕೂ ಜಾತಿ ಕೇಳಿದಾಗ 'ಹೆಣ್ಣು ಜಾತಿ' ಎಂದು ಬರೆದುಕೊಟ್ಟೆ. ನಮ್ಮನ್ನು ಮತ್ತೂ ಮತ್ತೂ ಕೆದಕಿ ಎಸ್.ಸಿ.ಯೋ, ಎಸ್.ಟಿ.ಯೋ ಎಂಬ ಸರಕಾರದ ಪುಢಾರಿಗಳ ಪ್ರಶ್ನೆ ನಮ್ಮನ್ನು ಬೆರಳು ತೋರಿಸಿ ಮಾಡಿದಂತೆ ಆಗಿ ತುಂಬಾ ಸಿಟ್ಟು ಬರುತ್ತೆ ಸರ್. ನಮ್ಮನ್ನು ನಮ್ಮ ಜಾತಿಯನ್ನು ಕತೆಯಲ್ಲಿ ನಮಗೂ ನಮ್ಮ ಜಾತಿಯ ಮೇಲೆ ಅಭಿಮಾನ ಇಲ್ವಾ ಸರ್ ? ಅದನ್ನು ಬಿಟ್ಟು ನಮ್ಮನ್ನು ಎಸ್.ಸಿ.ಯೋ, ಎಸ್.ಟಿ.ಯೋ ಎಂದು ಜೊಟ್ಟಿಟ್ಟು ಕರೀತಾರೆ ಈ ಮುಕ್ಕ.''

''ಕೂಸಪ್ಪ . ಸ್ವಲ್ಪ ಮೆತ್ತಗೆ ಹೇಳು. ನೀನು ಹೀಗೆ ಹೇಳಿದರೆ ನಿನ್ನೂ ಒಬ್ಬ 'ಜಾತಿ ಕಲಹಗಾರ' ಎಂದು ಕರೆಸಿಕೊಳ್ಳಬಹುದು.''

''ಹಾಗೆ ನನ್ನ ಮೈ ಮುಟ್ಟಿದರೆ ನಮ್ಮ ಜಾತಿಯ ನೂರಾರು ಮಂದಿ ಬಂದು ಬೊಬ್ಬೆ ಹಾಕಿ ಆ ಪುಢಾರಿಯನ್ನು ಪಟ್ಟದಿಂದ ಇಳಿಸ್ತಾರೆ. ಅದಕ್ಕೆ. ನಾನು ಮೊದಲೇ ಹೇಳಿದ್ದು ''ನನ್ನ ಮಾತು ಯಾವ ವ್ಯಕ್ತಿಗಾಗಲೀ, ವಸ್ತುವಿಗಾಗಲಿ, ವಿಷಯಕ್ಕಾಗಲಿ ಸಂಬಂಧಪಟ್ಟಿಲ್ಲ. ಕೇವಲ ಕಾಲ್ಪನಿಕ'' ಎಂದು ಬೆಕ್ಕಿನ ತಲೆಮೇಲೆ ದೀಪ ಇಟ್ಟಂತೆ ಬರೆದು ತೋರಿಸಿದಂತೆ ಎಂದು. ನಮ್ಮಲ್ಲಿರೋದು ಎರಡೇ ಜಾತಿ, ಒಂದು ಗಂಡು, ಇನ್ನೊಂದು ಹೆಣ್ಣು. ಅರವತ್ತಮೂರು ವರ್ಷಗಳಾದರೂ ಈ ವಿಚಾರ ರಾಜಕೀಯ ಪುಢಾರಿಗಳಿಗೆ ಅರ್ಥವಾಗದ್ದು ದುರದೃಷ್ಟ ಅಥವಾ ಅರ್ಥವಾಗಿಯೂ ಓಟಿನ ಬೇಟೆಗಾಗಿ ನಮ್ಮನ್ನು ಉಪಯೋಗಿಸಿಕೊಳ್ತಾರೊ ಏನೊ. ಐದಾರು ವರ್ಷಗಳ ಹಿಂದೆ ಸುರತ್ಕಲ್‌ನಲ್ಲಿ ಎರಡು ಪಂಗಡಗಳ ನಡುವೆ ಕಲಹ, ಎಂದು ದೊಡ್ಡ ಸುದ್ದಿಮಾಡಿ ಅನೇಕ ಕಾರ್, ಬಸ್, ಲಾರಿಗಳನ್ನು ಸುಡಿಸಲಿಲ್ಲವೆ, ಆದರೆ ಕೊನೆಗೇನಾಯಿತು ? ಎರಡು ಪಂಗಡಗಳ ಜಾತಿಗಳ ಮನೆಯವರಿಗೇ ಗೊತ್ತಿಲ್ಲದ ಸುದ್ದಿಯಂತೆ ಅದು. ಸ್ನೇಹಿತರಾಗಿಯೇ ಇದ್ದಾರಂತೆ. ಆರಂಭಿಸಿದ್ದು ಯಾರೋ ಹೊರಗಿನ ಕಿಡಿಗೇಡಿಗಳು. ಅದೂ ಓಟಿಗಾಗಿ ! ನನಗೆ ನಿಮ್ಮಂಥಹ ಒಳ್ಳೆಯವರ (ಯಾವ ಜಾತಿಯವರೇ ಆಗಿರಲಿ) ಭೇದಭಾವ ಇಲ್ಲದವರ ಮೇಲೆ ಅಪಾರ ಗೌರವವಿದೆ. ಆದರೆ ಗ್ರಹಚಾರ ವೆಂದರೆ ಅದನ್ನು ಹಾಳುಮಾಡುವವರೇ ರಾಜಕೀಯ ವ್ಯಕ್ತಿಗಳು. ಬರ್‍ತೇನೆ. ಸರ್. ಮಳೆ ಬಿಟ್ಟಿದೆ'' ಎಂದವನೇ ಹೊರಗಡೆ ಗೇಟಿನ ಬಲಬದಿಗೆ, ಮನೆಗೆ ಹೋಗುವ ಬದಲು ಎಡಗಡೆಗೆ ತಿರುಗಿದ. ಪ್ರಾಯಶಃ ತೀರ್ಥಪ್ರಸಾದಕ್ಕಿರಬೇಕೇನೋ !


**ರಾಘವೇಂದ್ರ ಉಡುಪಿ (ಕೆ. ರಾಘವೇಂದ್ರ ಭಟ್)**
ಶ್ಯಾಮಲಾ ಸದನ, ೮-೩-೫೧, ಕೆ. ಎ. ಮಾರ್ಗ, ಕುಂಜಿಬೆಟ್ಟು,
ಉಡುಪಿ-೫೭೬೧೦೨

# ಮುಖವಾಡ

ಹಸಿದ ಕಣ್ಣುಗಳ ಎದುರಲ್ಲಿ ವೇದಿಕೆ ಮೇಲೆ ಕ್ಯಾಟ್‌ವಾಕ್ ಹಾಕುವ ರೇಷ್ಮೆಯಷ್ಟು ನುಣುಪಾದ ಕಾಲುಗಳು ಇಷ್ಟು ಜೋರಾಗಿ ತನಗೆ ಅಪ್ಪಳಿಸಬಹುದೆಂಬ ಅಂದಾಜಿಲ್ಲದೆ ಆತ ಕಂಗಾಲಾಗಿದ್ದ. ಫ್ಲ್ಯಾಷ್ ಲೈಟಿನಲ್ಲಿ ಫಳಕ್ಕನೆ ಮಿಂಚುವ, ತುಂಬಿಕೊಂಡ ಕೋಮಲವಾದ ತೊಡೆಗಳು ಅನಾಮತ್ತಾಗಿ ತನ್ನ ಹೊಟ್ಟೆಗೆ ಹೀಗೆ ತದುಕಬಹುದೆಂದು ಆತ ಕನಸಿನಲ್ಲಿಯೂ ಯೋಚಿಸಿರಲಿಲ್ಲ. ಮೂಗಿನಿಂದ ರಕ್ತ ಸುರಿಯುತ್ತಿತ್ತು. ಮಂಜುಮಂಜಾಗಿದ್ದ ದೃಷ್ಟಿಯನ್ನು ಎತ್ತಿ ನೋಡಿದಾಗ ಎದುರಿಗಿದ್ದ ಭವ್ಯ ಬಂಗಲೆಯೊಳಗೆ ಲಾನ್ ನಡುವಿನ ಸುಂದರ ರಸ್ತೆಯಲ್ಲಿ ವಿಶ್ವಸುಂದರಿ ಸುರಮ್ಯಾ ವರ್ಮಾ ಮತ್ತು ಬಾಲಿವುಡ್ ನಟ ವಜೀದ್‌ಖಾನ್ ನಡುಬಳಸಿಕೊಂಡು ನಡೆದುಹೋಗುತ್ತಿರುವುದು ಕಂಡಿತು.

ಅಸಹ್ಯ, ಅವಮಾನದಿಂದ ಆತ ಕಂಪಿಸಿ ಮುಖ ಕಿವುಚಿದ. ಚಿತ್ರನಟ ವಜೀದ್ ಖಾನ್ ಏಕಾಂಗಿಯಾಗಿದ್ದ ಮಹೇಶ್ವರ್ ಮೇಲೆ ತನ್ನ ಮಸಲ್ ಬಾಡಿಯ ತಾಕತ್ತಿನೊಂದಿಗೆ ಕರಾಟೆ ಕಿಕ್‌ನ ಕರಾಮತ್ತು ತೋರಿಸಿ ಮೂಗಿನಿಂದ ರಕ್ತ ಸುರಿಯುವಂತೆ ಮಾಡಿದ್ದ. ಇಷ್ಟೆಲ್ಲಾ ಮಾಡಿದ್ದು ತನ್ನ ಗೆಳತಿ ಸುರಮ್ಯಾ ವರ್ಮಾಗಾಗಿ. ಏಟು ತಿಂದು ನರಳುತ್ತಾ ಬಿದ್ದಿದ್ದ ಮಹೇಶ್ವರ್ ಸಾಮಾನ್ಯ ವ್ಯಕ್ತಿಯಾಗಿರಲಿಲ್ಲ. ಒಬ್ಬ ಸಾದಾ ಫೋಟೋಗ್ರಫರ್ ಆಗಿರಲಿಲ್ಲ. ಅವನ ಕಣ್ಣ ಮುಂದೆ ತಾನು ನಡೆಸುತ್ತಿದ್ದ 'ಆಸರೆ' ಅನಾಥಾಲಯ ತೇಲಿ ಬಂದಿತು. ಅದರಲ್ಲಿದ್ದ ಅರ್ಧದಷ್ಟು ಮಕ್ಕಳು ಶಾಶ್ವತ ಅಂಗಹೀನತೆಯಿಂದ ಜನ್ಮ ನೀಡಿದವರಿಗೂ ಬೇಡವಾಗಿದ್ದವು. ಅಂಥ ಮಕ್ಕಳನ್ನು ತನ್ನ ಆದರ್ಶದ ಕಾರ್ಯರೂಪವಾಗಿ ಮಹೇಶ್ವರ್ ಸಲಹುತ್ತಿದ್ದ. ಅವುಗಳ ಕಣ್ಣಲ್ಲಿ ನಾಳೆಯ ಕನಸನ್ನು ಬಿತ್ತಿದ್ದ. ಮದರ್ ಥೆರೆಸಾ ಅವನ ಮನಸ್ಸನ್ನು ಸೇವೆಗೆ ತಿರುಗಿಸಿದ್ದರು. ''ವಿಧವೆಯ ಕಣ್ಣೀರನ್ನು ಒರೆಸದ, ತಬ್ಬಲಿಯೊಬ್ಬನಿಗೆ ತುಂಡು ರೊಟ್ಟಿ ಒದಗಿಸದ ದೇವರು ಮತ್ತು ಧರ್ಮವನ್ನು ನಾನು ನಂಬುವುದಿಲ್ಲ'' ಎಂಬ ವಿವೇಕವಾಣಿ ಕಟುವಾಸ್ತವವನ್ನು ಎತ್ತಿ ತೋರಿಸಿ ಆದರ್ಶದತ್ತ ಸಾಗಲು ಸಹಾಯ ಮಾಡಿದ್ದವು.

ದಿನದಿಂದ ದಿನಕ್ಕೆ ಮಹೇಶ್ವರ್‌ನ ಕಾರ್ಯವ್ಯಾಪ್ತಿ ವಿಸ್ತರಿಸುತ್ತ ಹೋಯಿತು. ಆರು ತಿಂಗಳ ಅನಾಥ ಮಗುವಿನಿಂದ ಆಸರೆ ನೀಡಲು ಪ್ರಾರಂಭಿಸಿದ್ದ ಮಹೇಶ್ವರ್ ಈಗ ಬಾಳಿನ ಮುಸ್ಸಂಜೆಯಲ್ಲಿ ಕಟಿತರಾಗಿದ್ದ ವೃದ್ಧರಿಗೆ ಆಶ್ರಯವಾಗುವ ತಾಣವೊಂದನ್ನು ತೆರೆಯಲು ಯೋಚಿಸಿದ್ದ. ಕೊಂಚ ಪಿತ್ರಾರ್ಜಿತ ಆಸ್ತಿ ಮಹೇಶ್ವರ್‌ನ ಉದ್ದೇಶದ ಸಾಫಲ್ಯಕ್ಕೆ ಸಾಕಾಗುತ್ತಿರಲಿಲ್ಲ. ಕ್ರಿಯಾಶೀಲ ವ್ಯಕ್ತಿತ್ವ ಹೊಂದಿದ್ದ ಮಹೇಶ್ವರ್ ಫೋಟೋಗ್ರಫಿಯಲ್ಲಿ ನುರಿತವನಾಗಿದ್ದ. ಅಂತರರಾಷ್ಟ್ರೀಯ ಮಟ್ಟದಲ್ಲಿ ಮಹೇಶ್ವರ್‌ನ ಹೆಸರು ಮಿಂಚಿತ್ತು. ಆತ ಭಾರತ ಕುರಿತು ತಯಾರಿಸಿದ ಡಾಕ್ಯುಮೆಂಟರಿಗಳು ವಿದೇಶಿ ಚಾನೆಲ್‌ಗಳಲ್ಲಿ ಪ್ರಶಂಸೆ ಪಡೆದವು. ದೇಶ ವಿದೇಶದ ಗಣ್ಯರು ತಮ್ಮ ಅಪರೂಪದ ಭಾವಭಂಗಿಗಳನ್ನು ತೆಗೆಯಲು ಮಹೇಶ್ವರ್‌ಗೆ ಧಾರಾಳವಾಗಿ ಅನುಕೂಲ ಮಾಡಿಕೊಟ್ಟಿದ್ದರು. ಅವುಗಳಿಂದ ಬಂದ ಅನುಕೂಲ ಮತ್ತಷ್ಟು ಅನಾಥರ ಬದುಕಲ್ಲಿ ನೆಮ್ಮದಿ ಬಿತ್ತಲು ಸಹಕಾರಿಯಾಯಿತು.

ಮಹೇಶ್ವರ್ ಯಾವ ಸಮಯದಲ್ಲಿ ತನ್ನ ಉದ್ದೇಶ ಸಾಫಲ್ಯಕ್ಕಾಗಿ ಹಸಿವೆ, ನೀರಡಿಕೆ ತೊರೆದು ಕಾರ್ಯೋನ್ಮುಖನಾಗಿದ್ದನೋ ಅದೇ ಹೊತ್ತಿನಲ್ಲಿ ಸುರಮ್ಯಾ ವರ್ಮಾ ಎಂಬ ಇಪ್ಪತ್ತು ವರ್ಷದ ಯುವತಿ ಕೂಡ ಅರೆಹೊಟ್ಟೆಯಲ್ಲಿ ಡಯಟಿಂಗ್ ಮಾಡುತ್ತ ಆಯಕಟ್ಟಿನ ಸ್ಥಳಗಳಲ್ಲಿ ಒಂದು ಗ್ರಾಮ್ ಕೊಬ್ಬು ಕೂಡ ಅನಾವಶ್ಯಕವಾಗಿ ಬೆಳೆಯಲು ಅವಕಾಶ ಮಾಡಿಕೊಡದಂತೆ ಕಟ್ಟೆಚ್ಚರ ವಹಿಸಿದ್ದಳು. ಟ್ರಾಫಿಕ್ ಜಾಮ್ ಆಗಿ ಒಂದು ದಿನ ಸುರಮ್ಯಾ ವರ್ಮಾಳ ಕಾರು ರಸ್ತೆ ಮಧ್ಯದಲ್ಲಿ ನಿಂತಿತು. ಆಗ ಕಾರಿನೊಳಗೆ ಅವಳನ್ನು ಇಡಿಯಾಗಿ ಬಳಸಿಕೊಂಡು ಅವಳ ಡ್ಯಾಂಡ್ರಫ್ ರಹಿತ ಕೂದಲಿನ ಕಂಪನ್ನು ಒಂದೇ ಕಂತಿನಲ್ಲಿ ಆಪೋಶನ ತೆಗೆದುಕೊಳ್ಳಲು ಚಡಪಡಿಸುತ್ತ ವಿಶ್ವಸುಂದರಿಯ ಸ್ಪರ್ಧೆಯ ಕೊನೆಯ ಹಂತದಲ್ಲಿ ಕೇಳುವ ಪ್ರಶ್ನೆಗಳಿಗೆ ಮಾನವೀಯತೆಯಿಂದ ಕೂಡಿದ ಉತ್ತರವನ್ನು ಯಾವ ರೀತಿ ನೀಡಬೇಕೆಂದು ಹೇಳಲು ಅವಳ ಕೋಚ್ ಚೇತನ್ ಹಾತೊರೆಯುತ್ತಿದ್ದ.

ಅದೇ ಸಮಯಕ್ಕೆ ಕಿಟಕಿಯಲ್ಲಿ – ''ಎರಡು ದಿನದಿಂದ ಉಪವಾಸ ಇದ್ದೇನೆ. ಭಗವಂತನ ಹೆಸರಲ್ಲಿ ಏನಾದರು ನೀಡಿ ಸಾಹಿಬ್'' ಎಂದು ದೀನ ಮುಖವೊಂದು ಉಸುರಿತು. ''ನಾನ್‌ಸೆನ್ಸ್'' ಎಂದು ಸುರಮ್ಯಾ ಬಟನ್ ಒತ್ತಿ ಜುಂಯ್ ಎಂದು ವಿಂಡೋಗ್ಲಾಸ್ ಏರಿಸಿದಳು.

ಅಮೆರಿಕಾ ದೇಶದ ಬಂಡವಾಳಶಾಹಿ ಕಂಪನಿಗಳು ವಿಶ್ವಸುಂದರಿ ಸ್ಪರ್ಧೆಯನ್ನು ಜಂಟಿಯಾಗಿ ಆಯೋಜಿಸಿದ್ದವು. ಕಂಪನಿಗಳ ಮಾಲೀಕರು ಪಂಚತಾರಾ ಹೋಟೆಲೊಂದರಲ್ಲಿ ಯಾವ ದೇಶದ ಸುಂದರಿಯನ್ನು ವಿಶ್ವಸುಂದರಿಯೆಂದು ಆಯ್ಕೆ ಮಾಡಬೇಕು, ಅದರ ಸಾಧಕಬಾಧಕಗಳೇನು ಎಂಬುದರ ಕುರಿತು ತಾಸುಗಟ್ಟಲೆ ಚರ್ಚಿಸಿ ಕೊನೆಗೆ ಒಂದು ನಿರ್ಧಾರಕ್ಕೆ ಬಂದರು. ಕೈಗೊಂಡ ನಿರ್ಧಾರದಿಂದ ಎಲ್ಲರ ಮುಖದಲ್ಲಿ ಗೆಲುವಿನ ಕಳೆ ಏರಿತ್ತು. ಚಿಯರ್ಸ್! ಎಂದು ಗ್ಲಾಸಿಗೆ ಗ್ಲಾಸು ತಾಗಿಸಿ ಅರೆಬತ್ತಲೆ ಸುಂದರಿಯರೊಂದಿಗೆ ಕುಣಿದು ದಣಿದು ಅಂದಿನ ಪಾರ್ಟಿ ಮುಗಿಸಿದರು.



ಕೋಟಿಗಟ್ಟಲೆ ಸುರಿದು ವಿಶ್ವಸುಂದರಿ ಸ್ಪರ್ಧೆಯ ರಂಗಸಜ್ಜಿಕೆ ತಯಾರಾಯಿತು. ನಿಶ್ಚಿತ ದಿನದಂದು ನ್ಯೂಯಾರ್ಕ್ ನಗರದಲ್ಲಿ ವಿಶ್ವಸುಂದರಿ ಸ್ಪರ್ಧೆ ಶುರುವಾಯಿತು. ಪ್ರಾಯೋಜಕರು ಯೋಚಿಸಿದ್ದಂತೆ ಎಲ್ಲವೂ ನಡೆಯುತ್ತಿತ್ತು. ಸಮುದ್ರದ ಸುಂದರ ದಂಡೆಯಲ್ಲಿ ತಮ್ಮ ಬಾಳೆದಿಂಡಿನಂತಹ ತೊಡೆಗಳನ್ನು ತೊನೆಸುತ್ತಾ ಜೂ ಪೀಸಸ್ ಮೇಲೆ ಸುಂದರಿಯರ ದಂಡು ಓಡಾಡುತ್ತಿತ್ತು. ವೃತ್ತಿಪರ, ಹವ್ಯಾಸಿ ಫೋಟೋಗ್ರಫರುಗಳು, ಪತ್ರಕರ್ತರು ಸುಂದರಿಯರನ್ನು ದರ್ಶಿಸುತ್ತಿದ್ದರು, ಸಂದರ್ಶಿಸುತ್ತಿದ್ದರು. ಪತ್ರಕರ್ತನೊಬ್ಬ ಬ್ರೆಜಿಲ್ ಸುಂದರಿಯನ್ನು ಪ್ರಶ್ನಿಸುತ್ತಿದ್ದ ''ನಿಮಗೆ ಏನನ್ನು ಕಂಡರೆ ದುಃಖವಾಗುತ್ತದೆ ?'' ಮುಂದೆ ಬಂದ ಕೂದಲನ್ನು ಹಿಂದಕ್ಕೆ ಝಾಡಿಸಿ ''ಸಣ್ಣ ಮಕ್ಕಳು ಕೆಲಸಕ್ಕೆ ಹೋಗುವುದನ್ನು ಕಂಡಾಗ'' ಎಂದಳು. ''ನಿಮ್ಮ ಪ್ರಿಯವಾದ ಹವ್ಯಾಸ ?'' ತಟ್ಟನೆ ಗಂಭೀರವಾಗಿ ಪತ್ರಕರ್ತ ತಬ್ಬಿಬ್ಬಾಗುವಂತೆ ಉತ್ತರ ನೀಡಿದಳು : ''ಸೇವೆ ಮಾಡುವುದು.''

ಭಾರತದಿಂದ ಸುರಮ್ಯಾ ವರ್ಮಾ ಭಾಗವಹಿಸಿದ್ದಳು. ಕೃತಕ ನಗೆ ಬೀರುತ್ತ, ಅರೆನಗ್ನ ದೇಹ ಬಳುಕಿಸುತ್ತ ಸಾಧ್ಯವಾದಷ್ಟು ವೈಯಾರ ತೋರುತ್ತ ನಿರ್ಣಾಯಕರ ಮನಸ್ಸನ್ನು ಪ್ರಸನ್ನಗೊಳಿಸಲು ಸುಂದರಿಯರು ಹೆಣಗಾಡುತ್ತಿದ್ದರು.

ಗಳತಗಾ ಗಾಯತ್ರೀನಂದನ

ನಿರ್ಣಾಯಕರು ಮೊದಲೇ ನಿರ್ಧರಿಸಿದ್ದಂತೆ ಕೊನೆಯ ರೌಂಡ್‌ವರೆಗೆ ಸುರಮ್ಯಾ ವರ್ಮಾ ಬಂದಳು. ಕೊನೆಯದಾಗಿ ಅವಳಿಗೆ ಪ್ರಶ್ನೆ ಕೇಳಲಾಯಿತು. ''ವಿಶ್ವಸುಂದರಿಯಾದ ಬಳಿಕ ನೀವೇನು ಮಾಡುತ್ತೀರಿ ?'' ''ಈ ಮನಸು ಹೃದಯಗಳನ್ನು ದುಃಖಿತರ ನೆರವಿಗೆ ಬಳಸುತ್ತೇನೆ. ಸಮಾಜದ ಸರ್ವತೋಮುಖ ಏಳಿಗೆಗೆ ಸರಹದ್ದುಗಳ ಸಂಕೋಲೆಯನ್ನು ಮೀರಿ ಪ್ರಯತ್ನಿಸುತ್ತೇನೆ. ಮುಂದಿನ ಬದುಕನ್ನು ಮಾನವ ಸೇವೆಯಲ್ಲಿ ಕಳೆಯಬೇಕೆಂಬುದು ನನ್ನ ಆಶೆ'' ಎಂದು ಸುರಮ್ಯಾ ವರ್ಮಾ ಗಿಳಿಪಾಠ ಒಪ್ಪಿಸಿದಳು. ನಿರ್ಣಾಯಕರು ಸುರಮ್ಯಾ ವರ್ಮಾಳನ್ನು ವಿಶ್ವಸುಂದರಿಯೆಂದು ಆಯ್ಕೆ ಮಾಡಿದರು. ಭವ್ಯವಾದ ಸಭಾಂಗಣದಲ್ಲಿ ಚಪ್ಪಾಳೆಗಳ ಸುರಿಮಳೆಯಾಯಿತು. 'ಬುದ್ಧಿ ಮತ್ತು ಸೌಂದರ್ಯದ ಸಮನ್ವಯ' ಎಂದು ಸುರಮ್ಯಾ ವರ್ಮಾಳ ವಿಶ್ವಸುಂದರಿ ನಿರ್ಣಯದಲ್ಲಿ ತಿಳಿಸಲಾಗಿತ್ತು.

ಇಡೀ ದೇಶವೇ ಹೆಮ್ಮೆಪಟ್ಟಿತು. ರಾಷ್ಟ್ರಪತಿ, ಪ್ರಧಾನಿಗಳು ಶುಭಾಶಯ ಸಲ್ಲಿಸಿದರು. ಸುರಮ್ಯಾ ಏರ್‌ಪೋರ್ಟಿಗೆ ಬಂದಿಳಿದಾಗ ಮಣಗಟ್ಟಲೆ ಹೂವಿನ ಹಾರದಿಂದ ಸ್ವಾಗತಿಸಿದರು. ಬಿಸಿಲಿನ ತಾಪಕ್ಕೆ ಕುದ್ದುಹೋಗಿದ್ದ ಸುರಮ್ಯಾ ಮೆಲ್ಲಗೆ ಗೊಣಗಿದಳು ''ಏನು ಬಿಸಿಲಪ್ಪಾ ಈ ಸುಡುಗಾಡು ದೇಶದಲ್ಲಿ!'' ಏರ್‌ಪೋರ್ಟಿನಿಂದ ಅವಳ ಮೆರವಣಿಗೆ ಹೊರಟಿತು. ಭಾರತದ ವಿಶ್ವಸುಂದರಿಯೆಂದು ಜನ ಅವಳ ಸಾರೋಟಿಗೆ ಕಟ್ಟಿದ್ದ ಕುದುರೆಯನ್ನು ಬಿಚ್ಚಿ ತಾವೇ ಎಳೆದರು. ಇದನ್ನೆಲ್ಲಾ ಟೀವಿಯಲ್ಲಿ ನೋಡಿದ ವಿಶ್ವಸುಂದರಿ ಪ್ರಾಯೋಜಕರು, ಬಂಡವಾಳಶಾಹಿಗಳು ಭಾರತದ ಮಾರುಕಟ್ಟೆಯನ್ನು ನೆನೆದು ಖುಷಿಯಾದರು. ತೃತೀಯ ಜಗತ್ತಿನ ವಿಶ್ವಸುಂದರಿ ಅಮೆರಿಕಾದಿಂದ ಬರುವಾಗ ಕಂಪನಿಗಳ ಮಾರಾಟದ ಜಾಹೀರಾತಿಗೆ ಧಾರಾಳವಾಗಿ ಸಹಿ ಹಾಕಿ ಬಂದಿದ್ದಳು.

ಸುರಮ್ಯಾ ವರ್ಮಾ ತನ್ನ ಸುಂದರ ಕಣ್ಣುಗಳನ್ನು ಪಿಳುಕಿಸುತ್ತಾ, ಮಲ್ಲಿಗೆ ನಗೆ ಸುರಿಸುತ್ತಾ ಗಿಳಿಪಾಠದಂತೆ ಮಾನವೀಯತೆ ಅದೂ ಇದೂ ಎಂದು ಹೇಳಿದಳಲ್ಲ, ಥೇಟ್ ಅದೇ ಸಮಯಕ್ಕೆ ಭಾರತದ ಮೂಲೆಯೊಂದರಲ್ಲಿ ಮಹೇಶ್ವರ್ ತನ್ನ 'ಆಸರೆ' ಅನಾಥಾಲಯದಲ್ಲಿ ಟಿ.ವಿ. ನೋಡುತ್ತ ಕುಳಿತಿದ್ದ. ಸುರಮ್ಯಾ ವರ್ಮಾಳ ಮಾತು ಕೇಳಿ ವಿಸ್ಮಿತನಾದ. ಇಂಥವರೂ ನಮ್ಮ ನಡುವೆ ಇದ್ದಾರಲ್ಲ ಎಂದು ಸಮಾಧಾನಪಟ್ಟುಕೊಂಡ. ಸುರಮ್ಯಾ ಭಾರತಕ್ಕೆ ಹಿಂತಿರುಗಿದ ಬಳಿಕ, ಅವಳ ವಿಖ್ಯಾತಿಯ ಒತ್ತಡಗಳೆಲ್ಲ ಕಡಿಮೆಯಾದ ಬಳಿಕ, ತನ್ನ ಉದ್ದೇಶವನ್ನು ಅವಳಿಗೆ ವಿವರಿಸಿದರೆ ಸಂತೋಷದಿಂದ ಸಹಾಯ ಮಾಡಿಯಾಳೆಂದು ಮಹೇಶ್ವರ್ ಎಣಿಕೆ ಹಾಕಿದ. ಇಂಥ ವಿಖ್ಯಾತ ವ್ಯಕ್ತಿತ್ವದವರ ಸಣ್ಣ ಚಲನೆಗಳೂ ದುರ್ಬಲರ ಬದುಕಿನಲ್ಲಿ ಬಲದ ಸೆಲೆಯನ್ನು ಚಿಮ್ಮಿಸಬಲ್ಲವೆಂದು ಆತ ಸ್ವಾನುಭವದಿಂದ ಕಂಡುಕೊಂಡಿದ್ದ.

ಸುರಮ್ಯಾ ವರ್ಮಾಳಿಗೆ ಮಾತ್ರ ದಿನಕಳೆದಂತೆ ಬೇರೆಯಾದ ಸಮಸ್ಯೆಗಳು ಶುರುವಾದವು. ಖಾಸಾ ಆರಡಿಗೂ ಎತ್ತರವಿದ್ದ ಆಕೆಗೆ ಎದುರಾಗಿ ನಟಿಸಲು ಬಾಲಿವುಡ್‌ನ ಯಾವ ನಟನೂ ಛಾತಿ ತೋರಿಸಲಿಲ್ಲ. ಇದನ್ನೇ ಮನಸ್ಸಿಗೆ ಹಚ್ಚಿಕೊಂಡು ಸ್ವಲ್ಪ ಸೊರಗಿ ಮತ್ತಷ್ಟು ಸ್ಲಿಮ್ಮಾದಳು. ಆಕೆ ಇಂಥ ಘನವಿಚಾರದಲ್ಲಿ ಇದ್ದಾಗಲೇ ಮಹೇಶ್ವರ್ ತನ್ನ ಪೂರ್ತಿ ಪರಿಚಯ, ಉದ್ದೇಶ ಹೇಳಿ ಸಹಾಯ ಕೇಳಿದ. ಮಹೇಶ್ವರ್ ಫೋನಿನಲ್ಲಿ ಹೇಳಿದ ಸೇವೆ, ಅನಾಥಾಶ್ರಮ ಮುಂತಾದ ಮಾತುಗಳು ಫಾರಿನ್ ಶಾಂಪೋನಿಂದ ತೊಳೆಸಿಕೊಂಡು ಈಜಿಪ್ತಿನ ಪಿರಮಿಡ್ಡಿನಂತೆ ಎತ್ತಿಕಟ್ಟಿದ್ದ ಕೂದಲುಗಳನ್ನು ಭೇದಿಸಿ, ಅವಳ ತಲೆಯೊಳಗಿನ ಮಿದುಳನ್ನು ಮುಟ್ಟಲೇಬೇಕಾದರೆ ಕೊಂಚ ಸಮಯ ಹಿಡಿಯಿತು. ''ನೋಡೋಣ, ಭೇಟಿಯಾಗಿ'' ಎಂದು ಹೇಳಿ ಕಾಲ್ ಕಟ್ ಮಾಡಿದಳು. ಅದೇ ಸಂಜೆ ಬಾಲಿವುಡ್‌ನ ಹಿಟ್ ನಿರ್ದೇಶಕ ಮಾಣಿಕ್ ಗುಪ್ತಾ ಸುರಮ್ಯಾಳನ್ನು ಭೇಟಿಯಾದ. ಸುರಮ್ಯಾ ತಾನು ಚಿತ್ರದಲ್ಲಿ ನಟಿಸಬೇಕೆಂದಿರುವುದನ್ನು ತಿಳಿಸಿದಳು. ಆತ ಮಾತನಾಡಲಿಲ್ಲ. ಕೊನೆಗೆ ಎದ್ದು ಹೋಗುವಾಗ ಮಾಣಿಕ್ ''ಸುರಮ್ಯಾ, ಇಂಥ ಸೊಗಸಾದ ಸಂಜೆಗೆ ನಿಮ್ಮ ಸಹಿ ಬಿದ್ದರೆ ಅದು ಸ್ಮರಣೀಯವಾಗುತ್ತದೆ'' ಎಂದ. ಸುರಮ್ಯಾ ''ಓಹ್ ! ಶ್ಯೂರ್ ಸರ್'' ಎಂದುಲಿದಳು. ಕೆಲ ದಿನಗಳಲ್ಲೇ ಮಾಣಿಕ್ ಗುಪ್ತಾ ನಿರ್ಮಾಣ-ನಿರ್ದೇಶನದಲ್ಲಿ ಸುರಮ್ಯಾ ವರ್ಮಾಳ ಮೆಗಾ ಬಜೆಟ್ ಚಿತ್ರ ಸೆಟ್ಟೇರಿತು.

ಸುರಮ್ಯಾಳ ಸೂಚನೆಯಂತೆ ಮಹೇಶ್ವರ್ ಮೂರು ಸಲ ಶೂಟಿಂಗ್ ನಡೆಯುತ್ತಿದ್ದ ಸ್ಟುಡಿಯೋದಲ್ಲಿ ಭೇಟಿಯಾದ. ಕಾರಣಾಂತರಗಳಿಂದ ಅವರ ನಡುವೆ ಮಾತುಕತೆ ನಡೆಯಲಿಲ್ಲ. ವಜೀದ್ ಖಾನ್‌ನೊಂದಿಗೆ ನಟಿಸುತ್ತ ತನ್ನ ಜೀವನದ ಅಮೃತ ಘಳಿಗೆಯನ್ನು ಕಳೆಯುತ್ತಿದ್ದ ಸುರಮ್ಯಾಗೆ ಮಹೇಶ್ವರ್ ಶಿವಪೂಜೆಯಲ್ಲಿನ ಕರಡಿಯಂತೆ ಕಂಡ. 'ಸಾವನ್ ಕಿ ಬರಸಾತ್ ಮೆ ಮುಝೆ ಆಗ್ ಲಗಿ' ಎಂದು ಸುರಮ್ಯಾ ಮತ್ತು ವಜೀದ್ ಪಾರದರ್ಶಕ ಉಡುಗೆಯಲ್ಲಿ ಮಳೆಯಲ್ಲಿ ನೆನೆಯುತ್ತಾ ಕುಣಿದು ಹಾಡಿದ ಗೀತೆ ಹಿಟ್ ಆಗುವುದರೊಂದಿಗೆ ಅವಳು ನಟಿಸಿದ ಮೊದಲ ಸಿನಿಮಾ ನೂರು ದಿನ ಓಡಿತು. ಹಾಗೆಯೆ ಪತ್ರಿಕೆಯ ಗಾಸಿಪ್ ಕಾಲಂನಲ್ಲಿ ಸುರಮ್ಯಾ, ವಜೀದ್ ಎಂದೂ ಗೈರುಹಾಜರಾಗಲಿಲ್ಲ. ಯಶಸ್ಸಿನ ಉತ್ತುಂಗದಲ್ಲಿದ್ದ ಸುರಮ್ಯಾಗೆ ಅವಳ ಇಷ್ಟದ ಫ್ಯಾನ್ ಮತ್ತು ವಜೀದ್ ಆದರೆ ಸಾಕಿತ್ತು. ಅವಳಿಗೆ ಬೇರೇನೂ ಬೇಕಿರಲಿಲ್ಲ.

ಇಂಥಾ ಸಮಯದಲ್ಲಿ ಮಹೇಶ್ವರ್ ಸುರಮ್ಯಾಗೆ ಫೋನ್ ಮಾಡಿ ಭೇಟಿಯಾಗಲು ಸಮಯ ನಿಗದಿಪಡಿಸುವಂತೆ ಕೇಳಿಕೊಂಡ. ''ಒಂದು ವಾರ ಆಗುವುದಿಲ್ಲ'' ಎಂದಳು. ಅದೆಷ್ಟೋ ವಾರಗಳು ಗತಿಸಿಹೋಗಿದ್ದವು. ಮಹೇಶ್ವರ್ ಭೇಟಿಯ ಉದ್ದೇಶವನ್ನು ಸ್ಪಷ್ಟಪಡಿಸಿದ. ಅವಳಿಗೂ ಸಾಕಾಗಿತ್ತು. ಈ ಪೀಡೆ ತೊಲಗಿದರೆ ಸಾಕು ಎಂದು ''ಆಯ್ತು, ಸಂಜೆ ನನ್ನ ಮನೆಗೆ ಬನ್ನಿ'' ಎಂದು ವಿಳಾಸ ನೀಡಿದಳು. ಹೇಳಿದ ಸಮಯಕ್ಕೆ ಸರಿಯಾಗಿ ಮಹೇಶ್ವರ್ ಸುರಮ್ಯಾಳ ಮನೆ ಮುಂದೆ ಹಾಜರಾದ. ಸುರಮ್ಯಾ ಮನೆಯಲ್ಲಿರಲಿಲ್ಲ. ವಾಚ್‌ಮನ್‌ಗೆ ವಿಚಾರಿಸಿದಾಗ ಸರಿಯಾದ ಉತ್ತರ ದೊರೆಯಲಿಲ್ಲ. ವಿಸಿಟರ್ಸ್ ಪುಸ್ತಕದಲ್ಲಿ ಸಹಿ ಹಾಕಿ ಅಲ್ಲೇ ಕಾಯುತ್ತ ನಿಂತ. ಸುಮಾರು ಹೊತ್ತಿನ ಬಳಿಕ ಸುರಮ್ಯಾ ವರ್ಮಾಳ ಸವಾರಿ ಚಿತ್ತೈಸಿತು. ಜೊತೆಗೆ ವಜೀದ್ ಖಾನ್.



''ಮೇಡಂ ನಾನು ಮಹೇಶ್ವರ್...''

ಮಹೇಶ್ವರ್‌ನ ಮಾತನ್ನು ಅರ್ಧದಲ್ಲೇ ತುಂಡರಿಸುತ್ತ ''ಯಾವ ಮಹೇಶ್ವರ್ ?'' ಸುರಮ್ಯಾ ಓಲಾಡುತ್ತ ಪ್ರಶ್ನಿಸಿದಳು.

ಇದೊಳ್ಳೆ ಕಥೆಯಾಯಿತಲ್ಲ ಎಂದುಕೊಂಡ. ಅವಳಿಗೆ ಮತ್ತೊಮ್ಮೆ ಎಲ್ಲ ಸವಿವರವಾಗಿ ಜ್ಞಾಪಿಸಿದ.

''ಓಹ್ ! ಹೌದಲ್ಲ. ಆದರೆ ನನಗೀಗ ಸಮಯವಿಲ್ಲ. ನೀವು ಮತ್ತೊಮ್ಮೆ ಬನ್ನಿ ನೋಡುವಾ'' ಎಂದಳು.

ಮಹೇಶ್ವರ್ ಇವತ್ತು ಸುರಮ್ಯಾಳಿಂದ ಸಕಾರಾತ್ಮಕ ಪ್ರತಿಕ್ರಿಯೆ ಬರದಿದ್ದರೆ ಇನ್ನೊಮ್ಮೆ ಈ ಕಡೆ ತಲೆಹಾಕಿ ಕೂಡ ಮಲಗ ಬಾರದೆಂದು ನಿರ್ಧರಿಸಿದ್ದ. ಕಟ್ಟಕಡೆಯ ಪ್ರಯತ್ನವೆಂಬಂತೆ ಎರಡು ಹೆಜ್ಜೆ ಮುಂದೆ ಸರಿದು ''ನನಗೆ ಮತ್ತೆ ತಮ್ಮನ್ನು ಭೇಟಿಯಾಗಲು ಸಾಧ್ಯವಾಗಲಿಕ್ಕಿಲ್ಲ. ನಿಮ್ಮ ಕನಸು ಮತ್ತು ನನ್ನ ದಾರಿ ಒಂದೇ ಆಗಿವೆ. ನಿಮ್ಮ ಧ್ಯೇಯಕ್ಕೆ ಅನುಗುಣವಾಗಿವೆ. ನನ್ನ ಕಾರ್ಯಕ್ಷೇತ್ರಕ್ಕೆ ತಮ್ಮ ಸಹಾಯ ಅತ್ಯಮೂಲ್ಯ. ದಯವಿಟ್ಟು ಒಮ್ಮೆ ಯೋಚಿಸಿ'' ಎಂದ.

ಸುರಮ್ಯಾ ವರ್ಮಾ ಪೂರ್ತಿಯಾಗಿ ಬೇರೆ ಜಗತ್ತಿನಲ್ಲಿ ಇದ್ದಳು. ಯಾವುದು ಮಹೇಶ್ವರ್‌ಗೆ ಗುರಿಯಾಗಿತ್ತೋ ಅದು ಸುರಮ್ಯಾಗೆ ಕೇವಲ ತಾತ್ಕಾಲಿಕ ಮೆಟ್ಟಿಲಾಗಿತ್ತು. ಅವಳು ಗುರಿಯನ್ನು ಸೇರಿಯಾಗಿತ್ತು. ಈಗ ಮಾತ್ರ ನಿಜವಾಗಿಯೂ ಮಹೇಶ್ವರ್ ತನ್ನ ದಾರಿಗಡ್ಡವಾಗಿ ನಿಂತಂತೆ ಭಾಸವಾಯಿತು.

''ಯೂ ಸ್ಕೌಂಡ್ರಲ್ ಬ್ಲ್ಯಾಕ್‌ಮೇಲ್ ಮಾಡುತ್ತೀಯ ? ಯಾಕೆ ಸುಮ್ಮನೆ ನನ್ನ ತಲೆ ತಿನ್ನುತ್ತಿರುವೆ. ಒಮ್ಮೆ ಹೇಳಿದ್ದು ತಿಳಿಯುವುದಿಲ್ಲವೆ ?'' ಎಂದವಳೇ ಮಹೇಶ್ವರ್‌ನ ಹೊಟ್ಟೆಗೆ ಝಾಡಿಸಿ ಒದ್ದಳು. ಮುಂದಿನ ಕೆಲಸ ವಜೀದ್‌ಖಾನ್ ಶ್ರದ್ಧೆಯಿಂದ ಮಾಡಿ ಮುಗಿಸಿದ.

ಸಾವರಿಸಿಕೊಂಡು ಎದ್ದ ಮಹೇಶ್ವರ್‌ಗೆ ಸುರಮ್ಯಾ ವರ್ಮಾ ವಿಶ್ವಸುಂದರಿ ವೇದಿಕೆ ಮೇಲೆ ಹೇಳಿದ್ದ ಮಾತುಗಳು ನೆನಪಿಗೆ ಬಂದವು. ಯಾರಿಗೆ ಯಾರು ಬ್ಲ್ಯಾಕ್‌ಮೇಲ್ ಮಾಡುತ್ತಿದ್ದಾರೆ ? ಎಲ್ಲಾ ಒಂದು ಕ್ಷಣ ಅಯೋಮಯವೆನಿಸಿ ರೋಷ, ದುಃಖ ವ್ಯಂಗ್ಯವಾಗಿ ಹೊರಬಂದು ನಗತೊಡಗಿದ. ಇಷ್ಟು ಒದೆ ತಿಂದು ನಾಚಿಕೆಯಿಲ್ಲದೆ ಮತ್ತೆ ನಗುತ್ತಿದ್ದಾನಲ್ಲ ಎಂದು ವಾಚ್‌ಮನ್‌ಗೆ ಅಚ್ಚರಿಯ ಜೊತೆಗೆ ಕೋಪವೂ ಬಂದಿತು.

''ಏಯ್ ನಗಲಿಕ್ಕೆ ಏನಾಯ್ತೋ ? ಹುಚ್ಚು ಹಿಡಿದಿದೆ ಏನು ?'' ಎಂದು ಬೈಯತೊಡಗಿದ.

ಮಹೇಶ್ವರ್ ನಗುತ್ತ ''ನಾನಷ್ಟೇ ಏಕೆ ಹುಚ್ಚ! ಇಡೀ ಜಗತ್ತಿಗೇ ಹುಚ್ಚು ಹಿಡಿದಿದೆ'' ಎನ್ನುತ್ತ ತಿರುಗಿ ನಡೆಯತೊಡಗಿದ. ಅವನ ಎದುರುಗಡೆ ಇದ್ದ ಮರ್ಕ್ಯೂರಿ ಬಲ್ಬ್‌ಗಳು ಮತ್ತು ಅದರ ಕೆಳಗೆ ಬೃಹದಾಕಾರವಾಗಿದ್ದ ಕಟೌಟ್‌ಗೆ ಮಾತ್ರ ಅವನ ನೋವು ಕಾಣಿಸುತ್ತಿತ್ತು. ಕಟೌಟ್‌ನಲ್ಲಿ ನಗುತ್ತ ಪೋಸ್ ಕೊಟ್ಟಿದ್ದ ಸುರಮ್ಯಾ ವರ್ಮಾಳ ಚಿತ್ರ ಮಹೇಶ್ವರ್‌ನನ್ನು ನೋಡಿ ಹಲ್ಲು ಕಿಸಿಯುತ್ತಿರುವಂತೆ ಭಾಸವಾಯಿತು.

---

**ಗಳತಗಾ ಗಾಯತ್ರೀನಂದನ**

ಆರ್. ಎಸ್. ಸಂಕಪಾಳ

ಗಳತಗಾ ಅಂಚೆ, ಚಿಕ್ಕೋಡಿ ತಾಲೂಕು, ಬೆಳಗಾವಿ ಜಿಲ್ಲೆ. ಪಿನ್ - ೫೯೧ ೨೧೯

ಡಾ|| ಟಿ. ಆರ್. ಚಂದ್ರಶೇಖರ

# ಕರ್ನಾಟಕದ ಜನಸಂಖ್ಯೆಯ ನಡೆ : ಸರ್ಕಾರದ ಜನಪ್ರಿಯ ನಡೆ

ಕರ್ನಾಟಕದಲ್ಲಿ ಜನಸಂಖ್ಯೆಯ ಭೂತವನ್ನು ಮತ್ತೊಮ್ಮೆ ಬಡಿದೆಬ್ಬಿಸುವ ಕೆಲಸ ಆರಂಭವಾಗಿರುವಂತೆ ಕಾಣುತ್ತದೆ. ಜನಸಂಖ್ಯೆಯ ಬೃಹತ್ ಗಾತ್ರ ಮತ್ತು ಅದರ ಮಿತಿಮೀರಿದ ಬೆಳವಣಿಗೆ ಕುರಿತ ಚರ್ಚೆಗಿಂತ ಮಾನ್ಯ ಮುಖ್ಯಮಂತ್ರಿ ಶ್ರೀ ಬಿ. ಎಸ್. ಯಡಿಯೂರಪ್ಪ ಅವರು ಚೀನಾ ಪ್ರವಾಸ ಮಾಡಿ ಬಂದಮೇಲೆ ಅಲ್ಲಿನ ಎರಡು ಮಕ್ಕಳ ನೀತಿಯನ್ನು ಇಲ್ಲಿಯೂ ಕಡ್ಡಾಯ ಮಾಡುವ ಬಗ್ಗೆ ಚರ್ಚೆಯೊಂದನ್ನು ಹುಟ್ಟುಹಾಕಿದ್ದಾರೆ. ಇದು ಸ್ವಾಗತಾರ್ಹ ಸಂಗತಿಯೂ ಹೌದು ಮತ್ತು ವಿಷಾದದ ಸಂಗತಿಯೂ ಹೌದು. ಜನಸಂಖ್ಯೆಯಲ್ಲಿ ನಮ್ಮ ಜನನಾಯಕರಿಗೆ 'ಸಂಖ್ಯೆ' ಮಾತ್ರ ಕಂಡುಬಂದು ಅಲ್ಲಿರುವ 'ಜನರು' ಕಂಡುಬರುತ್ತಿಲ್ಲವಲ್ಲ ಎಂಬ ಕಾರಣಕ್ಕೆ ಹಾಗೂ ಜನಸಂಖ್ಯೆಯ ನಡೆ ಇಂದು ಹೇಗೆ ಸಾಗಿದೆ ಎಂಬುದರ ಬಗ್ಗೆ ಅರಿವಿಲ್ಲದವರು ಮಾತಾಡುವಂತೆ ಜನನಾಯಕರು ಮಾತಾಡುತ್ತಿದ್ದಾರಲ್ಲ ಎಂಬ ಕಾರಣಕ್ಕೆ ಅದು ವಿಷಾದವನ್ನು ಹುಟ್ಟಿಸುತ್ತದೆ. ಅದು ನಮ್ಮಲ್ಲಿ ಕುತೂಹಲವನ್ನು ಕೆರಳಿಸುವುದಿಲ್ಲ. ಒಂದು ದೃಷ್ಟಿಯಿಂದ ಇದು ಸ್ವಾಗತಾರ್ಹ. ಏಕೆಂದರೆ ಎಲ್ಲದಕ್ಕೂ ಅಧಿಕಾರಿಗಳನ್ನು ಹೀಗಳೆಯುತ್ತಿದ್ದ-ದೂಷಿಸುತ್ತಿದ್ದ ನಮ್ಮ ಜನನಾಯಕರು ಈಗ ಸಮಸ್ಯೆಗಳ ಬಗ್ಗೆ ಮಾತನಾಡ ತೊಡಗಿದ್ದಾರಲ್ಲ ಎಂಬ ಕಾರಣಕ್ಕೆ, ಮತ್ತು ಆ ಬಗ್ಗೆ ಚರ್ಚೆಯಾಗಬೇಕೆಂದು ಜನತಂತ್ರ ಪರಿಭಾಷೆಯಲ್ಲಿ ಮಾತನಾಡುತ್ತಿದ್ದಾರಲ್ಲ ಎಂಬ ಕಾರಣಕ್ಕೆ ಅವರು ಅಭಿನಂದನಾರ್ಹರು. ಜನಸಂಖ್ಯೆಯನ್ನು ಕುರಿತಂತೆ ಮುಖ್ಯಮಂತ್ರಿ ಅವರು ಚೀನಾದ ಎರಡು ಮಕ್ಕಳ ನಿಯಮ, ಅದರ ಮೂಲಕ ಅದು ಸಾಧಿಸಿಕೊಂಡಿರುವ ಸಾಧನೆಯನ್ನು ಕುರಿತಂತೆ ಅತ್ಯಂತ ಸರಳೀಕರಣ ಮಾಡಿ ಮಾತನಾಡುತ್ತಿದ್ದಾರೆ. ಆದರೆ ವಿಷಯ ಅಷ್ಟು ಸರಳವಾಗಿಲ್ಲ. ಚೀನಾ ದೇಶವು ಇಂದು ಎರಡು ಮಕ್ಕಳ ನಿಯಮದ ಬಗ್ಗೆ ಪುನರಾಲೋಚಿಸುತ್ತಿದೆ. ನಮ್ಮ ರಾಜಕಾರಣಿಗಳು ಜನಸಂಖ್ಯೆಗೆ ಸಂಬಂಧಿಸಿದಂತೆ ತುಂಬಾ ಭ್ರಮೆಯಲ್ಲಿರುವಂತೆ ಕಾಣುತ್ತದೆ. ''ಜನಸಂಖ್ಯೆಯ ಬೆಳವಣಿಗೆಯನ್ನು ನಿಯಂತ್ರಿಸದಿದ್ದರೆ ಅಭಿವೃದ್ಧಿ ಕಡೆಗೆ ಗಮನ ಕೊಡುವುದು ಸಾಧ್ಯವಾಗುವುದಿಲ್ಲ'' ಎಂದು ಮುಖ್ಯಮಂತ್ರಿ ಹೇಳಿದ್ದಾರೆ. ಮಾನ್ಯ ಯಡಿಯೂರಪ್ಪ ಅವರು ಹೀಗೆ ಹೇಳಿದ್ದರೆ ನಾನು ಅದರಲ್ಲಿ ತಪ್ಪು ಹುಡುಕುವುದಕ್ಕೆ ಹೋಗುವುದಿಲ್ಲ. ಅವರಿಗೆ ಅದರ ಬಗ್ಗೆ ಹೆಚ್ಚು ನಡೆಯಿಲ್ಲ. ಆದರೆ ಅವರು ಇಂತಹ ಹೇಳಿಕೆ ಕೊಡುವಾಗ ಅವರ ಸಲಹೆಗಾರರು ಏನು ಮಾಡುತ್ತಿದ್ದಾರೆಂಬುದು ನನ್ನಲ್ಲಿ ಅಚ್ಚರಿ ಮೂಡಿಸಿದೆ.

**ಕರ್ನಾಟಕದಲ್ಲಿ ಏನು ನಡೆದಿದೆ ?**

ಜನಸಂಖ್ಯೆ ಬಗ್ಗೆ ಕರ್ನಾಟಕದಲ್ಲಿ ಸ್ಥಿತಿ ಹೇಗಿದೆ ಎಂಬುದನ್ನು ನಾವು ಸ್ಥೂಲವಾಗಿ ಪರಿಶೀಲಿಸಬಹುದು. ಕರ್ನಾಟಕದ ಜನಸಂಖ್ಯೆಯಲ್ಲಿ ೦-೬ ವಯೋಮಾನದ ಮಕ್ಕಳ ಸಂಖ್ಯೆಯು ೧೯೯೧ರಲ್ಲಿ ೭೪.೭೪ ಲಕ್ಷವಿದ್ದುದು ೨೦೦೧ರಲ್ಲಿ ೭೧.೮೨ ಲಕ್ಷಕ್ಕಿಳಿದಿದೆ. ಅಂದರೆ ಕಳೆದ ದಶಕದಲ್ಲಿ ಎಳೆ ಮಕ್ಕಳ ಪ್ರಮಾಣವು ಶೇ. ೩.೯೧ರಷ್ಟು ಇಳಿದಿದೆ. ಒಟ್ಟು ಜನಸಂಖ್ಯೆಯಲ್ಲಿ ೦-೬ ವಯೋಮಾನದ ಮಕ್ಕಳ ಪ್ರಮಾಣ ೧೯೯೧ರಲ್ಲಿ

ಇಂದು ಕರ್ನಾಟಕದಲ್ಲಿ ಜನಸಂಖ್ಯೆಯ ಬೆಳವಣಿಗೆಯು ಅಭಿವೃದ್ಧಿಗೆ ಅಡ್ಡಿಯಾಗಿದೆಯೆಂದು ಹೇಳುವ ಸ್ಥಿತಿಯಿಲ್ಲ. ಆದರೆ ನಮ್ಮ ಮುಖ್ಯಮಂತ್ರಿ ಅವರು ಅದು ಅಡ್ಡಿಯುಂಟುಮಾಡುತ್ತಿದೆಯೆಂದು ಹೇಳುತ್ತಿದ್ದಾರೆ. ನಿಜಕ್ಕೂ ಸರ್ಕಾರಕ್ಕೆ ಹಿಂದುಳಿದ ಜಿಲ್ಲೆಗಳಲ್ಲಿನ ಜನಸಂಖ್ಯೆಯ ಬೆಳವಣಿಗೆಯನ್ನು ತಡೆಗಟ್ಟುವ ಮನಸ್ಸಿದ್ದರೆ ಅಲ್ಲಿನ ಒಟ್ಟಾರೆ ಸಾಕ್ಷರತೆಯನ್ನು, ಅದರಲ್ಲೂ ಮಹಿಳೆಯರ ಸಾಕ್ಷರತೆಯನ್ನು ಹೆಚ್ಚಿಸುವ ಬಗ್ಗೆ ಯೋಚಿಸಬೇಕು. ಮಹಿಳೆಯರ ಸಾಕ್ಷರತೆಯನ್ನು ಹೆಚ್ಚಿಸುವುದರ ಮೂಲಕ, ಮಹಿಳೆಯರಿಗೆ ಹೆಚ್ಚು ಅಧಿಕಾರ ನೀಡುವುದರ ಮೂಲಕ, ಲಿಂಗ ಸಮಾನತೆಯನ್ನು ಸಾಧಿಸಿಕೊಳ್ಳುವುದರ ಮೂಲಕ, ಅವರಿಗೆ ಆಸ್ತಿಯ ಹಕ್ಕು ನೀಡುವುದರ ಮೂಲಕ ಜನಸಂಖ್ಯೆಯನ್ನು ನಿಯಂತ್ರಿಸಿರುವುದಕ್ಕೆ ನಮಗೆ ಪುರಾವೆಗಳು ದೊರೆಯುತ್ತವೆ ವಿನಾ ಎರಡು ಮಕ್ಕಳನ್ನು ಮಾತ್ರ ಪಡೆದುಕೊಳ್ಳಬೇಕು ಎಂಬ ಸರ್ವಾಧಿಕಾರಿ ಸ್ವರೂಪದ ನೀತಿಯಿಂದ ನಿಯಂತ್ರಿಸುವುದರ ಬಗ್ಗೆ ನಮಗೆ ನಿದರ್ಶನಗಳು ದೊರೆಯುವುದಿಲ್ಲ.

ಶೇ. ೧೬.೬೨ರಷ್ಟಿದ್ದುದು ೨೦೦೧ರಲ್ಲಿ ಅದು ಶೇ. ೧೩.೬ಕ್ಕಿಳಿದಿದೆ. ನಮ್ಮ ಜನಸಂಖ್ಯೆಯು 'ಏಕ ಜನಸಂಖ್ಯೆ'ಯಾಗಿ ಉಳಿದಿಲ್ಲ. ನಮ್ಮಲ್ಲಿ ೧೯೯೧ರಲ್ಲಿ ಜನಸಂಖ್ಯೆಯ ವಾರ್ಷಿಕ ಬೆಳವಣಿಗೆ ಪ್ರಮಾಣ ಶೇ. ೨ಕ್ಕಿಂತ ಕಡಿಮೆಯಿದ್ದ ಜಿಲ್ಲೆಗಳ ಸಂಖ್ಯೆಯು ೧೩. ಆದರೆ ೨೦೦೧ರಲ್ಲಿ ಅವುಗಳ ಸಂಖ್ಯೆಯು ೧೯ಕ್ಕೇರಿದೆ. ರಾಜ್ಯಮಟ್ಟದಲ್ಲಿ ೧೯೯೧ರಿಂದ ೨೦೦೧ರ ಅವಧಿಯಲ್ಲಿ ಜನಸಂಖ್ಯೆಯ ವಾರ್ಷಿಕ ಬೆಳವಣಿಗೆ ಪ್ರಮಾಣ ಶೇ. ೧.೭೫ರಷ್ಟಿದೆ. ಚಾಮರಾಜನಗರ, ಉಡುಪಿ, ಹಾಸನ ಮತ್ತು ಮಂಡ್ಯ ಜಿಲ್ಲೆಗಳಲ್ಲಿ ಜನಸಂಖ್ಯೆಯ ಬೆಳವಣಿಗೆ ಪ್ರಮಾಣ ಕಳೆದ ದಶಕದಲ್ಲಿ ಶೇ. ೧ಕ್ಕಿಂತ ಕಡಿಮೆಯಿದೆ. ಇದಕ್ಕಿಂತ ಇನ್ನೆಷ್ಟು ಅದು ಕಡಿಮೆಯಾಗಬೇಕು ? ಇದೆಲ್ಲ ಏನನ್ನು ಸೂಚಿಸುತ್ತದೆ ? ನಮ್ಮಲ್ಲಿ ಜನಸಂಖ್ಯೆಯ ಬೆಳವಣಿಗೆ ಸಮಸ್ಯೆಯಿದ್ದರೆ ಅದು ಬಳ್ಳಾರಿ, ಕೊಪ್ಪಳ, ರಾಯಚೂರು ಮತ್ತು ಗುಲಬರ್ಗಾ ಜಿಲ್ಲೆಗಳಲ್ಲಿದೆ. ಅಲ್ಲಿ ಜನಸಂಖ್ಯೆಯ ಬೆಳವಣಿಗೆ ಪ್ರಮಾಣ ಶೇ. ೨ಕ್ಕಿಂತ ಅಧಿಕವಾಗಿದೆ. ಇನ್ನಾವ ಜಿಲ್ಲೆಯಲ್ಲೂ ಶ್ರೀ ಯಡಿಯೂರಪ್ಪ ಅವರು ಹೇಳುವ ರೀತಿಯ ಜನಸಂಖ್ಯಾ ಸಮಸ್ಯೆಯಿಲ್ಲ. ಅದರ ಬಗ್ಗೆ ನಮ್ಮಲ್ಲಿ ಸಮಸ್ಯೆಯಿದ್ದರೆ ಅದು ಗಾತ್ರಕ್ಕೆ ಸಂಬಂಧಿಸಿದ್ದಲ್ಲ. ಅದು ಜನಸಂಖ್ಯೆಯ ಗುಣಕ್ಕೆ ಸಂಬಂಧಿಸಿದುದಾಗಿದೆ. ಅದು ಅನಕ್ಷರತೆಗೆ, ಶಾಲೆ ಬಿಟ್ಟ ಮಕ್ಕಳಿಗೆ, ರೋಗರುಜಿನಗಳಿಗೆ, ಅಪ್ರಾಪ್ತ ಸಾವುಗಳಿಗೆ, ತಾಯಂದಿರ ಮರಣಕ್ಕೆ ಸಂಬಂಧಿಸಿದ ಸಂಗತಿಯಾಗಿದೆ.

ಇಂದು ಕರ್ನಾಟಕದಲ್ಲಿ ಜನಸಂಖ್ಯೆಯ ಬೆಳವಣಿಗೆಯು ಅಭಿವೃದ್ಧಿಗೆ ಅಡ್ಡಿಯಾಗಿದೆ ಎಂದು ಹೇಳುವ ಸ್ಥಿತಿಯಿಲ್ಲ. ಆದರೆ ನಮ್ಮ ಮುಖ್ಯಮಂತ್ರಿ ಅವರು ಅದು ಅಡ್ಡಿಯುಂಟು ಮಾಡುತ್ತಿದೆಯೆಂದು ಹೇಳುತ್ತಿದ್ದಾರೆ. ನಿಜಕ್ಕೂ ಸರ್ಕಾರಕ್ಕೆ ಮೇಲೆ ನಾನು ತಿಳಿಸಿರುವ ಹಿಂದುಳಿದ ಜಿಲ್ಲೆಗಳಲ್ಲಿನ ಜನಸಂಖ್ಯೆಯ ಬೆಳವಣಿಗೆಯನ್ನು ತಡೆಗಟ್ಟುವ ಮನಸ್ಸಿದ್ದರೆ ಅಲ್ಲಿನ ಒಟ್ಟಾರೆ ಸಾಕ್ಷರತೆಯನ್ನು, ಅದರಲ್ಲೂ ಮಹಿಳೆಯರ ಸಾಕ್ಷರತೆಯನ್ನು ಹೆಚ್ಚಿಸುವ ಬಗ್ಗೆ ಯೋಚಿಸಬೇಕು. ಮಹಿಳೆಯರ ಸಾಕ್ಷರತೆಯನ್ನು ಹೆಚ್ಚಿಸುವುದರ ಮೂಲಕ, ಮಹಿಳೆಯರಿಗೆ ಹೆಚ್ಚು ಅಧಿಕಾರ ನೀಡುವುದರ ಮೂಲಕ, ಲಿಂಗ ಸಮಾನತೆಯನ್ನು ಸಾಧಿಸಿಕೊಳ್ಳುವುದರ ಮೂಲಕ, ಅವರಿಗೆ ಆಸ್ತಿಯ ಹಕ್ಕು ನೀಡುವುದರ ಮೂಲಕ ಜನಸಂಖ್ಯೆಯನ್ನು ನಿಯಂತ್ರಿಸಿರುವುದಕ್ಕೆ ನಮಗೆ ಪುರಾವೆಗಳು ದೊರೆಯುತ್ತವೆ ವಿನಾ ಎರಡು ಮಕ್ಕಳನ್ನು ಮಾತ್ರ ಪಡೆದುಕೊಳ್ಳಬೇಕು ಎಂಬ ಸರ್ವಾಧಿಕಾರಿ ಸ್ವರೂಪದ ನೀತಿಯಿಂದ ನಿಯಂತ್ರಿಸುವುದರ ಬಗ್ಗೆ ನಮಗೆ ನಿದರ್ಶನಗಳು ದೊರೆಯುವುದಿಲ್ಲ. ಮುಖ್ಯಮಂತ್ರಿಗಳು ಗಮನಿಸಬೇಕಾದ ಸಂಗತಿಯೇನೆಂದರೆ ಈಗಾಗಲೇ ನಮ್ಮ ರಾಜ್ಯದಲ್ಲಿ ಒಂದನೇ ತರಗತಿಗೆ ಸೇರಿಕೊಳ್ಳುವ ಮಕ್ಕಳ ಸಂಖ್ಯೆಯು ವರ್ಷದಿಂದ ವರ್ಷಕ್ಕೆ ಕಡಿಮೆಯಾಗುತ್ತಾ ನಡೆದಿದೆ. ಹಿಂದುಳಿದ ಜಿಲ್ಲೆಗಳಲ್ಲಿ ಇಂತಹ ಪರಿವರ್ತನೆ ನಡೆದಿರಲಿಕ್ಕಿಲ್ಲ. ನಾವು ಗಮನ ನೀಡಬೇಕಾಗಿರುವುದು ಈ ಬಗೆಯ ಸಂಗತಿಗಳ ಬಗ್ಗೆ ವಿನಾ ಎರಡು ಮಕ್ಕಳ ನೀತಿಯ ಬಗ್ಗೆಯಲ್ಲ.

**ಪ್ರಾದೇಶಿಕ ನೆಲೆಗಳು**

ಜನಸಂಖ್ಯೆಯ ಸಮಸ್ಯೆಗೆ ಪ್ರಾದೇಶಿಕ ನೆಲೆಗಳಿವೆ. ಡಾ|| ಡಿ. ಎಮ್. ನಂಜುಂಡಪ್ಪ ಸಮಿತಿ ವರದಿಯನ್ನು ಸರ್ಕಾರ ಕೇವಲ 'ಎಂಟು ವರ್ಷಗಳ ವಿಶೇಷ ಅಭಿವೃದ್ಧಿ ಯೋಜನೆ'ಗೆ ಸೀಮಿತಗೊಳಿಸಿಬಿಟ್ಟಿದೆ. ಅವರ ವರದಿಯ ಒಂದು ಭಾಗ ಮಾತ್ರ ಈ ವಿಶೇಷ ಅಭಿವೃದ್ಧಿ ಯೋಜನೆ. ನಿಜಕ್ಕೂ ಈ ಸರ್ಕಾರಕ್ಕೆ ಪ್ರಾದೇಶಿಕ ಅಸಮಾನತೆಯನ್ನು ನಿವಾರಿಸುವ ಮನಸ್ಸಿದ್ದರೆ ಮೊದಲು ಅಕ್ಷರ ಸಂಸ್ಕೃತಿಗೆ ಸಂಬಂಧಿಸಿದ ಅಸಮಾನತೆಯನ್ನು ಹೋಗಲಾಡಿಸಲು ಪ್ರಯತ್ನಿಸಬೇಕು. ಉದಾಹರಣೆಗೆ, ರಾಜ್ಯದ ಒಟ್ಟು ಅಕ್ಷರಸ್ಥರಲ್ಲಿ ದಕ್ಷಿಣ ಕರ್ನಾಟಕ ಪ್ರದೇಶ (ದ.ಕ.ಪ್ರ.)ದ ಪಾಲು ಶೇ. ೭೦ರಷ್ಟಿದ್ದರೆ (ಜನಸಂಖ್ಯೆಯಲ್ಲಿ ಅದರ ಪಾಲು ಶೇ. ೫೭.೨೮) ಉತ್ತರ ಕರ್ನಾಟಕ ಪ್ರದೇಶ (ಉ.ಕ.ಪ್ರ.)ದ ಪಾಲು ಕೇವಲ ಶೇ. ೩೦ (ಜನಸಂಖ್ಯೆಯಲ್ಲಿ ಅದರ ಪಾಲು ಶೇ. ೪೨.೭೨). ಆದರೆ ಅನಕ್ಷರಸ್ಥರನ್ನು ತೆಗೆದುಕೊಂಡರೆ ದ.ಕ.ಪ್ರ.ದ ಪಾಲು ಶೇ. ೩೫.೦೪ರಷ್ಟಾದರೆ ಉ.ಕ.ಪ್ರ.ದ ಪಾಲು ಶೇ. ೬೪.೯೬. ಡಾ|| ಡಿ. ಎಂ. ನಂಜುಂಡಪ್ಪ ಸಮಿತಿ ವರದಿಯ ಬಹುಮುಖ್ಯ ಶಿಫಾರಸ್ಸೆಂದರೆ 'ಪ್ರಾದೇಶಿಕ ಅಭಿವೃದ್ಧಿ ನೀತಿ'ಯನ್ನು ಘೋಷಿಸುವುದಾಗಿದೆ. ಆದರೆ ಸರ್ಕಾರವು ಇದರ ಬಗ್ಗೆ ಮನಸ್ಸನ್ನು ಕೊಟ್ಟಿಲ್ಲ. ಈಗ ಇದ್ದಕ್ಕಿದ್ದಂತೆ ಜನಸಂಖ್ಯೆಯ ಭೂತವನ್ನು ಎಬ್ಬಿಸಲಾಗುತ್ತಿದೆ. ಅದು ಬಲವಂತದಿಂದ ಮತ್ತು ಕೋವಿಯ ಮೂಲಕ ನಿಯಂತ್ರಿಸಬಹುದಾದ ಸಂಗತಿಯಲ್ಲ. ಚೀನವು ಎರಡು ಮಕ್ಕಳ ನೀತಿಯನ್ನು ಅನುಸರಿಸಿ ಕೈ ಸುಟ್ಟುಕೊಂಡಿದೆ. ಡಾ|| ಡಿ. ಎಂ. ನಂಜುಂಡಪ್ಪ ಸಮಿತಿ ವರದಿಯ ಅನುಷ್ಠಾನಕ್ಕಾಗಿ ಒಂದು ಸಮಿತಿಯನ್ನೇ ಸರ್ಕಾರ

# ಕೈ ಕೆಸರಾದರೆ...



ವಿ. ಹರಿನಾಥ ಬಾಬು ಸಿರುಗುಪ್ಪ
ಸದಾಶಿವ ನಗರ, ಸಿರುಗುಪ್ಪ - ೫೮೩ ೧೨೧
ಬಳ್ಳಾರಿ ಜಿಲ್ಲೆ

**ಗಾಳಿ**

ಬಿರುಗಾಳಿಯಾಗಿ ಧೂಳೆಬ್ಬಿಸಿ
ಡಿಕ್ಕಿ ಹೊಡೆದರೆ ಮೋಡಗಳು
ಗುಡುಗು - ಸಿಡಿಲು - ಮಿಂಚು
ಮೂಡುವುದು
ಆಗಸದ ತುಂಬಾ ಬೆಳಕಿನ
ಚಿತ್ತಾರ
ಬರಿಗಾಳಿ ತಿಳಿಮೋಡ
ಬೆರಗುಗೊಳಿಸುವುದಿಲ್ಲ.

'ಹನಿ ಹನಿಗೂಡೆ ಹಳ್ಳ'
ನದಿಯಾಗಿ
ಸಮುದ್ರ ಸೇರುವ ಮುನ್ನ
ಸೇರಿಕೊಳ್ಳುವುದು ಒಡಲೊಳಗೆ
ಕಸ - ಕಡ್ಡಿ ; ಕಲ್ಲು - ಮಣ್ಣು ;
ಕೊಡಲು ಬದುಕಿಗೊಂದು

ಬಣ್ಣ
ತಿಳಿನೀರು ತೆಳ್ಳಗೆ
ಬೆಳ್ಳಿಯಂತಾಗುವ ಮುನ್ನ .

ಉಪ್ಪು ಕಡಲು
ಸಿಹಿ ನೀರ ಒಡಲು
ಬಿಸಿಲಿಗೆ ಬೆವೆತು ಆವಿಯಾದರೆ
ಆಕಾಶಕ್ಕೇರುವುದು ಹಗುರಾಗಿ
ಕೊಳೆಯ ಭಾರವನೆಲ್ಲ
ಕಳೆದುಕೊಂಡು
ಬೇಡವೆಂದರೆ ಸಂಗ
ಸೂರ್ಯನಿಂದ
ಬದುಕು ಬದಲಾಗುವುದಿಲ್ಲ
ಸುಮ್ಮನೆ ಹಂಗ.

ರಚಿಸಿದೆ. ಅದರ ಅಧ್ಯಕ್ಷರಿಗೆ ಸಂಪುಟ ದರ್ಜೆ ಸ್ಥಾನಮಾನ ನೀಡಲಾಗಿದೆ. ಆದರೆ ಈ ಸಮಿತಿಯು ಒಮ್ಮೆಯಾದರೂ ಡಾ|| ಡಿ. ಎಂ. ನಂಜುಂಡಪ್ಪ ಸಮಿತಿ ವರದಿಯ ಮುಖ್ಯ ಶಿಫಾರಸ್ಸಾದ 'ಪ್ರಾದೇಶಿಕ ಅಭಿವೃದ್ಧಿ ನೀತಿ'ಯ ಘೋಷಣೆ ಬಗ್ಗೆ ಚಿಂತಿಸಿಲ್ಲ ಮತ್ತು ಅದನ್ನು ಸಿದ್ಧಪಡಿಸುವ ಬಗ್ಗೆ ಗಮನ ನೀಡಿಲ್ಲ ಹಾಗೂ ಕ್ರಮ ತೆಗೆದುಕೊಂಡಿಲ್ಲ. ಜನಸಂಖ್ಯೆಯ ಸಮಸ್ಯೆಯು ತೀವ್ರವಾಗಿರುವ ಹೈದರಾಬಾದ್ ಕರ್ನಾಟಕ ಪ್ರದೇಶದಲ್ಲಿ ಈ ಬಗ್ಗೆ ಏನು ಮಾಡಬೇಕೆಂಬುದರ ಬಗ್ಗೆ ಅದು ಚರ್ಚೆ ಮಾಡುತ್ತಿಲ್ಲ. ಆದರೆ ಮುಖ್ಯಮಂತ್ರಿಗಳು ಎರಡು ಮಕ್ಕಳ ನೀತಿಯ ಬಗ್ಗೆ ಮಾತನಾಡುತ್ತಿದ್ದಾರೆ.

**ಮಹಿಳೆಯರ ಆರೋಗ್ಯ**

ಜನಸಂಖ್ಯೆಯನ್ನು ನಿಯಂತ್ರಿಸುವಲ್ಲಿ ಬಹುಮುಖ್ಯ ಪಾತ್ರ ಮಹಿಳೆಯರ ಆರೋಗ್ಯಕ್ಕಿದೆ. ಲಿಂಗ ಸಮಾನತೆಗೆ ಇದರಲ್ಲಿ ಪಾತ್ರವಿದೆ. ಇವು ತುಂಬ ಸೂಕ್ಷ್ಮವಾದ ಸಂಗತಿಗಳು. ನಮ್ಮಲ್ಲಿ ಎನ್‌ಎಫ್‌ಎಚ್‌ಎಸ್ ಎರಡನೆಯ ಸುತ್ತಿನಲ್ಲಿ ಕಂಡುಬಂದ ಮಹಿಳೆಯರಲ್ಲಿನ ಅನೀಮಿಯ ಪ್ರಮಾಣವು ಎನ್‌ಎಫ್‌ಎಚ್‌ಎಸ್ ಮೂರನೆಯ ಸುತ್ತಿನಲ್ಲಿ ಅಧಿಕಗೊಂಡಿರುವುದು ಆತಂಕಕ್ಕೆ ಕಾರಣವಾಗಬೇಕು. ಸಂತಾನೋತ್ಪತ್ತಿ ಹಕ್ಕುಗಳಿಂದ ನಮ್ಮ ಮಹಿಳೆಯರು ವಂಚಿತರಾಗಿದ್ದಾರೆ. ನಮ್ಮ ಸರ್ಕಾರಕ್ಕೆ ಕರ್ನಾಟಕ ಮಹಿಳಾ ಆಯೋಗಕ್ಕೆ ಅಧ್ಯಕ್ಷರನ್ನು ಇನ್ನೂ ನೇಮಿಸುವುದಾಗಿಲ್ಲ. ಮಹಿಳೆಯರ ಮೇಲಿನ ಹಿಂಸೆಯನ್ನು ಕುರಿತಂತೆ ಜನರಿಗೆ ಅನೇಕ ಬಗೆಯ ಭ್ರಮೆಗಳಿವೆ. ನಮ್ಮ ಕುಟುಂಬಗಳು ಪ್ರೀತಿಯ ಗೂಡುಗಳಿದ್ದಂತೆ ಅವು ಮಹಿಳೆಯರ ಪಾಲಿಗೆ ಸರಕದ ಕೂಪಗಳೂ ಆಗಿವೆ. ಈ ಸಂಗತಿಗಳೆಲ್ಲ ಶ್ರಾವಣ ಮಾಸದಲ್ಲಿ ವರಮಹಾಲಕ್ಷ್ಮಿ ಪೂಜೆ ಮಾಡಿಬಿಟ್ಟರೆ ಸರಿಹೋಗಿಬಿಡುವುದಿಲ್ಲ.

ಕಳೆದ ಜನಗಣತಿಯಲ್ಲಿ ೦-೬ ವಯೋಮಾನದ ಮಕ್ಕಳ ಲಿಂಗ ಅನುಪಾತವು ಕಡಿಮೆಯಾಗಿರುವುದರ ಬಗ್ಗೆ ನಾವು ಆತಂಕ ಪಡಬೇಕು. ಅದಕ್ಕೆ ಸರ್ಕಾರವು ಭಾಗ್ಯಲಕ್ಷ್ಮಿ ಯೋಜನೆಯನ್ನು ಜಾರಿಗೊಳಿಸಿದೆ, ಸರಿ. ಆದರೆ ಮಹಿಳೆಯರ ಮನೆಯ ಹೊರಗಿನ ದುಡಿಮೆ ಬಗ್ಗೆ ನಾವು ಹೆಚ್ಚು ಗಮನ ನೀಡಬೇಕಾಗಿದೆ. ಜನಸಂಖ್ಯೆಯನ್ನು ನಿಯಂತ್ರಿಸುವಲ್ಲಿ ಅದರ ಪಾತ್ರವು ಮಹತ್ವದ್ದಾಗಿದೆ. ಅಮರ್ತ್ಯ ಸೇನ್ ಹೇಳುವಂತೆ ಜನಸಂಖ್ಯೆಯ ನಿಯಂತ್ರಣವು ಕುಟುಂಬ ಯೋಜನೆಗೆ ಸಂಬಂಧಿಸಿದ ಸಂಗತಿಯಲ್ಲ. ಅಂತಹ ಭ್ರಮೆಯನ್ನು ನಮ್ಮಲ್ಲಿ ಹುಟ್ಟುಹಾಕಲಾಗಿದೆ. ಜನಸಂಖ್ಯೆಯ ಬಗೆಗಿನ ಇಂತಹ ಪೂರ್ವಗ್ರಹಗಳಿಂದ ನಮ್ಮ ಜನನಾಯಕರು ಹೊರಬರಬೇಕು. ಜನಸಂಖ್ಯಾ ಪರಿವರ್ತನೆಯ ಮೊದಲೆರಡು ಹಂತಗಳನ್ನು ದಾಟಿ ಮೂರನೆಯ ಹಂತವಾದ ಜನನ ಪ್ರಮಾಣ ಮತ್ತು ಮರಣ ಪ್ರಮಾಣಗಳೆರಡೂ ಕೆಳಮಟ್ಟದಲ್ಲಿರುವ ಸ್ಥಿತಿಯ ಕಡೆಗೆ ಕರ್ನಾಟಕವು ನಿಧಾನವಾಗಿ, ಆದರೆ ನಿಶ್ಚಿತವಾಗಿ ಸಾಗುತ್ತಿದೆ. ಇದರ ಬಗ್ಗೆ ಮುಖ್ಯಮಂತ್ರಿಗಳು ಆತಂಕಪಡುವ ಅವಶ್ಯಕತೆಯಿಲ್ಲ.

**ಕೋಷ್ಟಕ - ೧**

**ಕರ್ನಾಟಕದಲ್ಲಿ ಜನಸಂಖ್ಯಾ ಬೆಳವಣಿಗೆಯ ಪ್ರಾದೇಶಿಕ ಸ್ವರೂಪ ೧೯೮೧-೨೦೦೧**

| ವಿವರಗಳು | ಜನಸಂಖ್ಯೆ ಮತ್ತು ಅದರ ಬೆಳವಣಿಗೆ ಪ್ರಮಾಣ | | | | |
|---|---|---|---|---|---|
| | ೧೯೮೧ (ಲಕ್ಷಗಳಲ್ಲಿ) | ೧೯೯೧ (ಲಕ್ಷಗಳಲ್ಲಿ) | ೨೦೦೧ (ಲಕ್ಷಗಳಲ್ಲಿ) | ೧೯೮೧-೧೯೯೧ (ಶೇಕಡವಾರು ಬೆಳವಣಿಗೆ ಪ್ರಮಾಣ) | ೧೯೯೧-೨೦೦೧ (ಶೇಕಡವಾರು ಬೆಳವಣಿಗೆ ಪ್ರಮಾಣ) |
| ಕರ್ನಾಟಕ ರಾಜ್ಯ (೨೭ ಜಿಲ್ಲೆಗಳು) | ೩೭೧.೩೫ | ೪೪೯.೭೭ | ೫೨೮.೫೦ | ೨೧.೧೧ (೨.೧೧) | ೧೭.೫೦ (೧.೭೫) |
| ಹೈ.ಕ.ಪ್ರ. (೫ ಜಿಲ್ಲೆಗಳು) | ೬೨.೯೯ | ೭೮.೦೪ | ೯೫.೨೬ | ೨೩.೯೩ (೨.೩೯) | ೨೨.೦೬ (೨.೨೧) |
| ಹೈ.ಕ.ಪ್ರ. ಬಿಟ್ಟು ಉಳಿದ ಕರ್ನಾಟಕ (೨೨ ಜಿಲ್ಲೆಗಳು) | ೩೦೮.೩೬ | ೩೭೧.೭೩ | ೪೩೩.೨೪ | ೨೦.೭೪ (೨.೦೭) | ೧೬.೫೫ (೧.೬೫) |

ಟಿಪ್ಪಣಿ : ಆವರಣದಲ್ಲಿನ ಅಂಕಿಗಳು ಜನಸಂಖ್ಯೆಯ ವಾರ್ಷಿಕ ಬೆಳವಣಿಗೆ ಪ್ರಮಾಣವನ್ನು ತೋರಿಸುತ್ತವೆ.

ಮೂಲ : (೧) ಸೆನ್ಸಸ್ ಆಫ್ ಇಂಡಿಯಾ ೧೯೯೧ ಸಿರೀಸ್ ೧೧. ಕರ್ನಾಟಕ ಪ್ರೈಮರಿ ಸೆನ್ಸಸ್ ಅಬ್‌ಸ್ಟ್ರಾಕ್ಟ್. ಜನರಲ್ ಪಾಪ್ಯುಲೇಶನ್. ಡೈರೆಕ್ಟರೇಟ್ ಆಫ್ ಸೆನ್ಸಸ್ ಆಪರೇಶನ್, ಕರ್ನಾಟಕ, ಪು. ೩೩

(೨) ಸೆನ್ಸಸ್ ಆಫ್ ಇಂಡಿಯಾ ೨೦೦೧ ಸಿರೀಸ್ ೩೦. ಕರ್ನಾಟಕ. ಪ್ರೈಮರಿ ಸೆನ್ಸಸ್ ಅಬ್‌ಸ್ಟ್ರಾಕ್ಟ್. ಜನರಲ್ ಪಾಪ್ಯುಲೇಶನ್. ಡೈರೆಕ್ಟರೇಟ್ ಆಫ್ ಸೆನ್ಸಸ್ ಅಪರೇಶನ್, ಕರ್ನಾಟಕ.

ಇಲ್ಲಿ ನೀಡಿರುವ ಕೋಷ್ಟಕ-೧ರಲ್ಲಿ ಕರ್ನಾಟಕದ ಜನಸಂಖ್ಯೆಯ ಬೆಳವಣಿಗೆ ಕುರಿತ ಮಾಹಿತಿಯನ್ನು ವಿವಿಧ ರೀತಿಯಲ್ಲಿ ಲೆಕ್ಕಹಾಕಿ ನೀಡಲಾಗಿದೆ. ನಮ್ಮ ರಾಜ್ಯದಲ್ಲಿನ ಜನಸಂಖ್ಯೆಯ ಬೆಳವಣಿಗೆಯ ಪ್ರಾದೇಶಿಕ ನೆಲೆಗಳನ್ನು ಇಲ್ಲಿ ಅನಾವರಣ ಮಾಡಲಾಗಿದೆ. ಎರಡು ಕಾಲಘಟ್ಟಗಳಿಗೆ, ಅಂದರೆ ೧೯೮೧-೧೯೯೧ ಮತ್ತು ೧೯೯೧-೨೦೦೧ ದಶಕಗಳಿಗೆ ಇಲ್ಲಿ ಜನಸಂಖ್ಯೆಯ ಬೆಳವಣಿಗೆ ಪ್ರಮಾಣವನ್ನು ತೋರಿಸಲಾಗಿದೆ. ಈ ಮಾಹಿತಿಯ ಮೂಲಕ ಜನರು ನಮ್ಮಲ್ಲಿ ಜನಸಂಖ್ಯೆಯ ನಿಯಂತ್ರಣಕ್ಕೆ ಎರಡು ಮಕ್ಕಳ ನೀತಿಯನ್ನು ಅನುಸರಿಸಬೇಕೇ ಅಥವಾ ಬೇಡವೇ ಎಂಬುದನ್ನು ತಾವೇ ತೀರ್ಮಾನಿಸಬಹುದಾಗಿದೆ.

ಅಭಿವೃದ್ಧಿಗೆ ಸಂಬಂಧಿಸಿದ ಸೂಚಿಗಳನ್ನು ಒಟ್ಟು ಮೊತ್ತದಲ್ಲಿ ಪರಿಭಾವಿಸಿಕೊಳ್ಳುವುದರಿಂದ ಅನೇಕ ಸಮಸ್ಯೆಗಳು ಉಂಟಾಗುತ್ತವೆ. ಮಾನ್ಯ ಮುಖ್ಯಮಂತ್ರಿ ಅವರು ಹೀಗೆ ಅಖಂಡವಾದ ನೆಲೆಯಲ್ಲಿ ಮಾತನಾಡುತ್ತಿದ್ದಾರೆ. ಅದರಿಂದ ನಾವು ದಾರಿ ತಪ್ಪುವ ಸಾಧ್ಯತೆಯಿದೆ. ಈ ಸಂಗತಿಗೆ ಪ್ರಸ್ತುತ ಕೋಷ್ಟಕವು ಮಾರ್ಗಸೂಚಿಯಾಗಿದೆ. ಇಡೀ ಕರ್ನಾಟಕವನ್ನು ಒಂದು ಘಟಕವಾಗಿ ತೆಗೆದುಕೊಂಡರೆ (೨೭ ಜಿಲ್ಲೆಗಳೂ) ೧೯೮೧-೧೯೯೧ರ ದಶಕದಲ್ಲಿ ಜನಸಂಖ್ಯೆಯ ಬೆಳವಣಿಗೆ ಪ್ರಮಾಣ ಶೇ. ೨೧.೧೧. ಆದರೆ ಅದೇ ಅವಧಿಯಲ್ಲಿ ಹೈ.ಕ.ಪ್ರ.ದಲ್ಲಿ ಅದರ ಬೆಳವಣಿಗೆ ಪ್ರಮಾಣ ಶೇ. ೨೩.೯೩. ಹೈ.ಕ.ಪ್ರ.ವನ್ನು ಬಿಟ್ಟು ಉಳಿದ ಕರ್ನಾಟಕಕ್ಕೆ (೨೨ ಜಿಲ್ಲೆಗಳಿಗೆ) ಇದನ್ನು ಲೆಕ್ಕ ಹಾಕಿದರೆ ಅದರ ಬೆಳವಣಿಗೆ ಪ್ರಮಾಣ ಶೇ. ೨೦.೭೪ರಷ್ಟಾಗುತ್ತದೆ. ಕರ್ನಾಟಕ ಮತ್ತು ಹೈ.ಕ.ಪ್ರ.ಗಳ ಜನಸಂಖ್ಯಾ ಬೆಳವಣಿಗೆಯಲ್ಲಿ ತುಂಬ ವ್ಯತ್ಯಾಸ ಇಲ್ಲಿ ಕಂಡುಬರುವುದಿಲ್ಲ. ಹೈ.ಕ.ಪ್ರ.ದ ಜನಸಂಖ್ಯಾ ಬೆಳವಣಿಗೆಯ ಪ್ರಮಾಣವು ರಾಜ್ಯಮಟ್ಟದ ಬೆಳವಣಿಗೆಯ ಪ್ರಮಾಣದ ಶೇ. ೧೧೩.೩೬ರಷ್ಟಿದೆ.

ಈಗ ೧೯೯೧-೨೦೦೧ರ ದಶಕದಲ್ಲಿ ಇದು ಹೇಗೆ ಬದಲಾಗಿದೆ ಎಂಬುದನ್ನು ನೋಡಿದರೆ ನಮಗೆ ಸಮಸ್ಯೆಯ ನೆಲೆ ಅರ್ಥವಾಗುತ್ತದೆ. ಇಡೀ ಕರ್ನಾಟಕವನ್ನು ಒಂದು ಘಟಕವಾಗಿ ತೆಗೆದುಕೊಂಡರೆ ೧೯೯೧-೨೦೦೧ರ ದಶಕದಲ್ಲಿ ಜನಸಂಖ್ಯೆಯ ಬೆಳವಣಿಗೆ ಪ್ರಮಾಣ ಶೇ. ೧೭.೫೦ ರಷ್ಟಿತ್ತು. ಆದರೆ ಅದೇ ಅವಧಿಯಲ್ಲಿ ಹೈ.ಕ.ಪ್ರ.ದಲ್ಲಿ ಅದರ ಬೆಳವಣಿಗೆ ಪ್ರಮಾಣ ಶೇ. ೨೨.೦೬. ಹೈ.ಕ.ಪ್ರ.ವನ್ನು ಬಿಟ್ಟು ಉಳಿದ ಕರ್ನಾಟಕಕ್ಕೆ (೨೨ ಜಿಲ್ಲೆಗಳು) ಇದನ್ನು ಲೆಕ್ಕಹಾಕಿದರೆ ಅದರ ಬೆಳವಣಿಗೆ ಪ್ರಮಾಣ ಶೇ. ೧೬.೫೫ ರಷ್ಟಾಗುತ್ತದೆ. ಕರ್ನಾಟಕ ಮತ್ತು ಹೈ.ಕ.ಪ್ರ.ಗಳ ಜನಸಂಖ್ಯಾ ಬೆಳವಣಿಗೆಯಲ್ಲಿ ತುಂಬ ವ್ಯತ್ಯಾಸ ಇಲ್ಲಿ ಉಂಟಾಗಿರುವುದನ್ನು ನೋಡಬಹುದು. ಹೈ.ಕ.ಪ್ರ.ದ ಜನಸಂಖ್ಯಾ ಬೆಳವಣಿಗೆ ಪ್ರಮಾಣವು ರಾಜ್ಯಮಟ್ಟದ ಜನಸಂಖ್ಯಾ ಬೆಳವಣಿಗೆ ಪ್ರಮಾಣದ ಶೇ. ೧೨೬.೦೬ ರಷ್ಟಿದೆ. ಅಂದರೆ ೧೯೮೧-೧೯೯೧ರ ದಶಕದಲ್ಲಿ ಕಂಡುಬಂದ (ಶೇ. ೧೧೩.೩೬) ವ್ಯತ್ಯಾಸಕ್ಕಿಂತ ೧೯೯೧-೨೦೦೧ರ ಅವಧಿಯಲ್ಲಿ ವ್ಯತ್ಯಾಸ (ಶೇ. ೧೨೬.೦೬) ಅಧಿಕವಾಗಿದೆ. ಇದಕ್ಕೆ ಬಹುಮುಖ್ಯ ಕಾರಣವಾಗಿರುವ ಸಂಗತಿಯೆಂದರೆ ೧೯೮೧-೧೯೯೧ರಿಂದ ೧೯೯೧-೨೦೦೧ರ ದಶಕಗಳ ನಡುವೆ ಜನಸಂಖ್ಯೆಯ ಬೆಳವಣಿಗೆ ಪ್ರಮಾಣದಲ್ಲಿ ರಾಜ್ಯಮಟ್ಟದಲ್ಲಿ – ಶೇ. ೧೭.೧೦ರಷ್ಟು ಕಡಿಮೆಯಾಗಿದ್ದರೆ ಹೈ.ಕ.ಪ್ರ.ದಲ್ಲಿ ಅದು ಕೇವಲ – ಶೇ. ೩.೭೫ರಷ್ಟು ಮಾತ್ರ ಕಡಿಮೆಯಾಗಿದೆ. ಹಾಗೆ ನೋಡಿದರೆ ಹೈ.ಕ.ಪ್ರ.ವನ್ನು ಬಿಟ್ಟು ಉಳಿದ ಕರ್ನಾಟಕದ ೨೨ ಜಿಲ್ಲೆಗಳ ಜನಸಂಖ್ಯಾ ಬೆಳವಣಿಗೆಯನ್ನು ಮಾತ್ರ ಪರಿಗಣಿಸಿದರೆ ೧೯೮೧- ೧೯೯೧ರಿಂದ ೧೯೯೧-೨೦೦೧ರ ದಶಕಗಳ ನಡುವೆ ಜನಸಂಖ್ಯಾ ಬೆಳವಣಿಗೆ ಪ್ರಮಾಣದಲ್ಲಿ – ಶೇ. ೨೦.೨೦ರಷ್ಟು ಕಡಿಮೆಯಾಗಿದೆ. ಈ ಎಲ್ಲ ಚರ್ಚೆಯ ಮೂಲಕ ನಾವು ಕಂಡುಕೊಳ್ಳಬಹುದಾದ ಸಂಗತಿಯೆಂದರೆ :

೧) ಕರ್ನಾಟಕದಲ್ಲಿ ಜನಸಂಖ್ಯೆಯ ಬೆಳವಣಿಗೆ ಪ್ರಮಾಣವು ಕಡಿಮೆಯಾಗುತ್ತಿದೆ.
೨) ಅದು ರಾಜ್ಯಮಟ್ಟದಲ್ಲಿ ಮತ್ತು ವಿವಿಧ ಪ್ರದೇಶಗಳ ಮಟ್ಟದಲ್ಲೂ ಕಡಿಮೆಯಾಗುತ್ತಿದೆ.
೩) ಆದರೆ ಕಡಿಮೆಯಾಗುತ್ತಿರುವ ಪ್ರಮಾಣವು ರಾಜ್ಯಮಟ್ಟದಲ್ಲಿ ಅಧಿಕವಾಗಿದ್ದರೆ (– ಶೇ. ೧೭.೧೦) ಹೈ.ಕ.ಪ್ರ.ದಲ್ಲಿ ಅದು ಮಂದಗತಿಯಲ್ಲಿ (– ಶೇ. ೩.೭೫) ಕಡಿಮೆಯಾಗುತ್ತಿದೆ.
೪) ಹೈ.ಕ.ಪ್ರ.ದ ಐದು ಜಿಲ್ಲೆಗಳನ್ನು ಬಿಟ್ಟು ಉಳಿದ ಕರ್ನಾಟಕದ ೨೨ ಜಿಲ್ಲೆಗಳನ್ನು ಮಾತ್ರ ಪರಿಗಣಿಸಿ ಅಲ್ಲಿನ ಜನಸಂಖ್ಯೆಯ ಬೆಳವಣಿಗೆಯನ್ನು ಗಣನೆ

ಮಾಡಿದರೆ ಅಲ್ಲಿ ಜನಸಂಖ್ಯೆಯ ಬೆಳವಣಿಗೆ ಪ್ರಮಾಣವು ತೀವ್ರಗತಿಯಲ್ಲಿ ಕಡಿಮೆಯಾಗುತ್ತಿರುವುದು ತಿಳಿಯುತ್ತದೆ. ಅದು ಅಲ್ಲಿ ದೃಢತೆಯನ್ನು ಸಾಧಿಸಿಕೊಳ್ಳುವ ಕಡೆಗೆ ಸಾಗುತ್ತಿದೆ.

೫) ಜನಸಂಖ್ಯೆಯ ನಿಯಂತ್ರಣಕ್ಕಿರುವ ಪರಿಣಾಮಕಾರಿ ಮಾರ್ಗವೆಂದರೆ ಸಾಕ್ಷರತೆ. ಅದರಲ್ಲೂ ಮಹಿಳೆಯರ ಸಾಕ್ಷರತೆಯನ್ನು ಅಧಿಕಗೊಳಿಸುವುದರ ಮೂಲಕ ಜನಸಂಖ್ಯೆಯ ತೀವ್ರ ಬೆಳವಣಿಗೆಯನ್ನು ತಡೆಗಟ್ಟಬಹುದು.

ಈಗ ಕರ್ನಾಟಕದಲ್ಲಿ ಜನಸಂಖ್ಯೆಯ ಸಮಸ್ಯೆ ಯಾವ ಸ್ವರೂಪದಲ್ಲಿದೆ ಎಂಬುದು ಮೇಲಿನ ಅಂಶಗಳಿಂದ ತಿಳಿಯುತ್ತದೆ. ಜನಸಂಖ್ಯೆಯ ದೃಷ್ಟಿಯಿಂದ ಇಡೀ ಕರ್ನಾಟಕವನ್ನು ಗಮನದಲ್ಲಿಟ್ಟುಕೊಂಡು ಮಾತನಾಡುವುದು ಸರಿಯಲ್ಲ. ನಮ್ಮ ರಾಜ್ಯದಲ್ಲಿ ಜನಸಂಖ್ಯೆಯ ಸಮಸ್ಯೆಯಿದ್ದರೆ ಅದು ಹೈ.ಕ.ಪ್ರ.ದಲ್ಲಿ ಮಡುಗಟ್ಟಿಕೊಂಡಿದೆ. ಇದನ್ನು ತಿಳಿದುಕೊಳ್ಳದೆ ಚೀನಾ ಮಾದರಿಯನ್ನು ನಮ್ಮಲ್ಲಿ ಅನುಸರಿಸುತ್ತೇವೆಂದು ಮಾತನಾಡುವುದು ತಪ್ಪಾಗುತ್ತದೆ. ಏಕೆಂದರೆ ನಮ್ಮಲ್ಲಿ ಜನಸಂಖ್ಯೆಯ ಬೆಳವಣಿಗೆ ಪ್ರಮಾಣವು ಒಟ್ಟಾರೆಯಾಗಿ ಕಡಿಮೆಯಾಗುತ್ತಿದೆ. ಅದು ಅಧಿಕವಾಗಿದ್ದರೆ ಅದು ಹಿಂದುಳಿದ ಜಿಲ್ಲೆಗಳಲ್ಲಿದೆ. ಅದು ಕರ್ನಾಟಕದ ಹೈ.ಕ.ಪ್ರ.ದ ಹಿಂದುಳಿದಿರುವಿಕೆಗೆ ಸಂಬಂಧಿಸಿದ ಸಂಗತಿಯಾಗಿದೆ. ಹಿಂದುಳಿದಿರುವಿಕೆಯನ್ನು ಹೇಗೆ ಎದುರಿಸಬೇಕು ಎಂಬುದನ್ನು ಚರ್ಚಿಸುವುದನ್ನು ಬಿಟ್ಟು ಎರಡು ಮಕ್ಕಳ ಸಂಗತಿ ಬಗ್ಗೆ ಮಾತನಾಡುವುದು ಸರಿಗಾಣುವುದಿಲ್ಲ. ಹಿಂದುಳಿದಿರುವಿಕೆಯನ್ನು ಕೇವಲ ಬಂಡವಾಳದ ನೆಲೆಯಲ್ಲಿ ನೋಡಬಾರದು. ಇಲ್ಲಿ ಸಾಕ್ಷರತೆ, ಅದರಲ್ಲೂ ಮಹಿಳೆಯರ ಸಾಕ್ಷರತೆಯ ಪಾತ್ರ ಬಹಳ ನಿರ್ಣಾಯಕವಾದುದಾಗಿದೆ. ಇಡೀ ಕರ್ನಾಟಕದಲ್ಲಿ ಮಹಿಳೆಯರ ಸಾಕ್ಷರತಾ ಪ್ರಮಾಣ ಶೇ. ೫೬.೮೭ರಷ್ಟಿದೆ (೨೦೦೧). ಇದು ತುಂಬ ಕಡಿಮೆಯಾಯಿತು. ಆದರೆ ಹೈ.ಕ.ಪ್ರ.ದಲ್ಲಿ ಮಹಿಳೆಯರ ಸಾಕ್ಷರತಾ ಪ್ರಮಾಣ ೨೦೦೧ರಲ್ಲಿ ಕೇವಲ ಶೇ. ೪೧.೦೭ರಷ್ಟಿದೆ. ಇನ್ನು ಗ್ರಾಮೀಣ ಪ್ರದೇಶದ ಸಾಕ್ಷರತೆಯನ್ನು ತೆಗೆದುಕೊಂಡರೆ ನಮಗೆ ಆತಂಕಕಾರಿ ಸಂಗತಿ ಎದುರಾಗುತ್ತದೆ. ಬೀದರ್ ಜಿಲ್ಲೆಯೊಂದನ್ನು ಬಿಟ್ಟರೆ ಉಳಿದ ನಾಲ್ಕು ಜಿಲ್ಲೆಗಳಲ್ಲಿ ಗ್ರಾಮೀಣ ಮಹಿಳೆಯರ ಸಾಕ್ಷರತಾ ಪ್ರಮಾಣವು ಶೇ. ೩೫ಕ್ಕಿಂತ ಕಡಿಮೆಯಿದೆ. ರಾಜ್ಯಮಟ್ಟದಲ್ಲಿ ಗ್ರಾಮೀಣ ಮಹಿಳೆಯರ ಸಾಕ್ಷರತಾ ಪ್ರಮಾಣ ಶೇ. ೪೮ರಷ್ಟಿದ್ದರೆ ಹೈ.ಕ.ಪ್ರ.ದಲ್ಲಿ ಅದರ ಪ್ರಮಾಣ ಕೇವಲ ಶೇ. ೩೩.೯೮. ಈ ಸಂಗತಿಯ ಬಗ್ಗೆ ಮಾತನಾಡದೆ ಕೇವಲ ಜನಸಂಖ್ಯೆಯ ಬೆಳವಣಿಗೆಯ ಬಗ್ಗೆ ಮಾತನಾಡುವುದು ತಿಳುವಳಿಕೆ ಇಲ್ಲದವರ ಮಾತಾಗಿಬಿಡುತ್ತದೆ. ಇರುವ ಸಮಸ್ಯೆಯನ್ನು ಮರೆಮಾಚಿ ಇಲ್ಲದ ಸಮಸ್ಯೆಯನ್ನು ಮುಂದು ಮಾಡುವುದು ಜನರಲ್ಲಿ ಅನುಮಾನಕ್ಕೆ ಎಡೆಮಾಡಿ ಕೊಡುತ್ತದೆ. ಇಲ್ಲದ ಸಮಸ್ಯೆಯನ್ನು ಬಡಿದೆಬ್ಬಿಸುವುದರ ಹಿಂದಿನ ಉದ್ದೇಶದ ಬಗ್ಗೆ ಪ್ರಶ್ನೆ ಮಾಡಬೇಕಾಗುತ್ತದೆ. ಕರ್ನಾಟಕ ಅಭಿವೃದ್ಧಿಯ ಬಗ್ಗೆ ಅಧಿಕೃತವಾಗಿ ಮಾತನಾಡಬಲ್ಲ ಸಮಾಜವಿಜ್ಞಾನಿಗಳಾಗಲಿ ಅಥವಾ ಜನಸಂಖ್ಯಾಶಾಸ್ತ್ರಜ್ಞರಾಗಲಿ ಇಲ್ಲಿನ ಜನಸಂಖ್ಯೆಯ ಬೆಳವಣಿಗೆ ಆತಂಕಕಾರಿಯೆಂದು ಅಭಿಪ್ರಾಯಪಟ್ಟಿಲ್ಲ. ಅಂತಹ ಅಧ್ಯಯನಗಳು ಯಾವುವೂ ಇಲ್ಲ. ನಮ್ಮ ಮುಖ್ಯಮಂತ್ರಿ ಅವರು ಜನಸಂಖ್ಯಾಶಾಸ್ತ್ರಜ್ಞರಲ್ಲವೆಂಬುದು ಎಲ್ಲರಿಗೂ ತಿಳಿದಿದೆ. ಆದ್ದರಿಂದ ಸುಮ್ಮನೆ ಜನಸಂಖ್ಯೆಯ ಬಗ್ಗೆ ಆತಂಕಪಡುವುದಕ್ಕೆ ಪ್ರತಿಯಾಗಿ ಹೈ.ಕ.ಪ್ರ.ದಲ್ಲಿನ ಮಹಿಳೆಯರ, ಅದರಲ್ಲೂ ಗ್ರಾಮೀಣ ಪ್ರದೇಶದ ಮಹಿಳೆಯರ, ಅದರಲ್ಲೂ ಈ ಪ್ರದೇಶದ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಮಹಿಳೆಯರ ಸಾಕ್ಷರತೆ ಬಗ್ಗೆ ಮಾನ್ಯ ಮುಖ್ಯಮಂತ್ರಿಗಳು ಗಮನಹರಿಸುವುದು ಒಳ್ಳೆಯದು. ಅದು ಬಿಟ್ಟು ಎರಡು ಮಕ್ಕಳ ನೀತಿಯನ್ನು ಅಳವಡಿಸಿಕೊಂಡು ಜನಸಂಖ್ಯೆಯ ಬೆಳವಣಿಗೆಯನ್ನು ತಡೆಯುತ್ತೇವೆನ್ನುವುದು 'ಚಕ್ಕಡಿಯನ್ನು ಎತ್ತುಗಳ ಹಿಂದೆ ಇಡುವುದಕ್ಕೆ ಪ್ರತಿಯಾಗಿ ಅದರ ಮುಂದಿಟ್ಟಂತಾಗುತ್ತದೆ'. ಇದನ್ನು ಇನ್ನಷ್ಟು ವಿವರಿಸುವ ಅಗತ್ಯವಿಲ್ಲ. ಇದು ಸ್ವಯಂವೇದ್ಯವಾದ ಸಂಗತಿಯಾಗಿದೆ.

ಲಿಂಗ ಸಮಾನತೆಯೆಂಬುದು ಅಭಿವೃದ್ಧಿಯ ಒರೆಗಲ್ಲಾಗಬೇಕು. ನಮ್ಮ ರಾಜ್ಯದ ಮಹಿಳೆಯರೆಲ್ಲರೂ ಅಕ್ಷರಸ್ಥರಾಗುವಂತೆ ಮಾಡುವ ಬಗ್ಗೆ ಮಾನ್ಯ ಯಡಿಯೂರಪ್ಪ ಚಿಂತಿಸಿದರೆ ಜನಸಂಖ್ಯಾ ಸಮಸ್ಯೆ ತನ್ನಷ್ಟಕ್ಕೆ ತಾನು ಪರಿಹಾರವಾಗಿಬಿಡುತ್ತದೆ. ಜನಸಂಖ್ಯೆಯ ಭೂತದ ಬಗ್ಗೆ ಮುಖ್ಯಮಂತ್ರಿಗಳು ಆತಂಕಪಡಬೇಕಾಗಿಲ್ಲ. ಅವರ ಜನಸಂಖ್ಯೆಯ ಬಗೆಗಿನ ಎರಡು ಮಕ್ಕಳ ಪರಿಹಾರವು 'ರೋಗಕ್ಕಿಂತ ಔಷಧಿಯೇ ಅಪಾಯಕಾರಿ' ಎಂಬಂತಾಗುವ ಸಾಧ್ಯತೆಯಿದೆ. ಇದರ ಬಗ್ಗೆ ನಾವು ಎಚ್ಚರದಿಂದಿರಬೇಕು.

**ಡಾ|| ಟಿ. ಆರ್. ಚಂದ್ರಶೇಖರ**
ಕನ್ನಡ ವಿಶ್ವವಿದ್ಯಾಲಯ. ವಿದ್ಯಾರಣ್ಯ - ೫೮೩ ೨೭೬, ಹಂಪಿ

## ಸಾದರ ಸ್ವೀಕಾರ

**ಎತ್ತಣ ಮಾಮರ ಎತ್ತಣ ಕೋಗಿಲೆ** (ಇಂಗ್ಲೆಂಡ್ ಪ್ರವಾಸ ಕಥನ)
ಸಿದ್ದು ಯಾಪಲ ಪರವಿ
ಪುಟ : ೧೭೬ ಬೆಲೆ : ರೂ. ೧೨೦
ಸಾಂಗತ್ಯ ಪ್ರಕಾಶನ, ಕಳಸಾಪುರ ರಸ್ತೆ, ಗದಗ - ೫೮೨ ೧೦೩

**ಬೆಳಕಿನೊಡನೆ ಪಯಣ** (ಕವನ ಸಂಕಲನ)
ನಿರ್ಮಲಾ ಈ. ಶೆಟ್ಟರ
ಪುಟ : ೭೨ ಬೆಲೆ : ರೂ. ೫೦
ಮನು ಪ್ರಕಾಶನ, ಸೂಗೂರೇಶ್ವರ ನಿಲಯ, ದೇಸಾಯಿ ಬಣ, ಲಕ್ಷ್ಮೇಶ್ವರ, ಶಿರಹಟ್ಟಿ ತಾಲೂಕು, ಗದಗ ಜಿಲ್ಲೆ

**ಅರುಣೋದಯ ಸಂಭ್ರಮ** (ಕವನ ಸಂಕಲನ)
ಎಂ. ಎಂ. ಹಿರೇಮಠ
ಪುಟ : ೮೮ ಬೆಲೆ : ರೂ. ೫೦
ಸಂಗಮೇಶ್ವರ ಪ್ರಕಾಶನ, ೧೮೨, ಋಷ್ಯಶೃಂಗ ಬೀದಿ, ಕೋಣನಕುಂಟೆ, ಬೆಂಗಳೂರು - ೫೬೦ ೦೬೨

**ಎಲಿಯಟ್ಟನ ನಾಲ್ಕು ಪ್ರಬಂಧಗಳು** ಅನು : ಸಿ. ಪಿ. ಕೆ.
ಪುಟ : ೧೦೪ ಬೆಲೆ : ರೂ. ೪೦
ನಾಗಾರ್ಜುನ ಎಂಟರ್‌ಪ್ರೈಸಸ್, ಸಂ. ೫೮, ಅಕ್ಕಮಹಾದೇವಿ ರಸ್ತೆ, ದಾವಣಗೆರೆ

**ಎಪ್ಪತ್ತರ ಎತ್ತರ** (ಸುನೀತ ಕವನಗಳು) ಸಿ. ಪಿ. ಕೆ.
ಪುಟ : ೭೬ ಬೆಲೆ : ರೂ. ೫೦
ಚಿತ್ರಭಾನು ಪ್ರಕಾಶನ, ೨೨೬೫/೧೯ 'ಭಾರತಿ' ೬ನೇ ಕ್ರಾಸ್, ೪ನೇ ಮೇನ್, ವಿನಾಯಕನಗರ, ಮೈಸೂರು - ೫೭೦ ೦೧೨

**ಅದಕ್ಕೇ ಇರಬೇಕು...** (ಕವನ ಸಂಕಲನ) ಚಂ. ಸು. ಪಾಟೀಲ
ಪುಟ : ೮೦ ಬೆಲೆ : ರೂ. ೫೦
ಅವಿರತ ಪುಸ್ತಕ, ನಂ. ೭೦, ೯ನೇ ಕ್ರಾಸ್, ೧ನೇ ಮುಖ್ಯರಸ್ತೆ, ಬಿಡಿಎ ಲೇಔಟ್, ಆವಲಹಳ್ಳಿ, ಬೆಂಗಳೂರು - ೫೬೦ ೦೮೫

**ಪ್ರೇಮ ಲಹರಿ** (ಹನಿಗವನ ಸಂಕಲನ)
ಕೆ. ಎನ್. ಪುರುಷೋತ್ತಮ
ಪುಟ : ೬೦ ಬೆಲೆ : ರೂ. ೨೫

**ಕಾವ್ಯ ಡಿಂಡಿಮ** (ಹನಿಗವನ, ಚುಟುಕುಗಳು ಇತ್ಯಾದಿ)
ಕೊಡಗಹಳ್ಳಿ ಪುರುಷೋತ್ತಮ
ಪುಟ : ೧೨೦ ಬೆಲೆ : ರೂ. ೧೦೦
ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ಕೆ. ಎನ್. ಪುರುಷೋತ್ತಮ**, ಶ್ರೀರಾಮ ನಿಲಯ, ಸಂತೇಮಾಳ ಸರ್ಕಲ್, ಅರಕೆರೆ, ಶ್ರೀರಂಗಪಟ್ಟಣ ತಾಲ್ಲೂಕು, ಮಂಡ್ಯ ಜಿ.

**ಒಂದು ಮುಷ್ಟಿ ನಕ್ಷತ್ರ** (ಕಥಾ ಸಂಕಲನ)
ಕೋಡಿಬೆಟ್ಟು ರಾಜಲಕ್ಷ್ಮಿ
ಪುಟ : ೧೦೦ ಬೆಲೆ : ರೂ. ೫೦

**ಬರುವ ನಾಳೆಗಳಿಗೆ ರಾತ್ರಿಗಳೇ ಇರುವುದಿಲ್ಲ** (ಕವನ ಸಂಕಲನ)
ಸಿದ್ದು ದೇವರಮನಿ
ಪುಟ : ೮೦ ಬೆಲೆ : ರೂ. ೫೦

**ಜಾಲ ತರಂಗಿಣಿ** (ಅಂಕಣ ಬರಹ) ಮೈ. ಶ್ರೀ. ನಟರಾಜ
ಪುಟ : ೩೩೬ ಬೆಲೆ : ರೂ. ೧೭೫
ಮೇಲಿನ ಮೂರು ಪುಸ್ತಕಗಳ ಪ್ರಕಾಶಕರು
**ಅಭಿನವ**, ೧೭/೧೮-೨, ಮೊದಲನೇ ಮುಖ್ಯರಸ್ತೆ, ಮಾರೇನಹಳ್ಳಿ, ವಿಜಯನಗರ, ಬೆಂಗಳೂರು - ೫೬೦ ೦೪೦

**ಕ್ವೀನ್ ವಿಕ್ಟೋರಿಯಾ** (ಜೀವನ ಚರಿತ್ರಾವಳಿ)
ಆಗುಂಬೆ ಎಸ್. ನಟರಾಜ್
ಪುಟ : ೨೦೮ ಬೆಲೆ : ರೂ. ೧೦೦

**ರಾಷ್ಟ್ರೀಯತೆಯಿಂದ ಮತಾಂಧತೆಗೆ ಒಂದು ಪಯಣ**
ಆಗುಂಬೆ ಎಸ್. ನಟರಾಜ್
ಪುಟ : ೧೪೪ ಬೆಲೆ : ರೂ. ೧೦೦

**ಫ್ಲಾರೆನ್ಸ್ ನೈಟಿಂಗೇಲ್** (ಜೀವನ ಚರಿತ್ರಾವಳಿ)
ಆಗುಂಬೆ ಎಸ್. ನಟರಾಜ್
ಪುಟ : ೨೩೨ ಬೆಲೆ : ರೂ. ೧೦೦

**ಸರದಾರ್ ವಲ್ಲಭಭಾಯಿ ಪಟೇಲ್** (ಜೀವನ ಚರಿತ್ರಾವಳಿ)
ಆಗುಂಬೆ ಎಸ್. ನಟರಾಜ್
ಪುಟ : ೨೨೪ ಬೆಲೆ : ರೂ. ೧೦೦

**ಜೀವನ ಚರಿತ್ರಾವಳಿ** (ಭಾಗ - ೨) ಆಗುಂಬೆ ಎಸ್. ನಟರಾಜ್
ಪುಟ : ೧೦೨ ಬೆಲೆ : ರೂ. ೪೦
ಮೇಲಿನ ಐದು ಪುಸ್ತಕಗಳ ಪ್ರಕಾಶಕರು
**ಹಂಸ ಪ್ರಕಾಶನ**, ನಂ. ೯೪೭, ಮೂರನೇ ಮುಖ್ಯರಸ್ತೆ, ವಿಜಯನಗರ, ಬೆಂಗಳೂರು - ೫೬೦ ೦೪೦

**ಬೆಂಗಳೂರು ವಕೀಲರ ಸಾಹಿತ್ಯ ಕೂಟ (ರಿ) ಇತ್ತೀಚೆಗೆ ಏರ್ಪಡಿಸಿದ್ದ ಕನ್ನಡ ರಾಜ್ಯೋತ್ಸವ ಸಮಾರಂಭದ ಸಂದರ್ಭದಲ್ಲಿ ನ್ಯಾಯಮೂರ್ತಿ ಶ್ರೀ ಡಾ. ವಿ. [illegible] ಭಾಷಣ ಮಾಡಿದ್ದರು. ಅವರಿಂದ ಆಯ್ದ ಕೆಲ ಭಾಗಗಳು ಇಲ್ಲಿವೆ.**

# ನ್ಯಾಯಾಲಯದಲ್ಲಿ ಕನ್ನಡ

ನಾವು, ಈಗ ಸಹಿತ, ಎಷ್ಟರಮಟ್ಟಿಗೆ ಕನ್ನಡದವರಾಗಿದ್ದೇವೆ ಎಂದರೆ ಖಚಿತವಾಗಿ, ಧೈರ್ಯದಿಂದ, ಧರವಸೆ ಇಟ್ಟು ಹೇಳುವ ಪರಿಸ್ಥಿತಿ ಇಲ್ಲ. ಕನ್ನಡ ಭಾಷೆಗೆ ಶಾಸ್ತ್ರೀಯ ಭಾಷೆಯ ಸ್ಥಾನಮಾನ ನೀಡಲು ಮೀನಾಮೇಷ, ನೆರೆರಾಜ್ಯಗಳವರ ಆಕ್ಷೇಪಣೆ, ಇತ್ಯಾದಿ ಇತ್ಯಾದಿ... ಕನ್ನಡ ಭಾಷೆಗೆ ಶಾಸ್ತ್ರೀಯ ಭಾಷೆಯ ಸ್ಥಾನಮಾನ ನೀಡಿದರೆ ನೆರೆಹೊರೆಯವರಿಗೆ ಏನು ನಷ್ಟವೋ ಕುಂದು-ಕೊರತೆ ಯಾಗುತ್ತದೆಯೋ ನನಗೆ ಈವರೆಗೆ ಅರ್ಥವಾಗಿಲ್ಲ!

ಕನ್ನಡ ರಾಜ್ಯೋತ್ಸವ ಸಮಾರಂಭಗಳು ನಡೆಯದಿದ್ದರೆ ನಮ್ಮ ರಾಜ್ಯದ ಜನತೆಗೆ ಕನ್ನಡ ಭಾಷೆ ಇದೆ ಎನ್ನುವ ವಾಸ್ತವಿಕತೆ ಮರೆತುಹೋಗುತ್ತದೇನೋ ಎನ್ನುವ ಆತಂಕ, ಭಯ! ನಾನು ಒಂದು ವಿಷಯ ಗಮನಿಸಿದ್ದೇನೆ : ಇತರೆ ಆಡುಭಾಷೆಯ ಜನಗಳು ಕರ್ನಾಟಕ ರಾಜ್ಯದಲ್ಲಿ ನೆಲೆಸಿ ವಾಸವಾಗಿರುವವರು ತಮ್ಮ ಭಾಷೆಯಲ್ಲಿ ತಮ್ಮತಮ್ಮಲ್ಲಿಯೇ ಅಥವಾ ಸಾರ್ವಜನಿಕವಾಗಿ ವ್ಯವಹರಿಸುವಾಗ, ಮಾತನಾಡಲು ಏನೂ ಅಡಚಣೆ, ಅಳುಕು, ಮುಜುಗರ ಅಥವಾ ತಪ್ಪು ಭಾವನೆ ಖಂಡಿತ ವ್ಯಕ್ತಪಡಿಸುವುದಿಲ್ಲ. ಆದರೆ ಕನ್ನಡ ಭಾಷೆಯ ಜನರು ಹೊರರಾಜ್ಯಗಳಲ್ಲಿ ಇಷ್ಟೇ ಧೈರ್ಯ, ಸ್ಥೈರ್ಯಗಳಿಂದ ಸಾರ್ವಜನಿಕವಾಗಿರಲಿ ತಮ್ಮ ತಮ್ಮಲ್ಲಿಯೇ ಮಾತನಾಡಲು ಸಹ ಹಿಂಜರಿಯುತ್ತಾರೆ. ಕೆಲವು ರಾಜ್ಯಗಳಲ್ಲಿ ಭಯವೂ ಪಡುತ್ತಾರೆ ಮತ್ತು ಕೆಲವು ರಾಜ್ಯಗಳಲ್ಲಿ ಮಾತನಾಡಿದವರ ಕಥೆ ನೆಟ್ಟಗಾಗಲಿಕ್ಕಿಲ್ಲ. ಈ ರೀತಿಯೆಲ್ಲಾ ಪರಿಸ್ಥಿತಿಯಿದೆ.

ಕನ್ನಡ ಭಾಷೆಯ ಪರಿಸ್ಥಿತಿ ಹೊರರಾಜ್ಯಗಳಲ್ಲಿ ಬಿಡಿ, ನಮ್ಮ ರಾಜ್ಯದಲ್ಲಿಯೂ ಸಹಿತ ಆರೋಗ್ಯಕರವಾಗಿಲ್ಲ. ಚಿಕೂನ್ ಗುನ್ಯಾ, ಹಂದಿಜ್ವರ ಈ ರೀತಿಯ ಪಿಡುಗುಗಳು ಆಗಾಗ್ಗೆ ಕನ್ನಡ ಭಾಷೆಗೂ ಬಂದು ಎರಗುತ್ತಿರುತ್ತವೆ. ಆದರೆ ಕನ್ನಡ ಭಾಷೆಗೆ ಬಂದು ಎರಗುವ, ಕಾಡುವ ಈ ಪಿಡುಗುಗಳಿಗೆ ಅಮೆರಿಕಾ ದೇಶ, ಪಾಶ್ಚಿಮಾತ್ಯ ದೇಶಗಳಲ್ಲಿ ಔಷಧಗಳನ್ನು ತಯಾರು ಮಾಡುವ ಔಷಧ ತಯಾರಕರು, ಔಷಧವನ್ನು ತಯಾರು ಮಾಡುವುದಿಲ್ಲ. ಅದಕ್ಕೆ ಮದ್ದು, ಪರಿಹಾರ ನಾವೇ ಹುಡುಕಿಕೊಳ್ಳಬೇಕು.

ಈ ದಿಶೆಯಲ್ಲಿ ಸ್ವಲ್ಪ ಯೋಚನೆ, ಪ್ರಯತ್ನ ಅಗತ್ಯ. ಇದನ್ನು ರಾಜ್ಯದ ಹಿತರಕ್ಷಣೆ, ಜನರ ಹಿತರಕ್ಷಣೆ, ಜನರಿಗೆ ಬೇಕಾದ ಭಾಷೆಯ ಹಿತರಕ್ಷಣೆ, ಎಲ್ಲದರ ಜವಾಬ್ದಾರಿ ಹೊತ್ತಿರುವ ಸರ್ಕಾರಗಳು ಮಾಡಬೇಕು, ಸರ್ಕಾರದ ಹೊರಗಡೆ ಇರುವ ಸರ್ಕಾರೇತರ ಸಂಸ್ಥೆಗಳು ಮಾಡಬೇಕು ಹಾಗೂ ನಮ್ಮ ರಾಜ್ಯದ ಎಲ್ಲಾ ಜನರೂ ಕೈಗೂಡಿಸಬೇಕು.

ಭಾಷೆಯ ಬಗ್ಗೆ ಅಭಿಮಾನ ಬೇಕು, ದುರಭಿಮಾನ ಬೇಡ. ಕನ್ನಡ ಭಾಷೆಗೆ ಸಾವಿರ ವರ್ಷಕ್ಕೂ ಹೆಚ್ಚಿನ ಇತಿಹಾಸವಿದೆ. ಇಷ್ಟು ದೀರ್ಘಕಾಲದಲ್ಲಿ ಎಂಥ ಭಾಷೆಯೂ ಬೆಳೆಯಲು, ಉನ್ನತಸ್ಥಾನ ತಲುಪಲು, ಸಂಪದ್ಭರಿತವಾಗಲು, ಸಾಕಷ್ಟು ಅವಕಾಶಗಳು ಇವೆ. ನಮ್ಮ ಅದೃಷ್ಟಕ್ಕೆ ಕನ್ನಡ ಭಾಷೆಯು ಇಂಥ ಸ್ಥಾನಮಾನಗಳನ್ನು ಪಡೆದುಕೊಂಡಿದೆ. ಆದರೆ ಅದರ ಬಗ್ಗೆ ನಮಗೆ ತಿಳುವಳಿಕೆ ಇಲ್ಲ ಅಷ್ಟೆ. ಎಷ್ಟರಮಟ್ಟಿಗೆ ಅಜ್ಞಾನ, ಅಲ್ಪ ತಿಳುವಳಿಕೆ ಎಂದರೆ ನಮ್ಮ ಪುಟ್ಟ ಮಕ್ಕಳು ಕನ್ನಡ ಭಾಷೆಯಲ್ಲಿ ಮಾತನಾಡಿದರೆ ಅವಮಾನ, ಆಂಗ್ಲ ಭಾಷೆಯಲ್ಲಿ ಮಾತನಾಡಿದರೆ ಹಿರಿಮೆ ಎನ್ನುವಷ್ಟರ ಮಟ್ಟಿಗೆ ಆವರಿಸಿಕೊಂಡಿದೆ.

ನಾನು ನ್ಯಾಯಾಧೀಶನಾಗಿ ಕೆಲಸ ಮಾಡುತ್ತಿದ್ದಾಗ, ನ್ಯಾಯಾಲಯದಲ್ಲಿ ನಡೆದ ಒಂದು ಘಟನೆ ಈ ಸಂದರ್ಭದಲ್ಲಿ ಜ್ಞಾಪಕಕ್ಕೆ ಬರುತ್ತದೆ. ಆಗ ನಾನಿನ್ನೂ ಕಿರಿಯ ನ್ಯಾಯಾಧೀಶ, ಅಂದರೆ ವಿಭಾಗೀಯ ಪೀಠದಲ್ಲಿ ಇಬ್ಬರು ನ್ಯಾಯಾಧೀಶರು ಇರುವಾಗ ಮತ್ತೊಬ್ಬ ನ್ಯಾಯಾಧೀಶರಿಗಿಂತ ಸೇವೆ ಅವಧಿಯಲ್ಲಿ ನಾನು ಕಿರಿಯವನು. ಕನ್ನಡ ಭಾಷೆಯ ಬಗ್ಗೆ ತಪ್ಪು ತಿಳುವಳಿಕೆಗಳು ಇರುವ ಹಾಗೆ ನಮ್ಮ ನ್ಯಾಯಾಂಗ ವ್ಯವಸ್ಥೆ ಬಗ್ಗೆಯೂ ಅಲ್ಲಿ ಕೆಲಸ ಮಾಡುವ ನ್ಯಾಯಾಧೀಶರೆಲ್ಲರ ಸಾಕಷ್ಟು ತಪ್ಪು ತಿಳುವಳಿಕೆಗಳು ಇವೆ. ಮೂಢನಂಬಿಕೆಗಳನ್ನು ಸಹಿಗಟ್ಟುವಂತಹ ತಪ್ಪು ತಿಳುವಳಿಕೆಗಳೂ ಇವೆ!

ವಿಭಾಗೀಯ ಪೀಠದಲ್ಲಿರುವ ವಿಭಾಗೀಯ ಪೀಠದ ಕಾರ್ಯಕಲಾಪಗಳಲ್ಲಿ ಭಾಗವಹಿಸುತ್ತಿರುವ ಕಿರಿಯ ನ್ಯಾಯಾಧೀಶರು ಹಿರಿಯ ನ್ಯಾಯಾಧೀಶರ ಅಭಿಪ್ರಾಯ, ಅಭಿಲಾಷೆಗಳ ವಿರುದ್ಧ ತಮ್ಮ ಅನಿಸಿಕೆಗಳನ್ನು ತಿಳಿಸಬಾರದು. ಅವರ ಆಣತಿ ಇಲ್ಲದೆ ಮಾತನಾಡಲೂ ಕೂಡದು. ಅವರ ವಿರುದ್ಧ, ಹಿರಿಯ ನ್ಯಾಯಾಧೀಶರು ಅಭಿಪ್ರಾಯ ವ್ಯಕ್ತಪಡಿಸಿದ ನಂತರ ಅದಕ್ಕೆ ಚ್ಯುತಿ ಅಥವಾ ಭಿನ್ನವಾಗಿರುವಂತಹ ಅಭಿಪ್ರಾಯ ವ್ಯಕ್ತಪಡಿಸಲೇಬಾರದು ಇತ್ಯಾದಿ... ಇತ್ಯಾದಿ...

ಸಂವಿಧಾನ ಎಲ್ಲಾ ಉಚ್ಚ ನ್ಯಾಯಾಲಯದ ನ್ಯಾಯಾಧೀಶರುಗಳಿಗೂ ಒಂದೇ ರೀತಿಯ, ಸಮನಾದ, ಅಧಿಕಾರ, ಜವಾಬ್ದಾರಿಗಳನ್ನು ನೀಡಿದ್ದರೂ ಸಹಿತ, ಸಂವಿಧಾನದಲ್ಲಿ ಹಿರಿಯ ನ್ಯಾಯಾಧೀಶ, ಕಿರಿಯ ನ್ಯಾಯಾಧೀಶ ಎನ್ನುವ ವಿಂಗಡನೆ ಮಾಡಿಲ್ಲದಿದ್ದರೂ ಸಹಿತ ಈ ರೀತಿಯ ಪರಿಪಾಠಗಳು ಬೆಳೆದು ಕೊಂಡು ಬಂದಿವೆ.

ನಾನು ಒಬ್ಬ ಹಿರಿಯ ನ್ಯಾಯಾಧೀಶರ ಜೊತೆ ವಿಭಾಗೀಯ ಪೀಠದಲ್ಲಿದ್ದಾಗ ಒಂದು ಮೇಲ್ಮನವಿ ಅಂತಿಮ ಹಂತದ ವಿಚಾರಣೆಗೆ ಬಂದಿತ್ತು. ಈ ರೀತಿಯ ಆ ಒಂದು ರಿಟ್ ಮೇಲ್ಮನವಿ ಆದೇಶಕ್ಕೆ ನ್ಯಾಯಾಲಯದ ಮುಂದೆ ಬರುತ್ತಿದ್ದುದು ಎರಡನೇ ಸಲ. ಮೊದಲನೇ ಸಲ ಬಂದಾಗ, ಉಚ್ಚ ನ್ಯಾಯಾಲಯದ ಕಛೇರಿಯಲ್ಲಿ ಮೇಲ್ಮನವಿಯನ್ನು ಪರಿಶೀಲನೆ ಮಾಡುವಾಗ ಕಂಡುಬಂದ ನ್ಯೂನತೆಗಳನ್ನು ಸರಿಪಡಿಸಲು ಎರಡು ವಾರಗಳ ಕಾಲಾವಕಾಶ ನೀಡಲಾಗಿತ್ತು. ಆದರೂ ಅವರು ಸರಿಪಡಿಸಿಲ್ಲ ಎನ್ನುವ ಕಛೇರಿಯ ಟಿಪ್ಪಣಿಯೊಂದಿಗೆ ಮುಂದಿನ ಆದೇಶಕ್ಕಾಗಿ ನ್ಯಾಯಾಲಯದ ಮುಂದೆ ಪಟ್ಟಿ ಮಾಡಲಾಗಿತ್ತು. ರಿಟ್

ಮೇಲ್ಮನವಿಯಲ್ಲಿ, ಮೊಕದ್ದಮೆದಾರರನ್ನು (ಕೆಎಸ್‌ಆರ್‌ಟಿಸಿ) ಪ್ರತಿನಿಧಿಸುತ್ತಿದ್ದ ಮಹಿಳಾ ವಕೀಲರು ''ಕಛೇರಿಯ ಟಿಪ್ಪಣಿ ಸರಿ ಇಲ್ಲ, ನಾನು ನ್ಯೂನತೆಗಳನ್ನು ಸರಿಪಡಿಸಿದ್ದೇನೆ'' ಎಂದರು. ಕನ್ನಡ ಭಾಷೆಯಲ್ಲಿ ಲಗತ್ತು ಮಾಡಿದ ಎಲ್ಲಾ ಅಪ್ಪಣೆಗಳು, ದಾಖಲೆಗಳು, ಅವುಗಳ ಆಂಗ್ಲ ಭಾಷಾಂತರದ ನಕಲು ಕೊಟ್ಟಿಲ್ಲ ಎಂದು ಆಕ್ಷೇಪವಿತ್ತು.

**ವಕೀಲರ ಸಮಜಾಯಿಷಿ:** ಎಲ್ಲಾ ಲಗತ್ತುಗಳ ಭಾಷಾಂತರದ ನಕಲು ಅವಶ್ಯಕತೆ ಇಲ್ಲ. ನಾನು ಈ ಮೇಲ್ಮನವಿಯಲ್ಲಿ ಉಲ್ಲೇಖಿಸುವಂತಹ ಕೆಲವು ಲಗತ್ತುಗಳ ಭಾಷಾಂತರ ಹಾಕಿದ್ದೇನೆ. ಉಳಿದವುಗಳ ಅವಶ್ಯಕತೆ ಇಲ್ಲ. ಅದ್ದರಿಂದ ಕಛೇರಿಯ ಆಕ್ಷೇಪಣೆ ತಳ್ಳಿಹಾಕಿ ರಿಟ್ ಮೇಲ್ಮನವಿಯನ್ನು ಪರಿಶೀಲನೆಗೆ ತೆಗೆದುಕೊಳ್ಳಬೇಕೆಂದು ವಿನಂತಿಸಿದರು. ನನ್ನ ಹಿರಿಯ ಸಹನ್ಯಾಯಾಧೀಶರು ಈ ಸಮಜಾಯಿಷಿ ಎಲ್ಲ ನಮಗೆ ಬೇಕಾಗಿಲ್ಲ. ಮೊದಲನೇ ಸಲ ಈ ವಿಷಯದ ಬಗ್ಗೆ ನ್ಯಾಯಾಲಯದ ಮುಂದೆ ನಿಮ್ಮ ಮೇಲ್ಮನವಿ ಬಂದಿದ್ದಾಗ ನಾವು ಎರಡು ವಾರಗಳ ಅವಕಾಶ ಕೊಟ್ಟಿದ್ದೆವು, ನೀವು ಮಾಡಿಲ್ಲ. ಈ ರೀತಿ ಎರಡನೇ ಸಲ ನ್ಯಾಯಾಲಯದ ಮುಂದೆ ಬರುತ್ತಿರುವ ನ್ಯೂನತೆ ಸರಿಪಡಿಸದ ಎಲ್ಲಾ ಮೇಲ್ಮನವಿಗಳನ್ನು ನಾವು ಏಕರೂಪವಾಗಿ ವಜಾ ಮಾಡಿದ್ದೇವೆ. ಈ ಒಂದು ಮೇಲ್ಮನವಿಯಲ್ಲಿ ವ್ಯತ್ಯಾಸ ಮಾಡಲು ಸಾಧ್ಯವಿಲ್ಲ. ಇದನ್ನು ವಜಾ ಮಾಡುತ್ತೇವೆ, ಎಂದರು.

ನನಗೆ ಈ ರೀತಿ ತೀರ್ಪು ಕೊಡುವುದು ಸಮ್ಮತಿಸಲಿಲ್ಲ. ನಾನು ನನ್ನ ಹಿರಿಯ ಸಹನ್ಯಾಯಾಧೀಶರಿಗೆ ಅಣ್ಣಾವರೆ, ಈ ಮೇಲ್ಮನವಿಯನ್ನು ಈ ರೀತಿ ವಜಾ ಮಾಡಿ ಇತ್ಯರ್ಥ ಮಾಡುವುದು ನನಗೆ ಒಪ್ಪಿಗೆ ಇಲ್ಲ ಎಂದೆ.

ನಾನು ಎರಡು ಕಾರಣಗಳಿಗೆ ಈ ರೀತಿ ಹೇಳಿದೆ. ನಮ್ಮ ರಾಜ್ಯದ ಆಡಳಿತ ಭಾಷೆ ಕನ್ನಡ. ಆದರೂ, ಉಚ್ಚ ನ್ಯಾಯಾಲಯದ ಆಡಳಿತ ಭಾಷೆ ಆಂಗ್ಲ ಭಾಷೆ . ಆದಾಗ್ಯೂ ಉಚ್ಚ ನ್ಯಾಯಾಲಯದ ಹೊರತಾಗಿ ಉಳಿದ ನ್ಯಾಯಾಲಯಗಳಲ್ಲಿ ಅಲ್ಲಿನ ದಾಖಲಾತಿಗಳಲ್ಲಿ, ವ್ಯವಹಾರ ಎಲ್ಲ ಕನ್ನಡದಲ್ಲಿ ಇರುವುದರಿಂದ ಅಪ್ಪಣೆಗಳ ನಕಲುಗಳು, ದಾಖಲಾತಿ ನಕಲುಗಳು ಕನ್ನಡದಲ್ಲಿ ಇರುವುದು ಸ್ವಾಭಾವಿಕ. ಅವುಗಳ ಮೂಲವೆಲ್ಲ ಕನ್ನಡ ಭಾಷೆಯದ್ದೇ.

ಉಚ್ಚ ನ್ಯಾಯಾಲಯಕ್ಕೆ ರಿಟ್ ಅರ್ಜಿ ಸಲ್ಲಿಸುವ ಅವಕಾಶ ಇದೆ. ಅದರಲ್ಲಿ, ಏಕಪೀಠ ನ್ಯಾಯಾಧೀಶರು ಮಾಡಿದ ಅಪ್ಪಣೆ ವಿರುದ್ಧವಾದರೆ ಮೇಲ್ಮನವಿ ಸಲ್ಲಿಸುವ ಅವಕಾಶ, ಈ ದೇಶದ, ರಾಜ್ಯದ, ಪ್ರಜೆಗಳಿಗೆ, ಇತರೆ ವ್ಯಕ್ತಿ, ಸಂಸ್ಥೆಗಳಿಗೆ ಸಂವಿಧಾನ ಮತ್ತು ಶಾಸನಗಳು ಕೊಟ್ಟ ಹಕ್ಕು. ಈ ಹಕ್ಕು ಊರ್ಜಿತವಾಗಬೇಕು. ಯಾವುದೋ ಒಂದು ಅಪ್ಪಣೆಯ ಅಥವಾ ದಾಖಲಾತಿಯ ಆಂಗ್ಲ ತರ್ಜುಮೆಯನ್ನು ವ್ಯಾಜ್ಯಾಸಕ್ತನು ಉಚ್ಚ ನ್ಯಾಯಾಲಯದ ಮೇಲ್ಮನವಿಯ ದಾಖಲಾತಿಗಳ ಜೊತೆ ಒದಗಿಸಿಲ್ಲ ಎಂಬ ತಾಂತ್ರಿಕ ಕೊರತೆಗಾಗಿ ಮೇಲ್ಮನವಿಯನ್ನೇ ವಜಾ ಮಾಡುವ ಕಾರ್ಯವೈಖರಿ ನನಗೆ ಖಂಡಿತ ಒಪ್ಪಿಗೆ ಆಗಲಿಲ್ಲ. ಈ ರಾಜ್ಯದ ಭಾಷೆ ಕನ್ನಡ. ಉಚ್ಚ ನ್ಯಾಯಾಲಯದ ಅಧಿಕೃತ ಭಾಷೆ ಆಂಗ್ಲ ಭಾಷೆಯಾದರೂ, ಮೇಲ್ಮನವಿಯ ಜೊತೆ ಇರುವ ಕನ್ನಡ ದಾಖಲಾತಿಗಳ ಆಂಗ್ಲ ತರ್ಜುಮೆ ಕಕ್ಷಿದಾರನೆ ತನ್ನ ಖರ್ಚಿನಲ್ಲಿ ಮಾಡಿ ಒದಗಿಸಬೇಕು ಎನ್ನುವ ತರ್ಕ ಅಥವಾ ಬಲವಂತವೂ ನನಗೆ ಸಮಂಜಸ ಎನ್ನಿಸಲಿಲ್ಲ.

ನಮ್ಮ ಉಚ್ಚ ನ್ಯಾಯಾಲಯದ ಕಾರ್ಯಕಲಾಪಗಳಿಗೆ




ಅಂತಹ ಭಾಷಾಂತರ ಅವಶ್ಯಕತೆ ಎನ್ನಿಸಿದರೆ, ಅಂತಹ ಕನ್ನಡ ದಾಖಲಾತಿಗಳ ಆಂಗ್ಲ ತರ್ಜುಮೆ ಮಾಡಿಸುವ ಜವಾಬ್ದಾರಿ ನ್ಯಾಯಾಲಯದ್ದೇ.

ನ್ಯಾಯಾಲಯ ವ್ಯವಸ್ಥೆ, ರೀತಿ, ಜನಗಳ, ಪ್ರಜೆಗಳ ಕಷ್ಟ-ಕಾರ್ಪಣ್ಯಗಳನ್ನು ಪರಿಹರಿಸಲು, ಕುಂದುಕೊರತೆಗಳನ್ನು ನೀಗಿಸಲು ಕಾನೂನು, ಸಂವಿಧಾನ ಸೂಚಿಸಿದ ರೀತಿಯಲ್ಲಿ, ಕಾನೂನುಗಳಿಗೆ ಅನುಗುಣವಾಗಿ ನ್ಯಾಯಾಂಗ ಕಾರ್ಯ ನಿರ್ವಹಿಸಬೇಕು. ನಮ್ಮ ವ್ಯವಸ್ಥೆಯನ್ನು ವ್ಯಾವಹಾರಿಕ ದೃಷ್ಟಿಯಿಂದ ಉಂಟುಮಾಡಿದ್ದಲ್ಲ, ಲಾಭಕ್ಕಾಗಿ ಮಾಡಿರುವುದಲ್ಲ. ನ್ಯಾಯಾಲಯಗಳ ಇರುವಿಕೆ, ಅವುಗಳ ಮುಂದುವರಿಯುವಿಕೆ, ಅವುಗಳ ಕಾರ್ಯಕಲಾಪಗಳ ಖರ್ಚು ಎಲ್ಲವನ್ನು ಭರಿಸುವುದು ಸರ್ಕಾರದ ಜವಾಬ್ದಾರಿ. ನ್ಯಾಯಾಲಯಗಳೆಂದರೆ ಸರ್ಕಾರಕ್ಕೆ ಖರ್ಚಿನ ಬಾಬತ್ತೇ ಹೊರತು ಆದಾಯದ ಬಾಬತ್ತಲ್ಲ. ಆದರೆ ನಮ್ಮ ಸಂವಿಧಾನದ ರೂಪುರೇಷೆಗಳ ಪ್ರಕಾರ ನ್ಯಾಯಾಂಗ, ರಾಜ್ಯಾಡಳಿತ-ದೇಶಾಡಳಿತದ ಒಂದು ಅವಿಭಾಜ್ಯ ಅಂಗ. ಇದು ಒಂದು ಸೇವಾ ಸಂಸ್ಥೆ. ಹೀಗಿರುವಾಗ ಜನರ ಕುಂದು ಕೊರತೆಗಳನ್ನು ಕಷ್ಟಕಾರ್ಪಣ್ಯಗಳನ್ನು ಭಿನ್ನಾಭಿಪ್ರಾಯಗಳನ್ನು ಕಾನೂನು ರೀತಿಯಲ್ಲಿ ಪರಿಹರಿಸುವ, ಆ ರೀತಿಯಲ್ಲಿ ಪರಿಹರಿಸಲು ಅವಕಾಶ ಮಾಡಿಕೊಟ್ಟಿರುವ ಒಂದು ವ್ಯವಸ್ಥೆ, ಸಮಾಜದಲ್ಲಿ ಸ್ವಾಸ್ಥ್ಯ, ಶಾಂತಿ ಕಾಪಾಡಿಕೊಳ್ಳಲು, ಅಬಲರಿಗೆ, ಶೋಷಣೆಗೊಳಗಾದ-ಹಿಂಸೆಗೊಳಗಾದ ಜನಗಳಿಗೆ ರಕ್ಷಣೆ, ಪರಿಹಾರ ಒದಗಿಸಲು ಸಂವಿಧಾನ ನಮಗೆ ನೀಡಿರುವ ಒಂದು ಈ ಕೊಡುಗೆಯನ್ನು ಒಂದು ಮೇಲ್ಮನವಿಯಲ್ಲಿನ ತಾಂತ್ರಿಕ ದೋಷಕ್ಕಾಗಿ ನಿರರ್ಥಕಗೊಳಿಸುವುದು ನನಗೆ ಬಹಳ ಅಸಮಂಜಸ ಎನಿಸಿತು. ಹೀಗಿರುವಾಗ ಕಕ್ಷಿದಾರನೇ ಕನ್ನಡದಲ್ಲಿರುವ ದಾಖಲಾತಿಗಳ, ಅಪ್ಪಣೆಗಳ, ನಕಲುಗಳ ಆಂಗ್ಲಭಾಷೆ ಒದಗಿಸಬೇಕೆಂದು ಹೇಳುವುದೇ ತಪ್ಪು. ಇದು ಖರ್ಚಿನ ವಿಷಯ. ಎಷ್ಟೋ ಕಕ್ಷಿದಾರರಿಗೆ ಖರ್ಚು-ವೆಚ್ಚಗಳನ್ನು ಭರಿಸುವ ಶಕ್ತಿ ಸಾಮರ್ಥ್ಯ ಇಲ್ಲದಿರಬಹುದು. ಹಾಗಿದ್ದಲ್ಲಿ ಅವರಿಗೆ ನ್ಯಾಯ ಅಪೇಕ್ಷಿಸುವ ಹಕ್ಕೇ ಇಲ್ಲವೆಂದು ಹೇಳಬಹುದೆ? ಅದು ಖಂಡಿತ ತಪ್ಪು. ಈ ಎಲ್ಲಾ ಕಾರಣಗಳಿಗಾಗಿ ನಾನು ನನ್ನ ಹಿರಿಯ ನ್ಯಾಯಾಧೀಶರಿಗೆ ನೀವು ಮಾಡುವ ಅಪ್ಪಣೆಗೆ ನಾನು ಸಮ್ಮತಿಸಲು ಸಾಧ್ಯವಿಲ್ಲ ಎಂದು ಹೇಳಿದೆ. ನನ್ನ ಸಹ ನ್ಯಾಯಾಧೀಶರಿಗೆ ಬಹಳ ಅಸಮಾಧಾನ ಆಯಿತು, ಸಿಡಿಮಿಡಿ ಗುಟ್ಟಿದರು, ಗುಡುಗಿದರು. ಈ ನ್ಯಾಯಾಲಯದ ಸಭಾಂಗಣದಲ್ಲಿ ನೀನು ಮಾಡುತ್ತಿರುವ ಕೆಲಸ ನನಗೆ ಅತೀವ ಮುಜುಗರ ಉಂಟುಮಾಡುತ್ತಿದೆ ಎಂದು ಬೆದರಿಸಿದರು. ನಾನು ಈ ರೀತಿಯ ಎಷ್ಟೋ ಮೇಲ್ಮನವಿಗಳನ್ನು ಇದೇ ಕಾರಣಕ್ಕಾಗಿ ವಜಾ ಮಾಡಿದ್ದೇನೆ, ಈಗ ಏನೂ ಮಾಡಲು ಸಾಧ್ಯವಿಲ್ಲ, ಸುಮ್ಮನೆ ಒಪ್ಪಿಕೋ ಎಂದರು. ಆದರೆ ನಾನು ಸೌಜನ್ಯದಿಂದಲೇ ತಮಗೆ ಏನಾದರೂ ಮುಜುಗರ ಆಗಿದ್ದರೆ ದಯಪಿಟ್ಟು ಕ್ಷಮಿಸಿ, ಆದರೆ ನಾನು ಈ ಅಪ್ಪಣೆಗೆ ಒಪ್ಪಲು ಸಾಧ್ಯವಿಲ್ಲ ಎಂದೆ.

ಸಿಡಿಮಿಡಿಗೊಂಡ ನನ್ನ ಹಿರಿಯ ನ್ಯಾಯಾಧೀಶರು ಉಳಿದ ಎಲ್ಲಾ ಕಟ್ಟಳೆಗಳ ಪರಿಶೀಲನೆಯನ್ನು ಮುಂದೂಡಿ ಕಾರ್ಯಕಲಾಪಗಳನ್ನು ಮುಗಿಸಿ ಎದ್ದೇಬಿಟ್ಟರು. ಅಷ್ಟರಲ್ಲಿ ಭೋಜನ ವಿರಾಮವೂ ಹತ್ತಿರವಾಗಿತ್ತು.

ಇನ್ನೂ ಸ್ವಲ್ಪ ಕಥೆ ಇದೆ. ಅದರ ಅವಶ್ಯಕತೆ ಇಲ್ಲಿ ಇಲ್ಲ. ಆದರೆ ಸಮಾಧಾನಕರ ಸಂಗತಿ ಎಂದರೆ ನಮ್ಮ ಹಿರಿಯ ನ್ಯಾಯಾಧೀಶರು ಮಹಿಳಾ ವಕೀಲರನ್ನು ತಮ್ಮ ಕೊಠಡಿಗೆ ಬರಮಾಡಿಕೊಂಡು, ನನ್ನನ್ನೂ ಕರೆಸಿ, ಅವರನ್ನು ಉದ್ದೇಶಿಸಿ, ಈ ನಿಮ್ಮ ಕಿರಿಯ ನ್ಯಾಯಾಧೀಶರ ಹಠದಿಂದ ನಿಮ್ಮ ಮೇಲ್ಮನವಿ ಉಳಿದುಕೊಂಡಿದೆ. ಇಲ್ಲವಾದರೆ ಮೇಲ್ಮನವಿಯನ್ನು ವಜಾ ಮಾಡುತ್ತಿದ್ದೆ. ಇನ್ನು ಮುಂದೆ ಈ ರೀತಿ ಆಗದಂತೆ ನೋಡಿಕೊಳ್ಳಿ ಎಂದು ಬೆದರಿಸಿ, ಕಛೇರಿ ನ್ಯೂನತೆಗಳ ಆಕ್ಷೇಪಣೆ ತಳ್ಳಿಹಾಕಿ ಮೇಲ್ಮನವಿಯನ್ನು ನ್ಯಾಯಾಲಯದ ಮುಂದೆ ಅಂಗೀಕಾರಕ್ಕೆ ಮತ್ತೆ ಪಟ್ಟಿ ಮಾಡಲು ಆದೇಶಿಸಿದರು.

ಈ ವಿಷಯವನ್ನು ನಾನು ಇಲ್ಲಿ ಏಕೆ ಉಲ್ಲೇಖಿಸುತ್ತಿದ್ದೇನೆ ಎಂದರೆ ಕನ್ನಡ ನಾಡಿನಲ್ಲಿ ಕನ್ನಡ ಭಾಷೆಯ ಶೋಚನೀಯ ಪರಿಸ್ಥಿತಿಯನ್ನು ಈ ನಿದರ್ಶನ ಸ್ಪಷ್ಟವಾಗಿ ಪ್ರಕಟಿಸುತ್ತದೆ. ಕನ್ನಡ ಮಾತನಾಡುವುದು, ಕನ್ನಡದಲ್ಲಿ ವ್ಯವಹರಿಸುವುದು ಅಪರಾಧವೇನೋ ಎನ್ನುವ ಸ್ಥಿತಿ ಇದೆ.

ಕನ್ನಡ ಭಾಷೆಯ ಬಗ್ಗೆ ಇರುವ ಇನ್ನೂ ಒಂದು ಶೋಚನೀಯ ಪರಿಸ್ಥಿತಿ (ವಿಷಯ) ಹೇಳಬೇಕೆಂದರೆ ನಮ್ಮ ಉಚ್ಚ ನ್ಯಾಯಾಲಯದಲ್ಲಿ ಒಬ್ಬರೇ ಒಬ್ಬರು ಕನ್ನಡ ಶೀಘ್ರಲಿಪಿ ಬರಹಗಾರರು ಇಲ್ಲದಿರುವುದು!

ಹೊರಗಡೆಯಿಂದ ನಮ್ಮ ರಾಜ್ಯಕ್ಕೆ ಬರುವ ಮುಖ್ಯ ನ್ಯಾಯಮೂರ್ತಿಗಳಿಗೆ ಈ ವಿಷಯದ ಬಗ್ಗೆ ಆಸಕ್ತಿ ವಹಿಸಲು ಅಥವಾ ಇದರ ಬಗ್ಗೆ ಪರಿಸ್ಥಿತಿಯನ್ನು ಉತ್ತಮಪಡಿಸುವ ಬಗ್ಗೆಯಾದರೂ ಯೋಚಿಸಲು ಮನಸ್ಸು, ಪುರುಸೊತ್ತು ಎರಡೂ ಇಲ್ಲ.

ಕನ್ನಡ ಭಾಷೆಯ ಪರಿಚಯವೇ ಇಲ್ಲದ ಅವರಿಗೆ ಕನ್ನಡ ಭಾಷೆ ಎಂದರೆ ಮುಜುಗರ, ಅಡಚಣೆ, ಸಮಸ್ಯೆ ಆಗುವುದು ಸಹಜ. ಆದ್ದರಿಂದ ಇವರುಗಳು ಈ ವಿಷಯದ ಬಗ್ಗೆ ಅದೂ ಒಂದು ಎಂದು ಯೋಚಿಸಲು ಸಾಧ್ಯವಿರುವುದಿಲ್ಲ. ಆದರ ಜವಾಬ್ದಾರಿ ಕನ್ನಡ ಭಾಷೆಯ ಪರಿಚಯ ಇರುವ ಇತರೆ ನ್ಯಾಯಾಧೀಶರು ಮತ್ತು ಆಡಳಿತವರ್ಗದವರ ಮೇಲಿದೆ. ನಮ್ಮಲ್ಲಿ ಮುಖ್ಯ ನ್ಯಾಯಮೂರ್ತಿಯವರ ಅಭಿಪ್ರಾಯಗಳಿಗೆ ವಿರುದ್ಧವಾಗಿ ಇನ್ನೊಂದು ಅಭಿಪ್ರಾಯ ಮಂಡಿಸುವುದು ಅಪಚಾರ ಎನ್ನುವ ಮತ್ತೊಂದು ಮೂಢನಂಬಿಕೆ. ಮುಖ್ಯ ನ್ಯಾಯಮೂರ್ತಿಗಳಿಗೆ ವಿರುದ್ಧ ಅಭಿಪ್ರಾಯ ಕೊಡುವ ಧೈರ್ಯ, ಸ್ಥೈರ್ಯ ಇತರೆ ನ್ಯಾಯಾಧೀಶರುಗಳಿಗೆ ಇಲ್ಲ. ಎಷ್ಟು ಜನ ಮುಖ್ಯ ನ್ಯಾಯಮೂರ್ತಿಗಳಿಗೆ ಅದನ್ನು ಕೇಳಿ, ಆಲಿಸಿ ಸ್ಪಂದಿಸುವ ಸಮಾಧಾನ ಇದೆ ಎಂದು ಹೇಳುವುದು ಕಷ್ಟ. ■




## ಮೈನ್ಮಾರ್ : ಮಿಲಿಟರಿ ಆಡಳಿತದ ಮೇಲೆ ಜಾಗತಿಕ ಒತ್ತಾಯ ಬೇಕು

**ಭಾ**ರತ ಉಪಖಂಡದ ಭಾಗವಾಗಿರುವ ನೆರೆಯ ರಾಷ್ಟ್ರ ಮೈನ್ಮಾರ್‌ನಲ್ಲಿ ಮಿಲಿಟರಿ ಸರ್ವಾಧಿಕಾರದ ಆಡಳಿತ ಅಂತ್ಯಗೊಳ್ಳುವ ಸೂಚನೆ ವಿರಳ. ನಾಲ್ಕೂವರೆ ದಶಕಗಳಿಂದ ಬೇರೂರಿರುವ ಮಿಲಿಟರಿ ಆಡಳಿತವನ್ನು ಅಂತ್ಯಗೊಳಿಸಲು ಅಂತರರಾಷ್ಟ್ರೀಯ ಸಮುದಾಯ ಕೈಗೊಂಡಿರುವ ಕ್ರಮಗಳು ಬಹಳ ಕಡಿಮೆ. ಆರ್ಥಿಕ ದಿಗ್ಬಂಧನವೊಂದನ್ನು ಬಿಟ್ಟರೆ ಬೇರೇನೂ ಇಲ್ಲ. ಇದು ಯಾವ ರೀತಿಯಲ್ಲಿಯೂ ಪರಿಣಾಮಕಾರಿಯಲ್ಲ ಎನ್ನುವುದು ಸಾಬೀತಾಗಿದೆ. ದಿಗ್ಬಂಧನಕ್ಕೊಳಗಾದ ದೇಶದ ಜನತೆ ಸಂಕಷ್ಟಗಳನ್ನು ಅನುಭವಿಸುತ್ತಾರೆಯೇ ಹೊರತು, ಆಡಳಿತಗಾರರ ಮೇಲೆ ಯಾವ ಪರಿಣಾಮವೂ ಆಗುವುದಿಲ್ಲ. ಒಂದು ರೀತಿಯಲ್ಲಿ ಮೈನ್ಮಾರ್ ನಾಗರಿಕ ಜಗತ್ತು ಕಡೆಗಣಿಸಿರುವ ದೇಶ. ಆಗೊಮ್ಮೆ ಈಗೊಮ್ಮೆ ಸುದ್ದಿ ಮಾಡಿ ಅದು ತನ್ನ ಅಸ್ತಿತ್ವವನ್ನು ತೋರಿಸಿಕೊಳ್ಳುತ್ತದೆ. ಪ್ರಜಾಪ್ರಭುತ್ವಕ್ಕಾಗಿ ಪ್ರಬಲವಾದ ಸಾಮೂಹಿಕ ಚಳವಳಿಯ ಕೊರತೆ ಇದಕ್ಕೆ ಕಾರಣ. ೨೦೦೭ರಲ್ಲಿ ನಡೆದ ಆಂದೋಲನವನ್ನು ಬಿಟ್ಟರೆ ಬೇರಾವುದೇ ಚಳವಳಿ ವಿಶ್ವದ



ಗಮನ ಸೆಳೆದಿಲ್ಲ. ಈ ಚಳವಳಿಯಲ್ಲಿ ಬೌದ್ಧ ಸಂನ್ಯಾಸಿಗಳು ಪ್ರಮುಖ ಪಾತ್ರ ವಹಿಸಿದ್ದರು. ಪ್ರಜಾಪ್ರಭುತ್ವಕ್ಕಾಗಿ ಚಳವಳಿ ಏಕವ್ಯಕ್ತಿಕೇಂದ್ರಿತವಾಗಿ ಇರುವುದು ಮಿಲಿಟರಿ ಆಡಳಿತಕ್ಕೆ ವರದಾನ. ೨೦೧೦ರಲ್ಲಿ ನಡೆಯಲಿರುವ ಸಾರ್ವತ್ರಿಕ ಚುನಾವಣೆಗಳ ಹಿನ್ನೆಲೆಯಲ್ಲಿ ಈಗ ಮೈನ್ಮಾರ್ ಸುದ್ದಿಯಲ್ಲಿದೆ. ಹದಿನಾಲ್ಕು ವರ್ಷಗಳ ನಂತರ ಅಮೆರಿಕಾದ ಆಡಳಿತ ಮೈನ್ಮಾರ್‌ನಲ್ಲಿ ಆಸಕ್ತಿ ಮತ್ತೆ ತೋರುತ್ತಿದೆ. ಅಧ್ಯಕ್ಷ ಬರಾಕ್ ಒಬಾಮಾ ನೇರ ಸಂಪರ್ಕ ಧೋರಣೆಯ ಭಾಗವಾಗಿ ಅಮೆರಿಕಾದ ವಿದೇಶಾಂಗ ಖಾತೆಯ ಉಪಕಾರ್ಯದರ್ಶಿ ಕರ್ಟ್ ಕ್ಯಾಂಬೆಲ್ ಈಚೆಗೆ ಮಿಲಿಟರಿ ಆಡಳಿತಗಾರರೊಂದಿಗೆ, ನ್ಯಾಷನಲ್ ಲೀಗ್ ಆಫ್ ಡೆಮಾಕ್ರಸಿ ತಂಡದ ನಾಯಕಿ ಆಂಗ್ ಸಾನ್ ಸೂಕಿಯ ಜೊತೆ ಮಾತುಕತೆ ನಡೆಸಿದ್ದಾರೆ. ಇದಕ್ಕೆ ಮುನ್ನ ಮಿಲಿಟರಿ ಆಡಳಿತದ ಸೇನಾಧಿಕಾರಿಯೊಬ್ಬ ಆಕೆಯೊಂದಿಗೆ ಮಾತುಕತೆ ನಡೆಸಿದ್ದಾನೆ. ಗೃಹಬಂಧನದಲ್ಲಿರುವ ಆಕೆಯ ಬಿಡುಗಡೆಯ ಪ್ರಸ್ತಾಪವೇನೂ ಇಲ್ಲ. ಬದಲಾಗಿ ಆಕೆ ಚುನಾವಣೆಯಲ್ಲಿ ಸ್ಪರ್ಧಿಸಲಾಗದಂತೆ ಕಾನೂನುರೀತ್ಯಾ ಅನರ್ಹಳೆಂದು ಘೋಷಿಸಲು ಪ್ರಯತ್ನ ನಡೆಯುತ್ತಿದೆ.

ಕಳೆದ ಶತಮಾನದ ಐವತ್ತರ ದಶಕದಲ್ಲಿ ಅಲಿಪ್ತ ಚಳವಳಿಯ ಮುಂಚೂಣಿಯಲ್ಲಿದ್ದ ಬರ್ಮಾ ೧೯೬೨ರಿಂದ ಮಿಲಿಟರಿ ಆಡಳಿತದಲ್ಲಿ ನರಳುತ್ತಿದೆ. ಒಂದು ಕಾಲದಲ್ಲಿ ಮಂಗೋಲರ ಆಕ್ರಮಣಕ್ಕೀಡಾಗಿದ್ದು, ನಂತರ ಚೀಣೀಯರ ಆಡಳಿತಕ್ಕೊಳಪಟ್ಟಿದ್ದ ಬರ್ಮಾ ಎರಡನೇ ಮಹಾಯುದ್ಧದ ಕಾಲದಲ್ಲಿ ಜಪಾನೀಯರ ವಶದಲ್ಲಿದ್ದು ಯುದ್ಧಾನಂತರ ಬ್ರಿಟಿಷರ ಅಧೀನವಾಯಿತು. ರಾಷ್ಟ್ರೀಯ ನಾಯಕ ಆಂಗ್ ಸಾನ್ ನೇತೃತ್ವದಲ್ಲಿ ಸ್ವಾತಂತ್ರ್ಯ ಹೋರಾಟ ಪ್ರಾರಂಭವಾದದ್ದೂ ಆಗಲೆ. ಮೂರು ವರ್ಷಗಳಾದ ಮೇಲೆ ಬರ್ಮಾ ೧೯೪೮ರಲ್ಲಿ ಸ್ವತಂತ್ರ ರಾಷ್ಟ್ರವಾಯಿತು. ೧೯೪೭ರಲ್ಲಿ ಸ್ಥಾಪಿತವಾದ ಆಂಗ್ ಸಾನ್ ನೇತೃತ್ವದ ಹಂಗಾಮಿ ಸರಕಾರ ಸ್ವಾತಂತ್ರ್ಯವನ್ನು ಕಾಣಲೇ ಇಲ್ಲ. ಆಂಗ್ ಸಾನ್ ಅನ್ನೊಳಗೊಂಡು ಎಲ್ಲ ಸಚಿವರೂ ಕೊಲೆಯಾದರು. ಈ ದುರಂತದ ಹಿನ್ನೆಲೆಯಲ್ಲಿ ಸ್ವತಂತ್ರಗೊಂಡ ಬರ್ಮಾ ಸ್ವತಂತ್ರ ಪ್ರಜಾಪ್ರಭುತ್ವರಾಷ್ಟ್ರವಾಗಿ ಇದ್ದುದು ಕೇವಲ ೧೪ ವರ್ಷ ಮಾತ್ರ. ೧೯೬೨ರಲ್ಲಿ ಸೈನಿಕ ಬಂಡಾಯದಿಂದಾಗಿ ದೇಶ ಮಿಲಿಟರಿ ಆಡಳಿತಕ್ಕೆ ಒಳಪಟ್ಟಿತು. ದೇಶದ ಹೆಸರನ್ನು ಮೈನ್ಮಾರ್ ಎಂದು ಬದಲಿಸಿದ್ದಲ್ಲದೆ ವಿಶ್ವಸಂಸ್ಥೆಯನ್ನು ಒಳಗೊಂಡಂತೆ ಎಲ್ಲ ಅಂತರರಾಷ್ಟ್ರೀಯ ಸಂಸ್ಥೆಗಳಿಂದಲೂ ದೂರ ಉಳಿಯಿತು. ಎಲ್ಲ ಮೂಲಭೂತ ಹಕ್ಕುಗಳನ್ನೂ ಗಾಳಿಗೆ ತೂರಿ ಬಿಗಿಮುಷ್ಟಿಯಿಂದ ಈವರೆಗೆ ಮಿಲಿಟರಿ ಸರ್ವಾಧಿಕಾರ ಆಡಳಿತ ನಡೆಸುತ್ತ ಬಂದಿದೆ. ಮಿಲಿಟರಿ ಸರ್ವಾಧಿಕಾರದ ವಿರುದ್ಧ ಪ್ರಜಾಪ್ರಭುತ್ವದ ಸ್ಥಾಪನೆಗಾಗಿ ಸಂಘಟಿತ ರೂಪದಲ್ಲಿ ಹೋರಾಟ ಪ್ರಾರಂಭವಾದದ್ದು ೧೯೮೮ರ ನಂತರವೇ.

ಬರ್ಮಾದ ಸ್ವಾತಂತ್ರ್ಯ ಹೋರಾಟಗಾರ ಕೊಲೆಯಾದ ಆಂಗ್ ಸಾನ್‌ರ ಪುತ್ರಿ ಆಂಗ್ ಸಾನ್ ಸೂಕಿ ವಿದ್ಯಾಭ್ಯಾಸ ಮುಗಿಸಿ ಸ್ವದೇಶಕ್ಕೆ ಮರಳಿ ಬಂದು ನ್ಯಾಷನಲ್ ಡೆಮಾಕ್ರೆಟಿಕ್ ಲೀಗ್ ಪಕ್ಷ ಸ್ಥಾಪಿಸಿದ ನಂತರ ಆಕೆಯೇ ಅದರ ಪ್ರಧಾನ ಕಾರ್ಯದರ್ಶಿ. ಇದು ಸ್ಥಾಪನೆಯಾದದ್ದು ೧೯೮೮ರಲ್ಲಿ. ೧೯೯೦ರಲ್ಲಿ ನಡೆದ ಸಾರ್ವತ್ರಿಕ ಚುನಾವಣೆಯಲ್ಲಿ ಪಕ್ಷ ಶೇಕಡ ೫೯ರಷ್ಟು ಮತದಾನ ಗಳಿಸಿ, ೪೮೫ ಮಂದಿ ಸದಸ್ಯರ ಸದನದಲ್ಲಿ ೩೯೨ ಸ್ಥಾನಗಳನ್ನು ಗಳಿಸಿ ಬಹುಮತ ಪಡೆಯಿತು. ಪ್ರಧಾನಿಯಾಗಿ ಆಯ್ಕೆಗೊಂಡ ಈಕೆ ಅಧಿಕಾರದ ಸವಿಯನ್ನು ಕಾಣಲೇ ಇಲ್ಲ ಎನ್ನಬೇಕು. ೧೯೮೯ರಲ್ಲೇ ಬಂಧನಕ್ಕೊಳಗಾದ ಈಕೆ ೨೦ ವರ್ಷಗಳಿಂದ ಏಕಾಂಗಿಯಾಗಿ ಗೃಹಬಂಧನದಲ್ಲಿ ಕೊಳೆಯುತ್ತ ಬಂದಿದ್ದಾಳೆ. ಮೈನ್ಮಾರ್ ಮಿಲಿಟರಿ ಆಡಳಿತಕ್ಕೆ ಕಂಟಕವಾಗಿರುವ ಈಕೆಯನ್ನು ದೇಶದಿಂದ ಹೊರಗೆ ಹೋಗುವಂತೆ ಸರಕಾರ ಒತ್ತಡ ತಂದಿದೆ. ೧೯೯೧ರಲ್ಲಿ ನೊಬೆಲ್ ಶಾಂತಿ ಪುರಸ್ಕಾರವನ್ನು, ೧೯೯೨ರಲ್ಲಿ ನೆಹರು ಪುರಸ್ಕಾರವನ್ನು ಪಡೆದಿರುವ ಈಕೆ ಪ್ರಜಾಪ್ರಭುತ್ವಕ್ಕಾಗಿ ಹೋರಾಟಕ್ಕೆ ಅನುಸರಿಸಿರುವ ಮಾರ್ಗ ಅಹಿಂಸಾ ಚಳವಳಿ, ಗಾಂಧೀವಾದಿ ಮಾರ್ಗ. ಪ್ರಬಲವಾದ ಜನಾಂದೋಳನ ಸಂಘಟಿಸದೇ ಇರುವುದೇ ಈಕೆಯ ದೌರ್ಬಲ್ಯ. ಅದಲ್ಲದೆ ಬರ್ಮಾದ ವಿಶಿಷ್ಟ ಪರಿಸ್ಥಿತಿಯಲ್ಲಿ ಬೌದ್ಧ ಸಂನ್ಯಾಸಿಗಳ ಪಾತ್ರ ಮಹತ್ವದ್ದು. ಜನಸಮೂಹಗಳಲ್ಲಿ ಪ್ರಭಾವ ಹೊಂದಿರುವ ಇವರಿಗೆ ಪ್ರಜಾಪ್ರಭುತ್ವ ಸ್ಥಾಪನೆಯಲ್ಲಿ ಆಸಕ್ತಿ ಕಡಿಮೆ. ಸೇನಾಡಳಿತದಿಂದ ರಿಯಾಯಿತಿಗಳನ್ನು ಪಡೆದುಕೊಳ್ಳುವುದಷ್ಟಕ್ಕೇ ಸೀಮಿತ ಅವರ ಹೋರಾಟ. ಈ ಮೊದಲೇ ಹೇಳಿರುವ ಹಾಗೆ ಅಂತರರಾಷ್ಟ್ರೀಯ ಸಮುದಾಯ ಕೂಡ ಈವರೆಗೆ ಹೆಚ್ಚಿನ ಆಸಕ್ತಿ ತೋರಿಲ್ಲ. ನೆರೆಯ ಭಾರತದ ವಿಷಯದಲ್ಲೂ ಇದು ನಿಜ. ಗಡಿಯ ಸಂರಕ್ಷಣೆಗೆ ಅಕ್ರಮ ವಲಸೆಯ ತಡೆ, ಅಷ್ಟರಲ್ಲೇ ಭಾರತದ ಕ್ರಿಯೆಯ ಮಿತಿ. ಯಥಾಸ್ಥಿತಿಗೆ ಪ್ರಾಶಸ್ತ್ಯ.

ಹಾಗಿರುವಾಗ ಪ್ರಬಲವಾದ ಅಂತರರಾಷ್ಟ್ರೀಯ ಒತ್ತಡವಿಲ್ಲದೆ ಮೈನ್ಮಾರ್‌ಗೆ ಮಿಲಿಟರಿ ಆಡಳಿತದಿಂದ ಮುಕ್ತಿ ಇಲ್ಲ. ಅದೇ ಸಮಯದಲ್ಲಿ ಜನಾಂದೋಳನ ಸಂಘಟಿಸಲೂ ಅದು ಸ್ಥಳೀಯರಿಗೆ ಬೆಂಬಲ ನೀಡಬೇಕು. ಅದಿಲ್ಲದೆ ರಾಜತಾಂತ್ರಿಕ ವಿಧಾನಗಳಿಗೆ ಸೀಮಿತಗೊಂಡರೆ ಮೈನ್ಮಾರ್ ಇನ್ನೊಂದು ಅಮೆರಿಕಾದ ಅಧೀನ ರಾಷ್ಟ್ರವಾಗುವ ಸಂಭವವೇ ಹೆಚ್ಚಾಗುತ್ತದೆ.

ಸೀಯಾರ್ಕೆ

## ಆಗ ಕ್ರಾಂತಿಕಾರಿ, ಈಗ ಅಮೆರಿಕಾದ ಭಂಟ ಗದಾಫಿ



**ನ**ಲವತ್ತು ವರ್ಷಗಳ ಹಿಂದೆ, ಅಂದರೆ ೧೯೬೯ರಲ್ಲಿ ಲಿಬಿಯದಲ್ಲಿ ಅರಸೊತ್ತಿಗೆಯನ್ನು ಕಿತ್ತೊಗೆದ ಮಿಲಿಟರಿ ರಾಜ್ಯಕ್ರಾಂತಿಯ ನೇತೃತ್ವ ವಹಿಸಿದ್ದುದು ಕರ್ನಲ್ ಗದಾಫಿ. ಆ ದಿನಗಳಲ್ಲಿ ಈತ ಈಜಿಪ್ಟಿನ ಜನಪ್ರಿಯ ನಾಯಕ ಗಮಾಲ್ ಅಬ್ದುಲ್ ನಾಸೆರ್ ಅಷ್ಟೇ ಜನಪ್ರಿಯ. ಅರಬ್ ರಾಷ್ಟ್ರಗಳಲ್ಲಿ ಮಿಂಚಿನ ಸಂಚಲನೆ ಮೂಡಿಸಿದ ಕ್ರಾಂತಿಕಾರಿ ಧ್ರುವತಾರೆ. ಎಡಪಂಥೀಯ ಧೋರಣೆ ತಳೆದು ಪುರೋಗಾಮಿ ಸುಧಾರಣೆಗಳನ್ನು

ಜಾಗಿ. ಇಂದು ಸಮಾಜವಾದಿ ಸಮಾಜ ಸ್ಥಾಪಿಸುವ ಗುರಿ ಹೊಂದಿದ್ದ ಗದಾಫಿ [illegible] ಮಧ್ಯಪ್ರಾಚ್ಯದಲ್ಲಿ [illegible] ಶ್ರೀಮಂತವಾಗಿದ್ದ [illegible] ಪಾಶ್ಚಾತ್ಯ ದೇಶಗಳಿಗೆ ಸಿಂಹಸ್ವಪ್ನವಾಗಿದ್ದ ಈತ. ಅಂದಿನ ಸಮಾಜವಾದಿ ದೇಶಗಳೊಂದಿಗೆ ನಿಕಟ ಸಂಪರ್ಕ ಬೆಳೆಸಿಕೊಂಡು ಪ್ರಬಲ ಅಮೆರಿಕಾವನ್ನು ಎದುರು ಹಾಕಿಕೊಂಡ ವ್ಯಕ್ತಿ ಗದಾಫಿ. ಉಗ್ರ ರಾಷ್ಟ್ರೀಯವಾದಿ ಗದಾಫಿ ಅರಬ್ ಜಗತ್ತಿನಲ್ಲಿ ಈಗ ಒಬ್ಬ ಹೀರೋ.

ಪ್ಯಾಲಸ್ತೀನ ಜನತೆಯ ಹೋರಾಟದ ಕಟ್ಟಾ ಬೆಂಬಲಿಗ ಗದಾಫಿ – ಇಸ್ರೇಲ್ ಅರಬ್ ಯುದ್ಧದಲ್ಲಿ ಪ್ರಮುಖ ಪಾತ್ರ ವಹಿಸಿದ. ಇಟಲಿಯ ವಸಾಹತಾಗಿದ್ದು ನಂತರ ಬ್ರಿಟಿಷ್ ಮತ್ತು ಫ್ರೆಂಚರ ವಶದಲ್ಲಿದ್ದು ೧೯೫೧ರಲ್ಲಿ ಸ್ವಾತಂತ್ರ್ಯ ಪಡೆದುಕೊಂಡಾಗ ಲಿಬಿಯ ಬಡದೇಶ. ಭ್ರಷ್ಟ ರಾಜಶಾಹಿ ನಿರಂಕುಶಾಧಿಕಾರಕ್ಕೊಳಪಟ್ಟಿದ್ದ ಲಿಬಿಯದಲ್ಲಿ ತೈಲ ಪತ್ತೆಯಾದ್ದು ೧೯೫೮ರಲ್ಲಿಯೆ. ಈಗಲೂ ತೈಲಸಂಪತ್ತಿನಿಂದ ಸುಮಾರು ೩೬ ಬಿಲಿಯ ಡಾಲರುಗಳನ್ನು ಸಂಪಾದಿಸುತ್ತಿದ್ದರೂ ಅದು ಲಿಬಿಯದ ಜನತೆಗೆ ದಕ್ಕುತ್ತಿಲ್ಲ. ಅಧಿಕಾರದಲ್ಲಿ ಬೇರೂರಿದ್ದು ಶ್ರೀಮಂತಿಕೆಯಲ್ಲಿ ಮೆರೆಯುತ್ತಿರುವ ಗದಾಫಿಗೆ ಈಗ ಲಿಬಿಯ ಜನರ ಬಡತನದ ಬಗ್ಗೆ ಕಾಳಜಿ ಇಲ್ಲ. ಅಂದು ಅಮೆರಿಕಾಗೆ, ಪಶ್ಚಿಮ ರಾಷ್ಟ್ರಗಳಿಗೆ, ಶತ್ರುವಾಗಿದ್ದ ಗದಾಫಿ ಈಗ ಅವುಗಳ ಪರಮ ಮಿತ್ರ. ಭಯೋತ್ಪಾದನೆಗೆ ಕುಮ್ಮಕ್ಕು ನೀಡುತ್ತಿದೆ ಎಂದು ಆರೋಪ ಹೊರಿಸಿ ಅಮೆರಿಕಾ ಮತ್ತು ಪಶ್ಚಿಮ ರಾಷ್ಟ್ರಗಳು ೧೯೯೦ರಲ್ಲಿ ಆರ್ಥಿಕ ದಿಗ್ಬಂಧನ ಹೇರಿದ್ದುವು. ಹೆಚ್ಚಾಗಿ ಅಮೆರಿಕನ್ನರನ್ನೇ ಬಲಿತೆಗೆದುಕೊಂಡ ಲಾಕರ್ಬಿ ವಿಮಾನ ದುರಂತದ ಆಪಾದನೆ ಕೂಡ ಲಿಬಿಯದ ಮೇಲಿತ್ತು. ಭಯೋತ್ಪಾದಕರನ್ನು ಅಡಗಿಸಿಕೊಂಡಿದೆ ಎಂದು ಶಂಕಿಸಿ ಲಿಬಿಯದ ಮೇಲೆ ನಡೆಸಿದ ವೈಮಾನಿಕ ದಾಳಿಯಲ್ಲಿ ಗದಾಫಿಯ ಪುತ್ರಿ ಆಹುತಿಯಾಗಿದ್ದಳು. ಆದರೆ ಈಗ ಎಲ್ಲ ಬದಲಾಗಿದೆ.



ಭಯೋತ್ಪಾದನೆಯ ವಿರುದ್ಧವಾಗಿ ಅಮೆರಿಕಾ ಯುದ್ಧ ಸಾರಿದ ಮೇಲೆ ಗದಾಫಿಯ ನಿಲುವು ಕೂಡ ಬದಲಾಗ ತೊಡಗಿತು. ಈಜಿಪ್ಟಿನ ಅಧ್ಯಕ್ಷ ಅನ್ವರ್ ಸಾದತ್ ಹಾದಿಯಲ್ಲೇ ಹೊರಟ ಗದಾಫಿ ಪಶ್ಚಿಮ ರಾಷ್ಟ್ರಗಳ ಜೊತೆ ಒಡಂಬಡಿಕೆ ಮಾಡಿಕೊಳ್ಳಲು ಮುಂದಾದ. ಸರ್ವಾಧಿಕಾರ ನಡೆಸುತ್ತಿರುವ ಲಿಬಿಯದ ಅಧಿಪತಿಯಾಗಿರುವ ಈತ ಜನಹಿತವನ್ನು ಗಾಳಿಗೆ ತೂರಿ ಶ್ರೀಮಂತಿಕೆಗೆ ಮಾರುಹೋಗಿ ಪಾಶ್ಚಾತ್ಯ ದೇಶಗಳ ಮೊರೆಹೊಕ್ಕಿದ್ದಾನೆ. ಬ್ರಿಟನ್ನಿನೊಂದಿಗೆ ಮೊದಲು ಸಖ್ಯ ಬೆಳೆಸಿಕೊಂಡ ಈತ ಭಾರಿ ಮೊತ್ತದ ತೈಲ ಒಪ್ಪಂದವನ್ನು ಆ ದೇಶದೊಂದಿಗೆ ಮಾಡಿಕೊಂಡಿದ್ದಾನೆ. ಅಮೆರಿಕಾದೊಂದಿಗೂ ಬಾಂಧವ್ಯ ಸ್ಥಾಪಿಸಿದ್ದಾನೆ. ಒಂದು ಹಂತದಲ್ಲಿ ದುಷ್ಟನಾಗಿದ್ದ ಗದಾಫಿ ಈಗ ಪಾಶ್ಚಾತ್ಯ ದೇಶಗಳ ಕಣ್ಮಣಿ. ಈಚೆಗಷ್ಟೇ ತನ್ನ ಅಧಿಕಾರದ ನಲವತ್ತನೇ ವರ್ಷವನ್ನು ವೈಭವದಿಂದ ಆಚರಿಸಿಕೊಂಡ ಈ ಸರ್ವಾಧಿಕಾರಿ ಇನ್ನೂ ಏನೇನು ಅವತಾರ ತಾಳುವನೋ ನೋಡಬೇಕು.

ಸೀಯಾರ್ಕೆ
'ಚೌಜೀನ', ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ
೩ನೇ ಬ್ಲಾಕ್, ಕತ್ತಿಗುಪ್ಪೆ, ಬೆಂಗಳೂರು - ೮೫

# ಸುಳ್ಳಿನ ಸತ್ಯತೆ

ಡಾ|| ಪುರುಷೋತ್ತಮ ಜಿ.

ಮಾತಾಡುವವರಿಗೆಲ್ಲಾ ಸುಳ್ಳು ಹೇಳಿ ಗೊತ್ತು, ಸುಳ್ಳಿನ ಬಗ್ಗೆ ಮಾತನ್ನೂ ಆಡುತ್ತಾರೆ. ಸುಳ್ಳು ಹೇಳಿದರೂ ಸತ್ಯದ ತಲೆಯ ಮೇಲೆ ಹೊಡೆದಂತೆ ಹೇಳಬೇಕೆಂದು ಅದನ್ನು ಹೊಗಳುವವರೂ ಇದ್ದಾರೆ. ಸುಳ್ಳು ಒಂದು ಬಗೆಯ ಮೋಸ. ಅದರ ಗುರಿ ಮೋಸ ಮಾಡುವುದೇ ಆಗಿರುತ್ತದೆ. ಇದನ್ನು ಹೆಚ್ಚಾಗಿ ಮಾತಿನ ರೂಪದಲ್ಲೇ ಪ್ರಕಾಶಿಸಬೇಕಾಗಿರುವುದರಿಂದ ಅದು ಮನುಷ್ಯರಿಗೆ ಸೀಮಿತವಾಗಿದೆ ಅನ್ನಬಹುದು. ಅಲ್ಲದೆ ಸುಳ್ಳು , ಮೋಸ ಇವು ಒಂದು ರೀತಿಯಲ್ಲಿ ಸೃಜನಶೀಲತೆಯ ಮುಖಗಳೂ ಆದ್ದರಿಂದ ಮನುಷ್ಯನಿಗೆ ಹೆಚ್ಚು ಸೀಮಿತವಾಗಿರುತ್ತವೆ.

ಪ್ರಾಣಿಗಳು ತಮ್ಮ ತಮ್ಮಲ್ಲೇ ಸಂಪರ್ಕಿಸಿಕೊಳ್ಳುತ್ತವೆಯಾದರೂ ನಮ್ಮ ರೀತಿಯಲ್ಲಿ ಸುಳ್ಳು ಹೇಳಲು ಶಕ್ತವೆಂದು ನಮಗೆ ಇನ್ನೂ ತಿಳಿದುಬಂದಿಲ್ಲ. ಎರಡು ಚಿಂಪಾಂಜಿಗಳಿಗೆ ನಮ್ಮ ಭಾಷೆಯ ರೀತಿಯಲ್ಲಿ ಸಂಪರ್ಕಿಸಲು ಶುರುಮಾಡಿದ್ದರು. ಅವುಗಳಿಗೆ ಒಂದು ರೀತಿಯ ವ್ಯಾಕರಣವನ್ನು ಕಲಿಸಿದರು. ಆ ವ್ಯಾಕರಣವನ್ನು ಅವಶ್ಯಕತೆಗೆ ತಕ್ಕಂತೆ ಅವು ಉಪಯೋಗಿಸಲು ಶುರುಮಾಡಿದವು ಕೂಡ. ಆನಂತರ ಅವು ಅದೇ ಬೇಕಾಗಿಯೇ ಸುಳ್ಳುಸುಳ್ಳಾಗಿ ಕೆಲವು ವಾಕ್ಯಗಳನ್ನು ಮಾಡಿದಾಗ ವಿಜ್ಞಾನಿಗಳಿಗೆ ಆಶ್ಚರ್ಯ! ಅರೆರೆ, ಈ ಪ್ರಾಣಿಗಳಿಗೂ ಸುಳ್ಳು ಹೇಳುವ ಶಕ್ತಿ ಇದೆಯಲ್ಲವೆಂದು ಅನ್ನಿಸಿತಂತೆ. ಅವು ತಪ್ಪು ಮಾಡಿವೆ ಎಂದು ಸದ್ಯಕ್ಕೆ ಅವನ್ನು ಕ್ಷಮಿಸಲು ಸಾಧ್ಯ. ಆದರೆ ಮಾನವ ಪ್ರಾಣಿಯ ಸುಳ್ಳಿನ ಶಕ್ತಿ ಅಗಾಧವಾದದ್ದು.



ಸತ್ಯಕ್ಕೆ ಮುಖವಾಡವಿಲ್ಲ. ಅದಕ್ಕಿರುವುದು ಒಂದೇ ಮುಖ. ನಿಜವೆಂದರೆ ಅದರ ಮುಖದಲ್ಲಿ ಏನು ವಿಶೇಷತೆಯೂ ಇಲ್ಲ. ನಿಜ ಹೇಳುವವನು ಹೇಳಿದ್ದನ್ನೇ ಹೇಳಬೇಕಾಗುತ್ತದೆ. ಅದನ್ನು ಬದಲಾಯಿಸಲಾರ. ಅದರಲ್ಲಿ ಆನಂದ, ಬೇಸರ ಯಾವುದೂ ಇರಬೇಕಾದ್ದಿಲ್ಲ, ನಿರ್ಲಿಪ್ತತೆಯೇ ಅದರ ಲಕ್ಷಣವೆಂದರೂ ನಡೆಯುತ್ತದೆ. ಇದರಿಂದ ಸಹಜವಾಗಿಯೇ ಮನುಷ್ಯ ಅದರಲ್ಲಿ ಆಸಕ್ತಿಯನ್ನು ಕಳೆದುಕೊಳ್ಳುತ್ತಾನೋ ಏನೋ. ಬೀಚಿ ಅವರ ಪ್ರಕಾರ ಸ್ವರ್ಗದಲ್ಲಿ ಬೇಸರವಂತೆ, ಅವೇ ಮುಖಗಳು, ಅದೇ ಸಿಹಿ ಅಮೃತ, ಅಲ್ಲಿ ಉಪ್ಪಿನಕಾಯಿಯೇ ಇಲ್ಲವಲ್ಲ! ಹಾಗೆಯೇ ಸತ್ಯ. ಆದರೆ ಸತ್ಯದ ಅನುಕೂಲತೆಗಳು ಬಹಳ. ಸತ್ಯ ಹೇಳುವವನು ವಿಷಯವನ್ನು ವಿಶೇಷವಾಗಿ ನೆನಪಿನಲ್ಲಿ ಭದ್ರವಾಗಿಡಬೇಕೆಂದಿಲ್ಲ. ಮುರೆಮಾಚುವ ಪ್ರಶ್ನೆಯೇ ಬರುವುದಿಲ್ಲ. ವಿಷಯ ತಿಳಿದಿರಬೇಕು, ಅಷ್ಟೆ. ವಿಷಯವನ್ನು ಸರಿಯಾಗಿ ತಿಳಿಯಬೇಕು ಎಂಬುದು ವಿಜ್ಞಾನಿಯ ಚಹರೆ. ಮನುಷ್ಯ 'ಅರಹಂತ'ನಾಗಲೂ ಕೂಡ ಬೇಕಾದ್ದು ಇದೇ ಭಾವನೆ ಮತ್ತು ಸಾಧನೆ. ಸತ್ಯ ಇರುವಲ್ಲಿ ಪ್ರೀತಿ, ಒಡನಾಟ, ಸಹಜ, ಸರಳ, ಒಂದೇ ಮನೆಯವರಂತೆ. ಅಲ್ಲಿ ಆಸರೆ, ನಂಬಿಕೆ ಸತ್ಯದಷ್ಟೇ ಪ್ರಕಾಶ ಮತ್ತು ನಿಷ್ಠುರ ಕೂಡ.

(ಈ ನಿಷ್ಠುರ ಅನ್ನುವುದು ಸ್ವಲ್ಪ ಗಟ್ಟಿಯಾದ ತುತ್ತು, ನುಂಗಲು. ಕೆಲವು ಸಲ ಕಷ್ಟ. ಆದ್ದರಿಂದ ಪ್ರಿಯವಾದುದನ್ನೇ ಹೇಳಿ ಎಂದು ಆಚಾರ್ಯರು ಅಪ್ಪಣೆ ಕೊಡಿಸಿದ್ದಾರೆ. ಆದರೆ ಅದು ಕೂಡ ಸುಲಭದ ವಿಚಾರವೇನಲ್ಲ. ''ಬುಧವಾರ ಮದುವೆ, ನಮ್ಮಲ್ಲಿಗೆ ಬನ್ನಿ'' ಎನ್ನುತ್ತಾರೆ ಸಹೃದಯರು. ''ಆಯಿತು ಒಳ್ಳೆಯದಾಗಲಿ. ಆ ದಿನ ನಾನು ಬೇರೆ ಊರಿನಲ್ಲಿರುತ್ತೇನೆ'' ಎಂದರೆ ಹೆಂಡತಿಯ ಚಹರೆ ಬದಲಾಗುತ್ತಿರುತ್ತದೆ, ಅಷ್ಟು ನಿಷ್ಠುರವಾಗಿರಬೇಕಾದ್ದಿರಲಿಲ್ಲ ಎನ್ನುವುದು ಆಕೆಯ ಮತ. ಆದರೆ ಆಹ್ವಾನ ಪತ್ರಿಕೆಯಲ್ಲಿ ಆರ್.ಎಸ್.ವಿ.ಪಿ. ಎಂದು ಬರೆದಿದೆಯಲ್ಲ ಎಂಬುದು ನನ್ನ ವಾದ. ಬರುತ್ತೇವೆಂದು ನಿಖರವಾಗಿ ಹೇಳಿದರೆ ಒಳ್ಳೆಯದಲ್ಲವೆ ಎಂಬುದು ನನ್ನ ಯೋಚನೆ.)

ಅಂತೂ ಸತ್ಯ ಹೇಳುವುದರಲ್ಲಿ ಕಷ್ಟವಿದೆ ಎಂಬುದು ನಾವು ದೊಡ್ಡವರಾಗುತ್ತ ತಿಳಿದುಬರುತ್ತದೆ. ಪ್ರಾಚಾರ್ಯರಾಗಲು ಜನ ಸುಳ್ಳು ಪ್ರಬಂಧಗಳನ್ನು ಬರೆದು ಡಾಕ್ಟರೇಟು ಗಳಿಸುತ್ತಾರೆಂದು ನಮ್ಮ ಯೂನಿವರ್ಸಿಟಿಗಳಲ್ಲಿ ಗುಲ್ಲು. ನಮ್ಮ ಹಲವಾರು 'ಪ್ರತಿಭಾವಂತ' ವಿಜ್ಞಾನಿಗಳೂ ಸುಳ್ಳು ಹೇಳಿದ್ದಾರೆಂದು ವಿದೇಶದ ಸರ್ಕಾರಗಳ ಅಂಬೋಣ. ಹೀಗಾಗಿ ಸತ್ಯ ಹೇಳುವುದು ವಿಜ್ಞಾನಿಗಳಲ್ಲೂ ಸಹಜವಾಗಿ ಕಂಡುಬರುವ ವಿಚಾರ ಎನ್ನುವುದನ್ನು ನಾವು ಗುಮಾನಿಯಿಂದ ನೋಡಬೇಕಾಗುತ್ತದೆ.

ಸಾಮಾಜಿಕವಾಗಿ ನಿಷ್ಠುರ ಸತ್ಯವನ್ನು ಆಡುತ್ತಾ ಹೋಗುವುದನ್ನು ಮನಃಶಾಸ್ತ್ರಜ್ಞರೂ, ಸಮಾಜಶಾಸ್ತ್ರಜ್ಞರೂ ಒಂದು ದೋಷವೆಂದೇ ಪರಿಗಣಿಸುತ್ತಾರೆ. ಹಲವು ಮಾನಸಿಕ ತೊಂದರೆಗಳಿಂದ ಬಳಲುವವರು ಸಣ್ಣ ಸಣ್ಣ ವಿಚಾರಗಳಲ್ಲೂ ನಿಜವನ್ನೇ ನೇರವಾಗಿ ಆಡಿ ಆಡಿ ಅಸಹಜ ನಡತೆ ತೋರಿಸಿ 'ಸ್ವಲ್ಪವಾದರೂ ಸುಳ್ಳಾಡುವ ನ್ಯೂನತೆಯಿಂದ' ದೂರವಾಗುತ್ತಾರೆ.

ಅವೈಜ್ಞಾನಿಕವಾದುದನ್ನೇ ಧರ್ಮವೆಂದು ಹೇಳಿ ಹೇಳಿ ನಂಬಿಸುವ ನಮ್ಮ ಧರ್ಮದಲ್ಲಿ ಪುರಾಣಗಳಲ್ಲಿ ಕೂಡ ಸುಳ್ಳು ಹೇಳದ, ಮೋಸ ಮಾಡದ ವ್ಯಕ್ತಿಗಳಾಗಲಿ ದೇವರುಗಳಾಗಲಿ ಇಲ್ಲವೆಂದೇ ಅನ್ನಬೇಕು. ನಮ್ಮವಲ್ಲದ ಬೇರೆ 'ಪುಸ್ತಕಗಳೂ' ನಮ್ಮವಕ್ಕಿಂತ ಬಹಳ ಭಿನ್ನವಾಗಿರಲು ಸಾಧ್ಯವಿಲ್ಲ. ಸಾಮಾನ್ಯವಾಗಿ ಸಣ್ಣಪುಟ್ಟ ವಿಚಾರಗಳಲ್ಲಿ ಸುಳ್ಳು ಹೇಳಿದರೂ ಗಂಭೀರವಾದ ವಿಚಾರಗಳಲ್ಲಿ ಸುಳ್ಳು ಹೇಳಬಾರದೆಂದು ಸಮಾಜವು ಕಟ್ಟುಪಾಡು ಮಾಡುತ್ತದೆ ಎಂದು ನಾವು ಅಂದುಕೊಂಡರೂ ನಮ್ಮ ಪುರಾಣದ ಆಗುಹೋಗುಗಳು ಅದನ್ನು ಸಮರ್ಥಿಸುವುದಿಲ್ಲ. ಅಲ್ಲಿ ಸುಳ್ಳು ಹೇಳುವ ದೇವಮಾನವರೆಲ್ಲ ಮುಖ್ಯವಾದ ವಿಚಾರಗಳಲ್ಲೇ ಸುಳ್ಳು ಹೇಳುತ್ತಾರೆ ಅನ್ನುವುದು ಸತ್ಯ. ನಡತೆಯನ್ನೇ ಮುಖ್ಯವಾಗಿಸಿಕೊಂಡ ಬೌದ್ಧಧರ್ಮವನ್ನು ನಾವು ಓಡಿಸಿಬಿಟ್ಟೆವು. ಆದರೆ 'ಸತ್ಯವೊಂದೇ ಜಯಿಸುತ್ತದೆ' ಎಂದು ಲಾಂಛನವನ್ನಾಗಿ ಹೇಳಿಕೆಯನ್ನು ಮಾತ್ರ ಇಟ್ಟುಕೊಂಡಿದ್ದೇವೆ.

ಈ ಪುರಾಣ ಪುರುಷರ ವಿಷಯದಲ್ಲಿನ ಅಪವಾದವೆಂದರೆ ಅಲ್ಲಿನ ಒಂದು ಸಣ್ಣಕತೆಯ ನಾಯಕ ಹರಿಶ್ಚಂದ್ರ. ಅವನ ಸತ್ಯದ 'ಚಟ' ಒಂದು ಸಾಮಾಜಿಕ ದೋಷವೆನ್ನುವುದು ಸ್ಪಷ್ಟ. ಅವನಾಗಲಿ ಅಯನದ ರಾಮನಾಗಲಿ ಆಡುವ ಮಾತುಗಳು ಸತ್ಯವಾದರೂ ಅದಕ್ಕೆ ಆಧಾರವಾದ ಧರ್ಮವನ್ನು ನಮ್ಮ ತಲೆಮಾರಿನವರು ವಿವರವಾಗಿ ಹಿಸಿದು ಅದರ ಪೊಳ್ಳುತನಗಳನ್ನು ಬಯಲಿಗೆಳೆದಿದ್ದಾರೆ. ಇದೂ ಸತ್ಯ.

ಸುಳ್ಳು ಮನುಷ್ಯನಿಗೆ ಮಾತಿನಷ್ಟೇ ಸಹಜ. ಅದರ ಗುರಿ ಮೋಸವಷ್ಟೆ. ಆಡುವಾತ ಎಷ್ಟರ ಮಟ್ಟಿನ ಮೋಸಮಾಡಲು ಹೊರಟಿದ್ದಾನೆ ಅನ್ನುವುದು ಬೇರೆಯ ವಿಚಾರವೇ ಆಗಬೇಕು. ಪ್ರಿಯವಾದ ಸತ್ಯವನ್ನೇ ಹೇಳಬೇಕು ಅಂದರೆ ಸುಳ್ಳು ಯಾವಾಗಲೂ ಪ್ರಿಯವಾಗಿರಲು ಸಾಧ್ಯವೆಂದಾಗುತ್ತದೆ. ಏಕೆಂದರೆ ಸತ್ಯಕ್ಕೆ ಒಂದೇ ಬಣ್ಣವಾದರೆ ಇದಕ್ಕೆ ಪಂಚರಂಗಿಗಿಂತ ಹೆಚ್ಚು ಬಣ್ಣಗಳು, ಪ್ರತಿಸಲವೂ ಅದು ಬೇರೆ ಬೇರೆ ವೇಷ ತೊಟ್ಟುಬರಲು ಸಾಧ್ಯ. ಸುಳ್ಳಿನಿಂದ ಮೊದಲನೆಯದಾಗಿ ಆಡುಗನಿಗೇ ತೊಂದರೆ. ಏಕೆಂದರೆ

ಅವನು ಮೊದಲು ಹೇಳಿದ ಸುಳ್ಳನ್ನು ಯಾವಾಗಲೂ ಜ್ಞಾಪಕ ದಲ್ಲಿಡಬೇಕಾಗುತ್ತದೆ. ಇಲ್ಲದಿದ್ದರೆ ಆತನ ಮೋಸ ಬಹಳ ಬೇಗ ಜಾಹೀರಾಗಿ ಬಹಳ ಬೇಗ ಅವನ ಮಾತಿಗೆ ಬೆಲೆ ಕಳೆದುಹೋಗಿ ಅದು ಏನೇನೂ ಪ್ರಯೋಜನಕ್ಕೆ ಬರದೆ ಹೋಗುತ್ತದೆ. ಅವನು ಅದನ್ನು ನೆನಪಿಟ್ಟು ಪ್ರತಿ ಮುಂದಿನ ಸಲವೂ ಅದಕ್ಕೆ ಹೊಂದುವಂತೆಯೇ ಸುಳ್ಳುಗಳನ್ನು ಬೆಸೆಯುತ್ತಾ ಹೋಗುವ ಅವಶ್ಯಕತೆ ಉಂಟಾಗುತ್ತದೆ. ಆದ್ದರಿಂದ ಸತ್ಯ ಹೇಳುವುದು ಸುಲಭ. ಅದು ಸುಲಭವಾದ್ದರಿಂದಲೇ ಬುದ್ಧಿಶಕ್ತಿಯ ತೊಂದರೆ, ತಂತ್ರಾನಿಕೆಯ ತೊಂದರೆ ಇರದ ಮಕ್ಕಳೆಲ್ಲ ಮುಗ್ಧರಾಗಿ ಸುಳ್ಳು ಹೇಳಲು ಬಾರದೆ ಹೋಗುತ್ತಾರೆ. ಸುಳ್ಳು ಹೇಳುವ ಶಕ್ತಿ ಇಲ್ಲದವರಿಗೆ ನೀವು ಗುಟ್ಟುಗಳನ್ನು ಹೇಳುವ ಹಾಗಿಲ್ಲ. ಅಂಥವರು ಅದನ್ನು ನಿಭಾಯಿಸಲಾರರು.



ಮೊದಲ ಸಲ ಆಡುವ ಮಾತನ್ನು ನಾವು ಸಾಮಾನ್ಯವಾಗಿ ನಿಜವೆಂದೇ ಒಪ್ಪಬೇಕು. 'ಕುದುರೆ ಹಾರಿ ಹೋಯಿತು' ಎಂದಾದರೆ ಅದು ಅಸಂಬದ್ಧವಾಗುತ್ತದೆಯೇ ಹೊರತು ಸುಳ್ಳಲ್ಲ. ಅದು ಸೃಜನಶೀಲ ಯೋಚನೆಯಾಗಿರಲೂಬಹುದು, ಕವಿಯ ಮನಸೂ ಆಗಿರಬಹುದು. ಹೀಗಾಗಿ ಸುಳ್ಳು ಕೂಡ ಸೃಜನಶೀಲ ಮನಸ್ಸಿನ ಕೆಲಸವೆಂದು ಪರಿಗಣಿಸಬೇಕಾಗುತ್ತದೆ.

ಮಗು ಹುಟ್ಟಿನಿಂದಲೇ ಈ ಸೃಜನಶೀಲತೆಯ ವರವನ್ನು ಪಡೆದಿರುತ್ತದೆ. ಅದು ಬಹಳ ಸುಲಭವಷ್ಟೇ! ಮಗುವಿನದು ಬೆಳೆಯುತ್ತಿರುವ ಮಿದುಳು. ಅದರಿಂದ ಮೊದಲ ಮಾತು ಕಲಿಯುತ್ತಾನೆ. ಸುಳ್ಳು ಹೇಳಲು ಮಿದುಳಿನ ಹೆಚ್ಚು ಭಾಗ ಕೆಲಸ ಮಾಡಬೇಕಾಗುತ್ತದೆ. ಆದ್ದರಿಂದಲೂ ಅದು ತಡವಾಗಿ ಲಭಿಸುತ್ತದೆ. ಮಕ್ಕಳು ಯಾವಾಗಿನಿಂದ ಸುಳ್ಳು ಹೇಳಲು ಕಲಿಯುತ್ತಾರೆಂದು ಮನಃಶಾಸ್ತ್ರಜ್ಞರು ಗಮನಿಸಿದ್ದಾರೆ. ಮೊದಮೊದಲು ಮಗು ತಾನು ಕಲಿಯುವ ಪದವನ್ನು, ಅಂದರೆ ಗೊತ್ತಿರುವುದನ್ನು ಗೊತ್ತಿಲ್ಲದ ವಸ್ತುವಿಗೂ ಅನ್ವಯಿಸಿ ಹೇಳುವುದನ್ನು ಸುಳ್ಳು ಎನ್ನಲಾಗದು. ಈ ರೀತಿಯಲ್ಲಿ ವಿಶೇಷವಾಗಿ ಆದಾಗ 'ಛೀ ಕಳ್ಳ, ಸುಳ್ಳು ಹೇಳ್ತೀಯಾ' ಎಂದು ಅನ್ನುವಷ್ಟು ಅದು ಮನೆಯವರನ್ನು ಮುದಗೊಳಿಸಲು ಸಾಧ್ಯ.

ಸುಮಾರು ಐದು ವರ್ಷ ವಯಸ್ಸಿನ ಮಗು ತಪ್ಪುಮಾಡಿ ಅದನ್ನು ಮರೆಮಾಚಲು, ಶಿಕ್ಷೆಯ ಸಾಧ್ಯತೆಯಿಂದ ತಪ್ಪಿಸಿಕೊಳ್ಳಲು ಸುಳ್ಳು ಹೇಳುವುದನ್ನು ಶುರುಮಾಡಬಹುದು. ತಿನ್ನಬೇಡ ಎಂದರೂ ಸಿಹಿ ತಿಂಡಿಗಳನ್ನು ಕದ್ದು ತಿಂದು, ಅದನ್ನು ಮನೆಯವರು ಕಂಡುಹಿಡಿದಾಗ ಸುಳ್ಳು ಹೇಳಿ ಬಚಾಯಿಸಿಕೊಳ್ಳುವುದು ಸಾಧ್ಯವಾಗುತ್ತದೆ. ತನ್ನ ಕಡೆಗೆ ವಿಶೇಷ ಗಮನ ಸೆಳೆಯಲು ಕೂಡ ಮಕ್ಕಳು ಸುಳ್ಳು ಹೇಳಲು ಸಾಧ್ಯ. 'ಹುಲಿ ಬಂತು ಹುಲಿ'ಯ ಕಥಾನಾಯಕ ಹುಡುಗ ಮಾಡುವುದು ಇದನ್ನೇ. ಅಂತೂ ಸುಳ್ಳುಗಳನ್ನೆಲ್ಲ ಬುದ್ಧಿವಂತಿಕೆಯ ಆಟಗಳೆಂದೇ ಪರಿಗಣಿಸಬೇಕಾಗುತ್ತದೆ.

ಹರೆಯದ ನಂತರ ಮಾನಸಿಕ ತೊಂದರೆ ಎಂದೇ ಪರಿಗಣಿಸಬಹುದಾದ ಸುಳ್ಳು ಹೇಳುವ ನಡತೆಯೂ ಬೆಳೆಯಬಹುದು. ಗಂಭೀರ ವಿಷಯಗಳಲ್ಲೂ ಸುಳ್ಳು ಹೇಳಲು ಶುರು ಮಾಡಬಹುದು. ಮನಸ್ಸಿನ ತೊಂದರೆಯಾದುದರಿಂದ ಇದಕ್ಕೆ ವಿಶೇಷ ಕಾರಣ ಹುಡುಕಬೇಕಾದ್ದಿಲ್ಲ. ಅಪರೂಪಕ್ಕೆ ಹಗಲುಗನಸನ್ನೇ ನಿಜವೆಂದು ತನ್ನ ಅನುಭವವೆಂದು ಹೇಳುವುದನ್ನು ಮನಃಶಾಸ್ತ್ರಜ್ಞರು ಗುರುತಿಸಿದ್ದಾರೆ. ತಾನು ಹಾಗೆ, ಹೀಗೆ, ಹಾಗೆ ಮಾಡಿದೆ, ಅಲ್ಲಿಗೆ ಹೋಗಿದ್ದೆ, ಎಂದು ಸುಳ್ಳನ್ನು ಹೇಳುತ್ತಾ ಸಾಗುವವರೂ ಇದ್ದಾರಂತೆ !

ಸುಳ್ಳನ್ನು ನಂಬಲಾಗದಂತಿದ್ದರೆ ಅದು 'ಹಸಿ ಸುಳ್ಳಾಗಿ' ಬಿಡುತ್ತದೆ. ಅಂದರೆ ಅಲ್ಲಿ ಸಾಕಷ್ಟು ಬುದ್ಧಿವಂತಿಕೆ ಕೆಲಸ ಮಾಡಿರುವುದಿಲ್ಲ. ಸಾಮಾಜಿಕ ಮುಜುಗರದಿಂದ ತಪ್ಪಿಸಿಕೊಳ್ಳಲು ಸುಳ್ಳು ಹೇಳುವುದು ಸರ್ವೇಸಾಮಾನ್ಯ. ಇದನ್ನು ಸಮಾಜ ಒಂದು ರೀತಿಯಲ್ಲಿ ಒಪ್ಪಿ ಮನ್ನಿಸಿಬಿಡುತ್ತದೆ. ಇದರಲ್ಲಿ ಹೆಚ್ಚಾಗಿ ಮೋಸದ ಅಂಶ ಕಂಡುಬರುವುದಿಲ್ಲ. ಮೋಸವೇ ಗುರಿಯಾದಾಗ ಸುಳ್ಳು ಹೆಚ್ಚು ಆಘಾತಕರ. ಉದಾಹರಣೆಗೆ, ಸುಳ್ಳು ಹೇಳಿ ನಂಬಿಸಿ ಮದುವೆ ಮಾಡಿಸುವುದು, ಸಾಲ ತೆಗೆದು ಮೋಸಮಾಡುವುದು... ಇತ್ಯಾದಿ.

ಕನ್ನಡದಲ್ಲಿ 'ಮಾತು' ಕೊಡುವುದು, 'ಆಣೆ' ಇಡುವುದು ಮಾತಿನ ಬೆಲೆಯನ್ನು ಹೆಚ್ಚಿಸುವಂತಹ ಕೆಲಸ ಮಾಡಿದರೆ, 'ಸುಳ್ಳು' ಮಾತಿನದೇ ಭಾಗವಾಗಿ ಅದರ ಘನತೆಯನ್ನು ಕಡಿಮೆ ಮಾಡುವಂತಹ ಚಟುವಟಿಕೆಯಾಗುತ್ತದೆ. ಒಳ್ಳೆಯ ಮಾದರಿ ಸಂಸಾರಗಳಲ್ಲಿ ಮಕ್ಕಳು ಮಾತಿನ ಭಾಗವಾಗಿ ಸುಳ್ಳನ್ನು ಅರಿತರೂ 'ಬೈಗುಳ'ದಂತೆ ಅದನ್ನು ತಮ್ಮ ನಡತೆಯ ಭಾಗವಾಗಿ ಮಾಡಿಕೊಳ್ಳಲಾರರು. ಈ ರೀತಿಯಲ್ಲಿ ಸತ್ಯವಾಗಲಿ ಸುಳ್ಳಾಗಲಿ ತಲೆಮಾರುಗಳಿಗೆ ಹರಡಲು ಸಾಧ್ಯ.

**ಡಾ॥ ಪುರುಷೋತ್ತಮ ಜಿ.**
ನಂ. ೧೦೩೦/೧೩, ೧ನೇ ಮಹಡಿ, ೩೯ನೇ ಅಡ್ಡರಸ್ತೆ, ೨೫ನೇ ಮುಖ್ಯರಸ್ತೆ
೪ನೇ 'ಟಿ' ಬ್ಲಾಕ್, ಜಯನಗರ, ಬೆಂಗಳೂರು - ೫೬೦ ೦೪೧




೨೫-೧೦-೨೦೦೯ರಂದು ಬೆಂಗಳೂರಿನಲ್ಲಿ, ನವಕರ್ನಾಟಕ ಪ್ರಕಟಿಸಿರುವ 'ಆಗಸದ ಅಲೆಮಾರಿಗಳು', 'ಖಗೋಳ ವಿಜ್ಞಾನದ ಕಥೆ', 'ಆಹಾ ! ಎಷ್ಟೊಂದು ಚಟುವಟಿಕೆಗಳು', 'ಮಾಡಿ ಕಲಿ' ಮತ್ತು 'ಬಹುರೂಪಿ ಗಾಂಧಿ' – ಈ ಪುಸ್ತಕಗಳ ಲೋಕಾರ್ಪಣೆ ನಡೆಯಿತು. ಪುಸ್ತಕಗಳ ಲೇಖಕರು, ಅನುವಾದಕರು ಮತ್ತು ಬಹುಸಂಖ್ಯೆಯ ಪುಸ್ತಕ ಪ್ರಿಯರು ಭಾಗವಹಿಸಿದ್ದರು. ಶ್ರೀ ಅರವಿಂದ ಗುಪ್ತ ಅವರು ಕೆಲವು ಸಾಮಾನ್ಯ ಸಾಮಗ್ರಿಗಳಿಂದ ಮಕ್ಕಳಿಗೆ ವೈಜ್ಞಾನಿಕ ಆಟಿಕೆಗಳನ್ನು ಮಾಡುವ ಬಗ್ಗೆ ಪ್ರದರ್ಶನ ನೀಡಿದರು.

ಚಿತ್ರದಲ್ಲಿ (ಎಡದಿಂದ ಬಲಕ್ಕೆ) ಶ್ರೀ ಆರ್. ಎಸ್. ರಾಜಾರಾಮ್, ಡಾ॥ ಪಿ. ಆರ್. ವಿಶ್ವನಾಥ್, ಡಾ॥ ಬಿ. ಎಸ್. ಶೈಲಜಾ, ಪ್ರೊ॥ ಸಿ. ವಿ. ವಿಶ್ವೇಶ್ವರ, ಶ್ರೀ ಅರವಿಂದ ಗುಪ್ತ, ಶ್ರೀ ವಿ. ಎಸ್. ಎಸ್. ಶಾಸ್ತ್ರಿ, ಶ್ರೀಮತಿ ಹೆಚ್. ಎನ್ ಗೀತಾ.

# ಗ್ರಹಣಕ್ಕೆ ಸಿದ್ಧತೆ

**ನಭಾವಲೋಕನ**

**ಕ**ಳೆದ ಜುಲೈನಲ್ಲಿ ಗ್ರಹಣಕ್ಕೆಂದು ಉತ್ತರಭಾರತಕ್ಕೆ ಓಡಿ ನಿರಾಶರಾದವರೇ ಹೆಚ್ಚು. ಕರೋನಾ ಕಾಣುವ ಅದೃಷ್ಟ ಪಡೆದ ಮೈತ್ರಿ (ಮತ್ತು ಜಿ ಆರ್) ಈಗ ಇನ್ನೊಂದು ಅನುಭವಕ್ಕೆ ತಯಾರಿ ನಡೆಸಬಹುದು. ಜನವರಿ ೧೫ರಂದು ನಡೆಯುವ ಕಂಕಣ ಗ್ರಹಣ ಕೇರಳ, ತಮಿಳುನಾಡುಗಳಿಂದ ಕಾಣಲಿದೆ. ಈಗಾಗಲೇ ಅನೇಕರು ಟಿಕೆಟ್ ಮಾಡಿಸಿ ಕಾಯುತ್ತಿದ್ದಾರೆ. ರಾಮೇಶ್ವರ, ತೂತ್ತುಕುಡಿ, ಕನ್ಯಾಕುಮಾರಿ ಈ ಭಾಗದ ಊರುಗಳನ್ನು ಆರಿಸಿ; ಸುಮಾರು ೮ - ೧೦ ನಿಮಿಷ ಬಳೆಯಂತೆ ಕಾಣುವ ಸೂರ್ಯನನ್ನು ಕಂಡು ಆನಂದಿಸಿ. ಸುರಕ್ಷತೆಯ ಬಗ್ಗೆ ಮರೆಯದಿರಿ. ಬರಿಗಣ್ಣಿನಿಂದ ಅಪ್ಪಿ ತಪ್ಪಿಯೂ ನೋಡಬೇಡಿ.




ಅದಕ್ಕೂ ಮುಂಚೆ ವರ್ಷದ ಮುಕ್ತಾಯವನ್ನು ಆಚರಿಸುವಾಗ ಚಂದ್ರನನ್ನು ನೋಡಿ. ಮಸಿ ಹತ್ತಿದ ಚಂದ್ರ ನಿಮ್ಮನ್ನು ಕಂಡು ನಗಬಹುದು. ಅಂದು ಗ್ರಹಣ ಉಂಟು. ರಾತ್ರಿ ೧೦:೪೫ಕ್ಕೆ ಆರಂಭ; ಹೊಸವರ್ಷದ ಬೆಳಗಿನ ೩:೦೦ಕ್ಕೆ ಮುಕ್ತಾಯ. ಆದರೆ ಇದು ಪಾರ್ಶ್ವ ಗ್ರಹಣ ಮಾತ್ರ. ಕೆಂಪು ಬಣ್ಣದ ಚಂದ್ರ ಕಾಣುವುದಿಲ್ಲ. ಚಂದ್ರನ ಪಕ್ಕದಲ್ಲಿ ಕಾಣುವ ಮಹಾವ್ಯಾಧನನ್ನು ಸುಲಭವಾಗಿ ಗುರುತಿಸಬಹುದು. ಚಂದ್ರನಿಗೂ ಮಹಾವ್ಯಾಧನ ಭುಜಗಳಿಗೂ ನಡುವೆ ಇರುವ ನಕ್ಷತ್ರವೇ ಮೃಗಶಿರಾ. ಮಹಾವ್ಯಾಧನನ್ನು ಮೃಗ (ಸತ್ತುಬಿದ್ದ ಜಿಂಕೆ) ಎಂದು ಕಲ್ಪಿಸಿಕೊಂಡರೆ ಅದರ ತಲೆಯ ಭಾಗದಲ್ಲಿರುವ ನಕ್ಷತ್ರವೇ ಮೃಗಶಿರಾ. ಈ ತಿಂಗಳಿಗೆ ಮಾರ್ಗಶಿರ ಎಂದು ಹೆಸರಿರಬೇಕಾದದ್ದು ಇದೇ ಕಾರಣದಿಂದ. ಕ್ಯಾಲೆಂಡರ್‌ನಲ್ಲಿ ಏನಿದೆ ? ಗಮನಿಸಿ.

ಡಿಸೆಂಬರ್ ೧ರ ಸಂಜೆ ಚಂದ್ರನನ್ನು ಮರೆಯದೇ ಗಮನಿಸಿ. ಈ ಬಗ್ಗೆ ಕಳೆದ ಸಂಚಿಕೆಯಲ್ಲೇ ಸುಳಿವು ಸಿಕ್ಕಿತ್ತಲ್ಲವೇ ? ಚಂದ್ರ ಕೃತ್ತಿಕಾ ಗುಚ್ಛವನ್ನು ಒಂದೊಂದಾಗಿ ಮುಚ್ಚಿ ಸುಮಾರು ಒಂದು ಗಂಟೆ ಅಡಗಿಸಿಡುವ ಆಟ ನಡೆಯಲಿದೆ.

ಸಂಜೆ ಕಾಣುವ ಗ್ರಹ ಗುರು ಮಾತ್ರ. ಬುಧ ಗ್ರಹದ ಗರಿಷ್ಠ ಕೋನೋನ್ನತಿ ೧೮ರಂದು; ಅದೇ ದಿನ ಚಂದ್ರನ ಪಕ್ಕವೂ ಇರುವುದರಿಂದ ಹುಡುಕಬಹುದು. ಶುಕ್ರವೂ ಸೂರ್ಯನಿಗೆ ಸನಿಹವಾಗಿಯೇ ಇರುವುದರಿಂದ ಕಾಣುವುದು ಕಷ್ಟ. ಮಧ್ಯರಾತ್ರಿಯ ನಂತರ ಸ್ವಲ್ಪ ಹೊತ್ತಿಗೆ ಉದಯಿಸುವ ಶನಿ ಮತ್ತು ಮಂಗಳ ಬೆಳಗಿನ ಜಾವ ಕಾಣುತ್ತವೆ.

ಜನವರಿಯಲ್ಲಿ ಗ್ರಹಣ ಮಾತ್ರವಲ್ಲದೆ ಮಂಗಳ ಗ್ರಹವೂ ಸುದ್ದಿಯಲ್ಲಿರುತ್ತದೆ. ಅದಕ್ಕೆ ಸುಳಿವು ಎಂಬಂತೆ ೨೧ರಂದು ತಟಸ್ಥವಾಗುವುದು. ಕಳೆದ ತಿಂಗಳು ಪ್ರೆಸಿಪಿ ಎಂಬ ಗುಚ್ಛದ ಮೂಲಕ ಹಾದುಹೋದಾಗ ಮೋಡದ ಕಾರಣ ನೋಡಲು ಸಾಧ್ಯವಾಗದೇ ಇದ್ದವರಿಗೆ ಇನ್ನೊಂದು ಅವಕಾಶ ಕೊಡಲು ಒನ್ಸ್ ಮೋರ್ ನಡೆಯಲಿದೆ; ಬರುವ ತಿಂಗಳು. ಪ್ರಕಾಶ ಹೆಚ್ಚುತ್ತಿರುವುದನ್ನು ಈಗಾಗಲೇ ಅನೇಕರು ಗಮನಿಸಿರಬಹುದು.

೨೧ರಂದು ಉತ್ತರಾಯಣ. ರಾತ್ರಿಯ ಅವಧಿ ಕನಿಷ್ಠ.

೧೨-೧೩ಕ್ಕೆ ಜೆಮಿನಿಡ್ಸ್ ಎಂಬ ಉಲ್ಕಾವೃಷ್ಟಿ ಇದೆ. ಗಂಟೆಗೆ ೨೦-೩೦ ಉಲ್ಕೆಗಳು ಬೀಳುವ ಸಾಧ್ಯತೆ ಉಂಟು.

ಸಂಜೆಯ ಆಕಾಶದಲ್ಲಿ ಗುರು ಗ್ರಹದ ಹೊರತಾಗಿ ಕಳೆದ ತಿಂಗಳವರೆಗೂ ಬೇರೇನೂ ಪ್ರಕಾಶಮಾನಕಾಯ ಇರಲಿಲ್ಲ. ಈ ಕೊರತೆಯನ್ನು ಪೂರಯಿಸಲು ಪೂರ್ವದಲ್ಲಿ ಮಹಾವ್ಯಾಧ ಕಾಣಿಸಿದೆ. ಚಂದ್ರನಿಲ್ಲದಾಗ ಆಕಾಶಗಂಗೆಯ ಈ ಭಾಗವನ್ನು ಗುರುತಿಸುವ ಪ್ರಯತ್ನ ಮಾಡಬಹುದು. ಇನ್ನೊಂದು ಭಾಗ ಉತ್ತರದ ಗರುಡ, ರಾಜಹಂಸ ಮತ್ತು ಕುಂತಿ ಈ ಪುಂಜಗಳ ಮೂಲಕ ಹಾದುಹೋಗುವುದು.

**ಖಗೋಳ ದಿನಚರಿ**

೧ ಚಂದ್ರ ಕೃತ್ತಿಕಾ ಜೋಡಿ* (ಆಚ್ಛಾದನೆ ಸುಮಾರು ೦೬:೩೦ ರಿಂದ ೦೭:೩೦ರವರೆಗೆ)
೨ ಹುಣ್ಣಿಮೆ ೧೩:೦೦ಕ್ಕೆ
೪ ಚಂದ್ರ - ಭೂಮಿ ನಡುವೆ ಕನಿಷ್ಠ ದೂರ
೬ ಮಂಗಳ ಚಂದ್ರ ಜೋಡಿ*
೯ ಚಾಂದ್ರಮಾಸದ ಕೊನೆಯ ಪಾದ
೧೨-೧೩ ಜೆಮಿನಿಡ್ಸ್ ಉಲ್ಕಾವೃಷ್ಟಿ
೧೫ ಚಂದ್ರ - ಶುಕ್ರ ಜೋಡಿ
೧೬ ಅಮಾವಾಸ್ಯೆ ೧೭:೩೨ಕ್ಕೆ
೧೮ ಚಂದ್ರ - ಬುಧ ಜೋಡಿ; ಬುಧ ಗ್ರಹದ ಗರಿಷ್ಠ ಕೋನೋನ್ನತಿ*
೨೦ ಚಂದ್ರ - ಭೂಮಿ ನಡುವೆ ಗರಿಷ್ಠ ದೂರ; ಚಂದ್ರ - ಗುರು ಜೋಡಿ*
೨೧ ಮಂಗಳ ತಟಸ್ಥ ; ಉತ್ತರಾಯಣ ರಾತ್ರಿ ೧೧:೧೭ಕ್ಕೆ
೨೪ ಚಾಂದ್ರಮಾಸದ ಮೊದಲ ಪಾದ
೩೧ ಹುಣ್ಣಿಮೆ ಪಾರ್ಶ್ವಗ್ರಹಣ; ೧೦:೪೫ರಿಂದ ಮರುಬೆಳಗ್ಗೆ ೩:೦೦ರವರೆಗೆ*

(* ಛಾಯಾಗ್ರಹಣಕ್ಕೆ ಸದವಕಾಶ)

ಡಾ|| ಬಿ. ಎಸ್. ಶೈಲಜಾ
ಜವಹರಲಾಲ್ ನೆಹರೂ ತಾರಾಲಯ, ಹೈಗ್ರೌಂಡ್ಸ್
ಬೆಂಗಳೂರು - ೫೬೦ ೦೦೧


ಗುರು ಮತ್ತು ಚಂದ್ರ ೧೨ರ ಸಂಜೆ



ಜನವರಿ ೧೫ರಂದು ಕಂಕಣಗ್ರಹಣವನ್ನು ನೋಡಬಹುದಾದ ಭಾಗಗಳು

ಹೊಸ ಓದು



## ಅಂತಿಮ ಜ್ವಾಲೆ

(ಕಾದಂಬರಿ)

ಮೂಲ : ಹಿಮಾಂಶು ಜೋಶಿ; ಕನ್ನಡಕ್ಕೆ : ಡಾ॥ ಜೆ. ಎಸ್. ಕುಸುಮ ಗೀತ

**ಪುಟ : ೯೨ ಬೆಲೆ : ರೂ. ೫೫**

**ನವಕರ್ನಾಟಕ ಪ್ರಕಾಶನ,**

ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ ೫೧೫೯, ಬೆಂಗಳೂರು - ೧

ಕಾದಂಬರಿಯ ಈ ಪಾತ್ರ ಕಲ್ಪನೆಯದೇನೂ ಅಲ್ಲವೆಂದೂ, ಪರ್ವತ ಪ್ರದೇಶಗಳ ಜನಜೀವನವನ್ನು ತಾನು ಕಣ್ಣಾರೆ ಕಂಡು ಒಂದು ಹೆಣ್ಣಿನ ಕಥೆಯನ್ನು ನಮಗೆ ಹೇಳಿರುವುದಾಗಿಯೂ ಕೃತಿಯ ಲೇಖಕ ಹಿಮಾಂಶು ಜೋಶಿ ನಿವೇದಿಸಿಕೊಂಡಿದ್ದಾರೆ. ಅಷ್ಟೇ ಅಲ್ಲದೆ ಆಕೆ ಅನುಭವಿಸಿದ ಯಾತನೆಯ ಸತ್ಯಕಥೆಯನ್ನು ಇದ್ದಂತೆಯೇ ಹೇಳಿದ್ದರೆ ಯಾರಿಗೂ ನಂಬಿಕೆ ಬರದಂತಿದ್ದುದರಿಂದ ಆ ಹೆಣ್ಣಿನ ಕಷ್ಟಗಳನ್ನು ಇವರು ಕಡಿಮೆಮಾಡಿ ಕಥೆ ಬರೆದಿರುವುದಾಗಿ ಹೇಳಿದ್ದಾರೆ. ಜೀವನದುದ್ದಕ್ಕೂ ಹಿಂಸೆ, ಆಕ್ರಮಣಗಳಿಗೆ ನಿರಂತರ ಬಲಿಯಾಗಿ ತಡೆದುಕೊಳ್ಳುವುದು ಅಸಾಧ್ಯವಾದಾಗ ಹೆಮ್ಮಾರಿಯಂತೆ ಆಕ್ರೋಶದಿಂದ ಊರಿಗೇ ಕೊಳ್ಳಿಯಿಟ್ಟು ಸೇಡು ತೀರಿಸಿಕೊಳ್ಳುತ್ತಾಳೆ ಗೋಮತಿ. ದ್ವೇಷ + ದ್ವೇಷಗಳಿಂದ ಸರ್ವನಾಶ ಆಗುವುದನ್ನು ಈ ಕಥೆ ಹೇಳುತ್ತದೆ.



## ಮಾಯಾ ಪೆಟ್ಟಿಗೆ

(ಕವಿತೆಗಳು)

ಜ್ಯೋತಿ ಗುರುಪ್ರಸಾದ್

**ಪುಟ : xx + ೧೬೨**

**ಬೆಲೆ : ರೂ. ೯೦**

**ಅಧ್ಯಯನ ಮಂಡಲ,**

೧೩/೮೫, ಆರ್. ವಿ. ರಸ್ತೆ, ಬಸವನಗುಡಿ, ಬೆಂಗಳೂರು - ೫೬೦ ೦೦೪

ಕವಿತೆ ಹೆಣೆಯಬೇಕಾದರೆ ಗಾಢವಾದ ಭಾವನೆಗಳೇ ಬಂಡವಾಳ. ಭಾವಶ್ರೀಮಂತಿಕೆಯಿಂದ ಕೂಡಿದ ಕವಿತೆಯು ಹುಟ್ಟು ಪುಟ್ಟ ಮಗುವಿನಂತೆ, ಅದರ ನಗುವಿನಂತೆ. ಜ್ಯೋತಿಯವರು ಬದುಕಿನ ಪ್ರತಿಕ್ಷಣವನ್ನೂ ವ್ಯರ್ಥವಾಗಿಸದೆ ಕವನದ ಮಾಲೆಯನ್ನೇ ನೇಯ್ದಿದ್ದಾರೆ. ಅಯ್ಯೋ ಈ ಬದುಕಿನಲ್ಲೇನಿದೆ – ಎನ್ನುವವರಿಗೆ, ಛೆ! ಎಲ್ಲವೂ ಇಲ್ಲೇ ಇವೆಯಲ್ಲಾ, ಸರಿಯಾಗಿ ನೋಡಿ – ಎನ್ನುತ್ತಿದ್ದಾರೆ ಜ್ಯೋತಿ. ಸಂಕಲನವನ್ನು ಅರ್ಪಣೆ ಮಾಡಿದ್ದು ಯಾರಿಗೆ ಗೊತ್ತೆ? ''ಬದುಕಿನ ನೋವುಗಳನ್ನು ಮೌನವಾಗಿ ನುಂಗಿ, ಸುಟ್ಟು ಬೂದಿಯಾದ ಭಾವನೆಗಳನ್ನು ಹಾಡುಗಳನ್ನಾಗಿ ಹೊರ ಕಳುಹಿಸಿದ'' ತೀರಿಹೋಗದ ಅಮೃತಾ ಪ್ರೀತಮ್‌ಗೆ. ಕಣ್ಣೀರಿನಿಂದಾದದ್ದೆಲ್ಲ ನಾಶವಾಗುವುದಿಲ್ಲ ಎಂಬುದು ಜ್ಯೋತಿಯವರ ನಂಬಿಕೆ. ಅಶೋಕವನ, ಅಪ್ಪ-೨, ಬೀಸಣಿಗೆ ಈ ಕವನಗಳು ಗಮನ ಸೆಳೆಯುತ್ತವೆ.

## ರಂಗರೂಪಕ

ಲಿಂಗದೇವರು ಹಳೆಮನೆ

**ಪುಟ : ೧೪೧ + ೭** **ಬೆಲೆ : ರೂ. ೯೦**

**ನಿರಂತರ ಪ್ರಕಾಶನ,** ಕಾಂತರಾಜೇ ಅರಸ್ ರಸ್ತೆ, ಸರಸ್ವತಿಪುರಂ, ಮೈಸೂರು - ೯

ಸುಮಾರು ಐವತ್ತು-ಅರವತ್ತರ ದಶಕದಲ್ಲಿ ನಾಟಕಗಳು ಭಾರಿ ಜನಪ್ರಿಯತೆ ಗಳಿಸಿದ್ದು, ಅದ್ಭುತವೆನಿಸುವಂಥ ಮನರಂಜನೆಯನ್ನು ನೀಡಿದ್ದವು. ಕ್ರಮೇಣ ಅವು ಶ್ರೀಸಾಮಾನ್ಯನ ಅಭಿರುಚಿಗೆ ತಕ್ಕಂತೆ ಬದಲಾಗುತ್ತಲೂ, ನಾಟಕ ಕಂಪೆನಿಗಳ ಯಥ್ವಾತಥ್ವಾ ಪ್ರಯೋಗಗಳಿಂದಲೂ ಯಾಕೋ ಏನೋ ಹಿನ್ನಡೆ ಸಾಧಿಸುತ್ತಾ ಬಂದವು. ಪೌರಾಣಿಕ ನಾಟಕಗಳು ಹಿಂದೆ ಸರಿದು ನಮ್ಮ ಕಾಲದ ವಸ್ತು-ಚಿತ್ರಣವನ್ನು ಕೊಡುವ ಆಧುನಿಕ ನಾಟಕಗಳು ವಿಜೃಂಭಿಸತೊಡಗಿದುವು. ಈ ಎಲ್ಲ ವಿದ್ಯಮಾನಗಳನ್ನು ಎಚ್ಚರಿಕೆಯಿಂದ ಗಮನಿಸುತ್ತಾ ಬಂದವರು ಹಾಗೂ ನಾಟಕ-ರಂಗಭೂಮಿಗಳಲ್ಲಿ ವಿಶೇಷ ಕಾಳಜಿ ಇರಿಸಿಕೊಂಡವರು ಶ್ರೀ ಲಿಂಗದೇವರು ಹಳೆಮನೆ. ಪ್ರಸಿದ್ಧ ಸಾಹಿತಿಗಳು ಬರೆದಿರುವ ನಾಟಕಗಳನ್ನು ವಿಶ್ಲೇಷಿಸುತ್ತಾ, ಅವರು ನಾಟಕಗಳಲ್ಲಿನ ಉತ್ತಮಾಂಶಗಳನ್ನು ನಮಗೆ ಮನವರಿಕೆ ಮಾಡಿಕೊಡುತ್ತ ಈ ಲೇಖನಗಳಲ್ಲಿ ಹೊಸ ರಂಗಪ್ರಯೋಗಗಳ ಬಗ್ಗೆ ಸಲಹೆ ನೀಡುತ್ತಿದ್ದಾರೆ. ಅವರ ಬರಹಗಳಿಗೆ ಜಾಗತಿಕ ಮಟ್ಟದಲ್ಲಿ ಪ್ರಸಿದ್ಧಿ ಪಡೆದ ರಂಗಭೂಮಿಯವರೆಗೂ ವಿಸ್ತಾರವಿದ್ದರೂ ಇಲ್ಲಿ ಕನ್ನಡದ ಆಧುನಿಕ ರಂಗಭೂಮಿ, ನಾಟಕಗಳ ಬಗ್ಗೆ ಇರುವ ಲೇಖನಗಳನ್ನು ಆಯ್ಕೆ ಮಾಡಿದೆ. ನಾಟಕಕಾರರು, ನಿರ್ದೇಶಕರುಗಳ ಬಗ್ಗೆ ಕೆಲವು ವಿವರಗಳಿವೆ.



## ಆತಂಕವಾದಿಗಳು (ಪುರಸ್ಕೃತ ನಾಟಕ)

ಜಿ. ಜಿ. 'ಹರಿಜಿತ್'

**ಪುಟ : ೯೬ + ೧೪** **ಬೆಲೆ : ರೂ. ೯೦**

**ಸಪ್ತಲಾ ಪ್ರಕಾಶನ,** ಪೊ. ಬಾ. ನಂ. ೮೫೧೭, ಬೆಂಗಳೂರು - ೫೬೦ ೦೮೫

ಇಂದು ದೇಶದೆಲ್ಲೆಡೆ ಅತ್ಯಾಧುನಿಕ ಶಸ್ತ್ರಾಸ್ತ್ರಗಳನ್ನು ಹೆಗಲಿಗೇರಿಸಿ ತಮ್ಮ ಅಡಗು ತಾಣಗಳಲ್ಲಿ ಕಾರ್ಯ ಚಟುವಟಿಕೆ ನಡೆಸುತ್ತ ಭಾರತದಿಂದ ಪ್ರತ್ಯೇಕವಾಗಹೊರಟ ಅಸಂಖ್ಯಾತ ಗುಪ್ತ ಸಂಘಟನೆಗಳಿವೆ. ದೇಶದ ಈಶಾನ್ಯ ಭಾಗದ ಗಡಿರಾಜ್ಯಗಳ ಆತಂಕವಾದಿಗಳತ್ತ ಈ ನಾಟಕ ಬೊಟ್ಟುಮಾಡಿದ್ದು, ಉಗ್ರನಾಗಿ ರೂಪುಗೊಳ್ಳಲು ನಮ್ಮ ವ್ಯವಸ್ಥೆಯಲ್ಲಿನ ನೀರು-ಗೊಬ್ಬರಗಳತ್ತಲೂ ನಮ್ಮ ಗಮನ ಸೆಳೆಯುತ್ತದೆ. ಬ್ರಿಟಿಷರ ಕಾಲದಿಂದಲೇ ಅಸಮಾಧಾನದ ಕಿಡಿ ಹೊತ್ತಿಸಿಕೊಂಡ ಇವರು ಹಿಂಸೆಯನ್ನೇ ತಮ್ಮ ಪ್ರಬಲ ಅಸ್ತ್ರವನ್ನಾಗಿಸಿದ್ದಾರೆ. ಹಿಂಸೆ ಪ್ರಾರಂಭವಾಗುವುದೆಲ್ಲಿ? ಶಂಕಿತನೆಂದು ಎಳೆತಂದ ನಿರಪರಾಧಿಯೊಬ್ಬ ಪೋಲೀಸರ ಭೀಕರ ಟಾರ್ಚರ್‌ಗೆ ಬಲಿಯಾಗಿ 'ಉಗ್ರ' ಹೌದೆಂದು ಒಪ್ಪಿ ಹೊರಬಂದಾಗ ನಿಜವಾದ ಉಗ್ರನಾಗಿ ಮಾರ್ಪಡುತ್ತಾನೆ. ಅವನಿಗೆ ಮತ್ತೆ ನಾಗರಿಕ ಜೀವನ ಇಲ್ಲ! ಸಂಘಟನೆ ಬಲಗೊಳ್ಳುವುದೇ ಹೀಗೆ. ಅವರೆಲ್ಲ ಪೋಲೀಸರ ಮಿತ್ರರಾಗಿರುತ್ತಾರೆಯೇ? ಪೋಲೀಸ್ – ಮಿಲಿಟರಿಯನ್ನೂ ಮೀರಿ ಒಟ್ಟಾಗಿ ಕಾಳಗಕ್ಕಿಳಿಯುತ್ತಾರೆ. ಶಸ್ತ್ರಾಸ್ತ್ರ? ಬೆಂಕಿಬಿದ್ದ ಮನೆ ಬಳಿ ಚಳಿಕಾಯಿಸುವವರಿಗೇನು ಕಮ್ಮಿ? – ಇದಿಷ್ಟು ನಾಟಕದ ಸಾರಾಂಶ. ಅಲ್ಲದೆ ಇನ್ನೂ ಅನೇಕ ಸೂಕ್ಷ್ಮ ವಿಚಾರಗಳಿವೆ.



ಬ್ಯಾರನ್ ಇನ್ ದಿ ಟ್ರೀಸ್

## ಕೊಸಿಮೊ (ಕಾದಂಬರಿ)

ಮೂಲ : ಇಟಾಲೊ ಕಾಲ್ವಿನೊ; ಅನು : ಕೆ. ಪಿ. ಸುರೇಶ

**ಪುಟ : ೨೧೬** **ಬೆಲೆ : ರೂ. ೧೦೦**

**ಅಭಿನವ,** ೧೭/೧೮-೨, ಮೊದಲನೆಯ ಮುಖ್ಯರಸ್ತೆ, ಮಾರೇನಹಳ್ಳಿ, ವಿಜಯನಗರ, ಬೆಂಗಳೂರು - ೫೬೦ ೦೪೦

ಇದೊಂದು ವಿಶಿಷ್ಟವಾದ ಇಟಾಲಿಯನ್ ಕಾದಂಬರಿ. ತನ್ನ ಹಟ ಮತ್ತು ಪ್ರತಿಜ್ಞೆಯ ತೀವ್ರತೆಯಿಂದಾಗಿ ದಟ್ಟವಾಗಿ ಹರಡಿದ್ದ ಮರಗಳ ಮೇಲೆಯೇ ತನ್ನ ಜೀವಿತಾವಧಿಯನ್ನು ಕಳೆಯುವ ಕಥಾನಾಯಕನೊಬ್ಬ ನಮಗಿಲ್ಲಿ ಪರಿಚಯವಾಗುತ್ತಾನೆ. ಕಾದಂಬರಿಯುದ್ದಕ್ಕೂ ನಾವು ಅವನಿಗೆ ಮುಖಾಮುಖಿ. ನಮ್ಮ ಕಾಲ ದೇಶಕ್ಕೆ ಸ್ವಲ್ಪ ಅಪರಿಚಿತವಾದ ಕಾಲ್ಪನಿಕ ಪಾತ್ರವೊಂದರ ಮೂಲಕ ಲೇಖಕ ತಾನು ಹೇಳಬೇಕಾದುದನ್ನು ಹೇಳುತ್ತಾನೆ. ಲೇಖಕ ಇಟಾಲೊ ಕಾಲ್ವಿನೊ ಸೃಷ್ಟಿಸಿದ 'ಕೊಸಿಮೊ' ಪಾತ್ರ ನಮ್ಮೆಲ್ಲರನ್ನೂ ದಂಗುಬಡಿಸುವಂತೆ ಅತಿರೇಕ ವಾಸ್ತವದಲ್ಲಿ ಬೆಳೆದು, ಎಂದೂ ನೆಲಕ್ಕೆ ಕಾಲೂರದೆ ಆದರೆ – ನೆಲದ ಮೇಲಿನ ಎಲ್ಲರೊಂದಿಗೂ ವ್ಯವಹರಿಸುತ್ತ ಸಾಗುತ್ತದೆ. ಒಂದು ಅತಿರೇಕದ ಶಿಸ್ತು ಇನ್ನೊಂದು ಅತಿರೇಕವನ್ನು ಸೃಷ್ಟಿಸುತ್ತದೆಂಬುದು ಸುಳ್ಳಲ್ಲ. ಎರಡು ಮಹಾಯುದ್ಧಗಳ ಸಂದರ್ಭ, ದೇಶ ದೇಶಗಳ ನಡುವಿನ ಅಂತರ್ಯುದ್ಧದ ಹಿನ್ನೆಲೆ ಈ ಕೃತಿಗಿದೆ. ಕೃತಿಯ ಲೇಖಕ ಕಾಲ್ವಿನೋ ಬಹು ಪ್ರಸಿದ್ಧಿಯ ಲೇಖಕ.

– **ಇಂದಿರಾಕುಮಾರಿ**

೩೪/೧೧, ೨ನೇ ಕ್ರಾಸ್, ಟಾಂಕ್ ಬ್ರೆಯಿಂಗ್ ಸಮೀಪ, ಯಶವಂತಪುರ, ಬೆಂಗಳೂರು - ೨೨




ಮಲಯಾಳಂ ಮೂಲ :
**ಇ. ಹರಿಕುಮಾರ್**
ಕನ್ನಡಕ್ಕೆ :
**ಪಾರ್ವತಿ ಜಿ. ಐತಾಳ್**


ಗುಡ್ಡದ ಇಳಿಜಾರಿನಲ್ಲಿದ್ದ ಆ ನೀರಿನ ಝರಿಯ ಬಗ್ಗೆ ರಾಮಚಂದ್ರ ಮಗನಿಗೆ ವಿವರಿಸಿದ. ಮಗ ಹುಟ್ಟುವುದಕ್ಕೆ ಮೊದಲು ತಾನು ಅಮ್ಮನ ಜತೆಗೆ ಅಲ್ಲಿಗೆ ಹೋದ ಕಥೆ ಹೇಳಿದ. ಮೊಣಕಾಲವರೆಗಿದ್ದ ತಿಳಿಯಾದ ನೀರು. ತಳದಲ್ಲಿ ಹಳದಿ ಬಣ್ಣದ ಮರಳು ಮತ್ತು ಉರುಟಾದ ಬೆಣಚುಕಲ್ಲುಗಳು. ಕೆಲವೆಡೆ ಕಪ್ಪು ಬಣ್ಣದ ಪುಟ್ಟ ಬಂಡೆಕಲ್ಲುಗಳು, ಅವುಗಳ ನಡುವೆ ಈಜಾಡುತ್ತಿದ್ದ ಚಿಕ್ಕಚಿಕ್ಕ ಕೆರೆ ಮೀನುಗಳು. ಅವುಗಳನ್ನು ಹಿಡಿಯಲೆತ್ನಿಸಿದಾಗ ಅಮ್ಮ ನೀರಿಗೆ ಜಾರಿಬಿದ್ದು ಸೀರೆ ಒದ್ದೆಯಾಗಿಬಿಟ್ಟಿತ್ತು.

ಶಿಶುಸಹಜವಾದ ಕುತೂಹಲದಿಂದ ನಡುನಡುವೆ ಕೆಲವು ಪ್ರಶ್ನೆಗಳನ್ನು ಹಾಕುತ್ತ ವಿಜು ಎಲ್ಲವನ್ನೂ ಕೇಳಿಸಿಕೊಂಡ.

ಎಷ್ಟು ಚಿಕ್ಕ ಮೀನುಗಳು ? ಇಷ್ಟೇ ?

ಅವನು ಬೆರಳುಗಳನ್ನಗಲಿಸಿ ಗಾತ್ರ ತೋರಿಸಿ ಕೇಳಿದ.

''ಹೌದು'' ರಾಮಚಂದ್ರನೆಂದ ''ಕೆಲವು ಸ್ವಲ್ಪ ದೊಡ್ಡವು.''

ವಿಜು ಯೋಚಿಸುತ್ತಿದ್ದಾನೆ. ಝರಿಯ ಬಗ್ಗೆ ಮತ್ತು ಮೀನುಗಳ ಬಗ್ಗೆ ಮನಸ್ಸಿನಲ್ಲೇ ಚಿತ್ರಿಸಿಕೊಳ್ಳುತ್ತಿದ್ದಾನೆ. ಬಹಳ ಸ್ಪಷ್ಟವಾದ ಒಂದು ಚಿತ್ರವನ್ನು ಕಲ್ಪಿಸಿಕೊಳ್ಳುವುದು ಅವನಿಂದ ಸಾಧ್ಯವಿಲ್ಲವೆಂದು ರಾಮಚಂದ್ರನಿಗನ್ನಿಸಿತು. ಐದು ವರ್ಷದ ಬಾಲಕ ಅವನು. ಇದುವರೆಗೆ ಒಂದೂ ಝರಿ ನೋಡಿಲ್ಲ. ಅಲ್ಲದೆ ತಾನು ಇನ್ನೂ ಎಲ್ಲವನ್ನೂ ಹೇಳಿ ಮುಗಿಸಿಲ್ಲ. ಹೇಳದೆ ಉಳಿದಿರುವುದು ಹೇಳಿದ್ದಕ್ಕಿಂತ ಹೆಚ್ಚು. ಶುಭ್ರವಾದ ಆಗಸದ ಬಗ್ಗೆ, ಸುತ್ತಲಿನ ಹಸಿರು ಮರಗಳ ಬಗ್ಗೆ, ಗುಡ್ಡವನ್ನು ಹಾದು ತಮ್ಮನ್ನು ಬಳಸಿದ ತಂಗಾಳಿಯ ಬಗ್ಗೆ ಅವನು ಏನೂ ಹೇಳಿಲ್ಲ. ಹಾಗೆಯೇ ರಾಗಿಣಿಯ ಕಣ್ಣುಗಳಲ್ಲಿ ತುಂಬಿ ತುಳುಕುತ್ತಿದ್ದ ಉತ್ಸಾಹ ಮತ್ತು ಮಿಂಚುತ್ತಿದ್ದ ತುಂಟತನದ ಬಗ್ಗೆಯೂ.

ಅವೆಲ್ಲವೂ ನಡೆದದ್ದು ಏಳೋ ಎಂಟೋ ವರ್ಷಗಳ ಹಿಂದೆ. ಆದರೂ ಆ ನೆನಪುಗಳು ನಿತ್ಯಹರಿದ್ವರ್ಣದ ವೃಕ್ಷದಂತೆ ಈಗಲೂ ಜೀವಂತವಾಗಿ ನಿಂತಿವೆ, ದೈನಂದಿನ ಕೆಲಸಗಳ ಮರೆಯಲ್ಲಿ ಅವು ಅಡಗಿನಿಲ್ಲುತ್ತವೆ ಎಂದು ಮಾತ್ರ. ಇವತ್ತೀಗ ಅವನ್ನೆಲ್ಲ ನೆನಪಿಸಿಕೊಳ್ಳಲು ಏನು ಕಾರಣ ? ಬೆಳಗ್ಗೆ ಎದ್ದು ಹಜಾರಕ್ಕೆ ಬಂದಾಗ ಕಚಗುಳಿಯಿಟ್ಟ ತಂಗಾಳಿಯೆ ? ಜಗುಲಿಯ ಒಂದು ಬದಿಯಲ್ಲಿ ಸೋಫಾದ ಮೇಲುಗಡೆ ಇಟ್ಟಿದ್ದ ಅಕ್ವೇರಿಯಂನಿಂದ ಗುಳ್ಳೆಗಳೇಳುತ್ತಿರುವ ಶಬ್ದವನ್ನು ಕೇಳಿದಾಗಲೆ ? ಆ ಜುಳು ಜುಳು ಶಬ್ದ ಝರಿಯ ನೀರು ಬಂಡೆಗಳೆಡೆಯಿಂದ ಹರಿಯುತ್ತಿದ್ದಂತೆ ಅನ್ನಿಸಿದೆ. ಎಷ್ಟೋ ಬಾರಿ ಆತ ರಾತ್ರಿ ತುಂಬ ಹೊತ್ತು ಸೋಫಾದ ಮೇಲು ಬದಿಯಿಂದ ಒಂದು ಝರಿ ಹರಿಯುವ ಶಬ್ದವನ್ನು ಆಲಿಸುತ್ತ ಸುಮ್ಮನೆ ಮಲಗುವುದಿದೆ. ಮಗ ಸೊಳ್ಳೆಪರದೆಯೊಳಗೆ ಮುರುಟಿ ಮಲಗಿ ನಿದ್ರಿಸುತ್ತಾನೆ. ಎರಡು ವರ್ಷಗಳ ಹಿಂದೆ ಅವನು ತನ್ನ ಪುಟ್ಟ ಕೈಗಳಿಂದ ಅಮ್ಮನನ್ನು ಅಪ್ಪಿಕೊಂಡು ಮಲಗಿ ನಿದ್ರಿಸುತ್ತಿದ್ದುದು ರಾಮಚಂದ್ರನಿಗೆ ನೆನಪಾಗುತ್ತದೆ. ಆತ ರಾಗಿಣಿಯ ಬಗ್ಗೆ ನೆನಪಿಸಿಕೊಂಡ. ನಮಗೆ ನಮ್ಮದೇ ಆದ ಒಂದು ಸ್ವಂತ ಮನೆ ಬೇಕು - ಅವಳು ಹೇಳುವುದಿತ್ತು. ತುಂಬ ದೊಡ್ಡದೇನೂ ಬೇಡ. ಎರಡು ಮಲಗುವ ಕೋಣೆಗಳು. ಆಮೇಲೆ ಕುಳಿತುಕೊಳ್ಳಲು ಮತ್ತು ಊಟ ಮಾಡಲು ಒಂದು ಕೋಣೆ, ಅಡಿಗೆಮನೆ, ಅಷ್ಟು ಸಾಕು. ಅಂಥ ಒಂದು ಮನೆಯಲ್ಲಿರಬೇಕೆಂದು ಆಸೆಯಾಗುತ್ತದೆ. ಅವಳು ಆಸೆಪಟ್ಟಿದ್ದ ಮನೆ ಈಗ ಸಿದ್ಧವಾಗಿದೆ. ಅಲ್ಲಿ ವಾಸ ಮಾಡಬೇಕೆಂದು ಹೇಳಿದವಳು ಮಾತ್ರ ಇಲ್ಲ. ಸಂಕಟಪಡುತ್ತ ಆತ ಮಲಗುತ್ತಾನೆ. ರಾತ್ರಿಯ ನಿಗೂಢ ಸದ್ದುಗಳನ್ನು ಗಮನಿಸುತ್ತಾನೆ. ಆ ಎಲ್ಲ ಶಬ್ದಗಳೂ ಕೊನೆಯಲ್ಲಿ ಒಂದು ಝರಿಯ ಶಬ್ದದೊಂದಿಗೆ ಲೀನವಾಗುತ್ತವೆ. ಆ ಶಬ್ದವು ಆತನಿಗೆ ಸಮಾಧಾನ ನೀಡುತ್ತದೆ. ಅದರ ನೆನಪಿನಲ್ಲಿ ಆತ ಖುಷಿಪಡುತ್ತ ನಿದ್ರಿಸುತ್ತಾನೆ.

ಬೆಳಗಾದಾಗ ವಾತಾವರಣ ಬದಲಾಗುತ್ತದೆ. ವಿಜು ಎದ್ದುಬಂದಾಗ ಮನೆಯಲ್ಲಿ ಉಲ್ಲಾಸ ತುಂಬಿಕೊಳ್ಳುತ್ತದೆ. ಮೊದಲಾಗಿ ಅವನು ವಿಚಾರಿಸುವುದು ತನ್ನ ಮೀನುಗಳ ಬಗ್ಗೆ. ಗ್ಲಾಸ್ ಟ್ಯಾಂಕಿನ ಬಳಿ ಬಂದು ಒಳಗಿನ ಅದ್ಭುತಲೋಕವನ್ನು ಕುತೂಹಲದಿಂದ ನೋಡುತ್ತ ನಿಲ್ಲುತ್ತಾನೆ. ಅವನು ನಿಂತಾಗ ಅವನ ತಲೆ ಟ್ಯಾಂಕಿನ ಅರ್ಧದವರೆಗೆ ಮಾತ್ರ ತಲುಪುತ್ತದೆ. ಮೀನುಗಳು ಅವನು ನಿಂತಲ್ಲಿಗೆ ಬಂದು ಪ್ರಶ್ನಾರ್ಥಕ ಭಾವದಿಂದ ಅವನನ್ನು ನೋಡುತ್ತವೆ.

ಆಮೇಲೆ ಟ್ಯಾಂಕಿನೊಳಗಿನ ತಾತ್ಕಾಲಿಕ ಸ್ಥಿತಿಯ ಬಗ್ಗೆ ಒಂದು ರನ್ನಿಂಗ್ ಕಮೆಂಟರಿ. ಪೇಪರೋದುತ್ತ ಆತ ಹೂಂಗುಟ್ಟುತ್ತಾನೆ.

ಅಪ್ಪಾ, ಏಂಜಲ್ ಫಿಶ್ ಗೋಲ್ಡ್ ಫೀಶ್‌ಅನ್ನು ಸಿಕ್ಕಾಪಟ್ಟೆ ಅಟ್ಟಿಸುತ್ತಿದೆಯಲ್ಲ? ಪಾಪ, ಗೋಲ್ಡ್‌ಫಿಶ್ !

# ಡಾಕ್ಟರ್ ಗುರಾಮಿಯ ಆಸ್ಪತ್ರೆ

ಆತ ಫಕ್ಕನೆ ಮಾತು ನಿಲ್ಲಿಸಿದ. ವಿಜುವಿನ ಮುಖ ಕಪ್ಪಾಗುವುದನ್ನೂ ಕಣ್ಣುಗಳಲ್ಲಿ ನೀರು ತುಂಬಿಕೊಳ್ಳುವುದನ್ನೂ ಆತ ನೋಡಿದ. ಆ ಕಣ್ಣೀರನ್ನು ಒರೆಸಲು ಅಸಮರ್ಥನಾಗಿದ್ದ. ಸಮಾಧಾನದ ಮಾತುಗಳೊಂದನ್ನೂ ಹೇಳಲಾಗದೆ ಆತ ಮಗನನ್ನು ಸುಮ್ಮನೆ ಎದೆಗವಚಿಕೊಂಡ. ಆತನ ಕಣ್ಣುಗಳೂ ತುಂಬಿಕೊಳ್ಳುತ್ತಿದ್ದವು. ಬಿಕ್ಕಳಿಸುವುದರ ಮಧ್ಯೆ ಅವನೆಂದ,
''ಅಪ್ಪಾ, ನಾವು ಈ ಮನೆ ಬಿಟ್ಟು ಹೋಗುವುದು ಬೇಡ. ನಾವು ಇಲ್ಲೇ ಇರೋಣ.''

ಇದು ಯಾಕೆ ಏಂಜಲ್ ಫಿಶ್ಶಿನ ಹತ್ತಿರಕ್ಕೆ ಓಡುವುದು ?

ಚಿನ್ನದ ಮೀನುಗಳೆಂದರೆ ವಿಜುಗೆ ತುಂಬ ಇಷ್ಟ. ಅವು ಯಾರಿಗೂ ತೊಂದರೆಯುಂಟುಮಾಡುವುದಿಲ್ಲ. ದಷ್ಟಪುಷ್ಟವಾಗಿ ಬೆಳೆದು ಕೊಬ್ಬಿನಿಂತಿರುವ ಆ ಮೀನುಗಳಿಗೆ ತಮ್ಮಲ್ಲಿರುವ ಶಕ್ತಿ ಎಷ್ಟೆಂಬುದು ತಿಳಿದಿಲ್ಲವೆಂದು ಕಾಣುತ್ತದೆ. ಅವುಗಳಿಂದಲೇ ಇತರ ಮೀನುಗಳು ಉಪದ್ರಕೊಟ್ಟರೂ ತಿರುಗಿ ಪೆಟ್ಟುಕೊಡದೆ ತಮ್ಮ ಧಡೂತಿ ದೇಹವನ್ನು ಕುಲುಕಿಸುತ್ತ ಈಜಿಕೊಂಡು ದೂರ ಹೋಗುತ್ತವೆ. ಅದು ವಿಜುವಿನ ಮನಸ್ಸಿನಲ್ಲಿ ನೈತಿಕ ರೋಷವನ್ನು ತುಂಬುತ್ತದೆ.

ಅವನ ರನ್ನಿಂಗ್ ಕಮೆಂಟರಿ ಮುಂದುವರಿಯುತ್ತಲೇ ಇದೆ...

ಆರೆಂಜ್ ಗಪ್ಪಿಯ ಬಾಲ ನೋಡಲು ಸುಂದರವಾಗಿದೆ, ಈ ಸೂರ್ಯನ ಬೆಳಕಿನಲ್ಲಿ ಕಿಟಕಿಯ ಮೂಲಕ ತೂರಿ ಬರುತ್ತಿದ್ದ ಬೆಳಕು ಟ್ಯಾಂಕಿನೊಳಗೆ ಪ್ರಕಾಶದ ಒಂದು ಅದ್ಭುತ ಲೋಕವನ್ನೇ ಸೃಷ್ಟಿಸಿದೆ. ಗಿಡಗಳಿಗೆ ಅವುಗಳ ಹಸಿರು ಮತ್ತೆ ಲಭಿಸಿದೆ. ಕಲ್ಲುಗಳು ಹೊಳೆಯುತ್ತಿವೆ. ಮೀನುಗಳ ಶುಭ್ರವರ್ಣಗಳನ್ನು ಕಂಡು ಆ ಟ್ಯಾಂಕಿನೊಳಗೆ, ಮೀನುಗಳಷ್ಟೇ ದೊಡ್ಡ ಗಾತ್ರದ ಒಬ್ಬ ಮನುಷ್ಯನಾಗಿ ತಾನಿರಬೇಕಿತ್ತೆಂದು ಆತನಿಗನ್ನಿಸಿತು.

ಗುಡ್ಡಗಳ ಇಳಿಜಾರಿನಲ್ಲಿ ಮರಗಳ ನಡುವೆ ರಾಗಿಣಿಯ ಜತೆಗೆ ಓಡಾಡಿದ್ದು ಆತನಿಗೆ ನೆನಪಾಯಿತು. ಸಂಜೆ ಹೊತ್ತು ಎಲೆಗಳ ಮೇಲೆ ವಾರೆಯಾಗಿ ಬೀಳುತ್ತಿದ್ದ ಸೂರ್ಯರಶ್ಮಿಗಳು ರಾಗಿಣಿಯ ಮುಖದ ಮೇಲೆ ನೆರಳು ಬೆಳಕಿನಾಟ ಆಡಿದ್ದವು. ಬೆಳಕಿನಲ್ಲಿ ಆಕೆಯ ಮುಖ ಪ್ರಫುಲ್ಲಿತವಾದರೆ ನೆರಳು ಬಿದ್ದಕೂಡಲೇ ಮಂಕಾಗಿತ್ತು, ಅವತ್ತು ಆತನಿಗೆ ಅದೇಕೋ ಅಕಾರಣವಾಗಿ ಭಯವೆನ್ನಿಸಿತ್ತು.

''ಅಪ್ಪಾ, ಇಲ್ಲಿ ನೋಡಿ. ಈ ಸ್ವೇಡ್ ಟೆಯಿಲ್ ಚಿಕ್ಕ ಸ್ವೇಡ್ ಟೆಯಿಲಿಗೆ ಸಿಕ್ಕಾಪಟ್ಟೆ ಉಪದ್ರಕೊಡುತ್ತಿದೆ. ನಾವು ಅದನ್ನು ಬದಲಾಯಿಸೋಣ'' ವಿಜು ಕೂಗಿ ಹೇಳಿದ.

ಆತ ಸ್ವಪ್ನಲೋಕದಿಂದ ಎದ್ದು ಬಂದ.

ಸ್ವೇಡ್ ಟೆಯಿಲ್‌ಗಳು ಸ್ವತಃ ಸ್ವಲ್ಪ ಕಲಹಪ್ರಿಯ ಮೀನುಗಳು. ದೊಡ್ಡ ಮೀನುಗಳು ಸಣ್ಣ ಮೀನುಗಳಿಗೆ ಉಪದ್ರ ಕೊಡುತ್ತವೆ. ಈಗ ಇಲ್ಲಿ ನಡೆಯುತ್ತಿರುವ ಜಗಳ ಕಾಮಿನಿ ಮೂಲದ್ದು. ಟ್ಯಾಂಕಿನೊಳಗಿರುವುದು ಎರಡು ಜೋಡಿಗಳು. ಒಂದು ಹೆಣ್ಣನ್ನು ಹೆರಿಗೆಗೆಂದು ಬೇರೆಡೆಗೆ ಸಾಗಿಸಲಾಗಿತ್ತು. ಆದ್ದರಿಂದ ಆ ಎರಡನೇ ಹೆಣ್ಣಿಗಾಗಿ ಸ್ವೇಡ್ ಟೆಯಿಲ್‌ಗಳ ಮಧ್ಯೆ ಜಗಳ.

''ನಾವು ಈ ದೊಡ್ಡ ಸ್ವೇಡ್ ಟೆಯಿಲನ್ನು ಬೇರೆಕಡೆ ಹಾಕೋಣ ಆಗದೆ ?''

ಓದುತ್ತಿರುವುದರ ಮಧ್ಯೆ ಆತ ಹೂಂಗುಟ್ಟಿದ. ಆದರೆ ಹೆಚ್ಚು ಹೊತ್ತು ಓದುತ್ತ ಕುಳಿತುಕೊಳ್ಳುವ ಹಾಗಿಲ್ಲ. ಅಷ್ಟುಹೊತ್ತಿಗೆ ಮಗ ಬಲೆಯನ್ನು ತೆಗೆದುಕೊಂಡು ಬಂದೇಬಿಡುತ್ತಾನೆ. ಉಪದ್ರ ಕೊಡುತ್ತಿರುವ ಮೀನನ್ನು ಬೇರೆಡೆಗೆ ಸಾಗಿಸಲು ರಾಮಚಂದ್ರ ಏಳಲೇಬೇಕಾಗುತ್ತದೆ.

ಗ್ಲಾಸ್‌ಟ್ಯಾಂಕ್ ದೊಡ್ಡದು. ನಾಲ್ಕಡಿ ಉದ್ದ ಮತ್ತು ಒಂದಡಿ ಅಗಲ, ಒಂದೂವರೆ ಅಡಿ ಆಳ. ತಳದಲ್ಲಿದ್ದ ಮರಳಪಟ್ಟಿಯ ಮೇಲೆ ಚಿಕ್ಕ ಬೆಣಚುಕಲ್ಲುಗಳು, ನಡುನಡುವೆ, ವಾಲಸ್ನೇರಿಯಾ, ಅಮೆಝಾನ್ ಸ್ವೋ... ಮುಂತಾದ ಗಿಡಗಳು. ಗಿಡಗಳು ಮತ್ತು ಕಲ್ಲುಗಳ ನಡು... ಒಂದು ಕಾಡಿನ ಮಧ್ಯೆಯೋ ಎಂಬಂತೆ ಸಿರಾಮಿಕ್... ಶ್ವೇತಭವನ. ಅವುಗಳೆಡೆಯಲ್ಲಿ ವಿವಿಧ ಬಣ್ಣಗಳ... ಮೀನುಗಳು ಈಜಾಟ ಆಡುತ್ತಿವೆ, ಜೋಡಿಯಾಗುತ್ತಿವೆ, ಜಗಳವಾಡುತ್ತಿವೆ. ಸ್ವೇಡ್ ಟೆಯಿಲುಗಳು, ಬ್ಲಾಕ್ ಮೋಲಿಗಳು, ಚಿನ್ನದ ಮೀನುಗಳು, ಏಂಜಲುಗಳು, ಹಲವು ಬಣ್ಣದವು – ಬಿಳಿ, ಕಪ್ಪು ಮತ್ತು ಎರಡೂ ಬಣ್ಣಗಳ ಮಿಶ್ರಣ. ಆ ಮೇಲೆ ಗಪ್ಪಿಗಳು. ವಿವಿಧ ಬಣ್ಣಗಳ ನೀಳವಾದ ಬಾಲಗಳನ್ನು ಆಡಿಸುತ್ತ ಅವು ಆಟವಾಡಿದವು. ಇದು ವಿಜುವಿನ ಮೀನಿನ ಪ್ರಪಂಚ. ಗಾಜಿನ ಗೋಡೆಗಳೊಳಗಿನ ಪ್ರಕೃತಿಯ ಒಂದು ಸಣ್ಣ ತುಣುಕು.

ಜೋಡಿಗಳ ಈ ಜಗತ್ತಿನಲ್ಲಿ ಒಂಟಿಯಾಗಿ ಒಂದು ಮೀನು ಮಾತ್ರ. ಅದು ಗುರಾಮಿ. ಕಿಸ್ಸಿಂಗ್ ಗುರಾಮಿ. ಎರಡು ಇಂಚು ಉದ್ದದ ವಿಸ್ತಾರವಾಗಿ ಹರಡಿಕೊಳ್ಳುವ ದೇಹದ ಒಂದು ಮೀನು. ಅವನನ್ನು ವಿಜು ಕರೆಯುವುದು ಡಾಕ್ಟರ್ ಗುರಾಮಿ ಎಂದು. ಡಾಕ್ಟರುಗಳ ಹಾಗೆ ಗುರಾಮಿಗೆ ಬಿಳಿಯ ಓವರ್‌ಕೋಟಿದೆ. ಅವನು ಯಾರಿಗೂ ತೊಂದರೆ ಕೊಡದೆ, ಜಗಳವಾಡದೆ ನಿಸ್ವಾರ್ಥ ಬುದ್ಧಿಯಿಂದ ಸೇವೆ ಮಾಡುತ್ತಾನೆ. ಟ್ಯಾಂಕಿನ ಗಾಜಿನ ಆವರಣ, ಗಿಡಗಳ ದಂಟುಗಳು, ಎಲೆಗಳು ಎಲ್ಲವನ್ನೂ ನುಂಗಿ, ಪಾಚಿ ಬೆಳೆಯದಂತೆ ತಡೆಗಟ್ಟುವುದು ಅವನ ಕೆಲಸ. ಈ ಕೆಲಸವನ್ನು




## ಗೀತ - ೨೬

ಅವ ಬಂದ ಮತ್ತು ನನ್ನ ಬದಿಗೆ ಕುಳಿತುಕೊಂಡ.
ಆದರೆ ನನಗೆ ಎಚ್ಚರಾಗಲಿಲ್ಲ. ಎಂಥ ಶಾಪಗ್ರಸ್ತ ನಿದ್ದೆ
ಇತ್ತದು, ಓ ನನ್ನ ಸಣ್ಣತನವೇ !
ರಾತ್ರಿ ಪ್ರಶಾಂತವಾಗಿದ್ದಾಗ ಅವ ಬಂದ. ಅವನ
ಕೈಯಲ್ಲಿ ವೀಣೆ ಇತ್ತು ಮತ್ತೂ ನನ್ನ ಕನಸುಗಳು
ಅದರ ಮಧುರ ರಾಗಗಳೊಂದಿಗೆ ನಿನದಿಸಿದವು.
ಅಯ್ಯೋ, ನನ್ನೆಲ್ಲ ರಾತ್ರಿಗಳು ಹೀಗೇಕೆ
ಕಳೆದುಹೋದವು ? ತನ್ನ ಉಸಿರಿನಿಂದ ನನ್ನ
ನಿದ್ದೆಯನ್ನು ಸ್ಪರ್ಶಿಸುವವನ ದರ್ಶನವನ್ನು
ನಾನು ಯಾಕೆ ಯಾವಾಗಲೂ ತಪ್ಪಿಸಿಕೊಳ್ಳುತ್ತೇನೆ ?

ಅನುವಾದ : ವ್ಹಿ. ಎಂ. ಶೆಟ್ಟರ
'ಸುಶೀಲ', ಮೈಗೂರು ರಸ್ತೆ, ಜಮಖಂಡಿ - ೫೮೭ ೩೦೧

ಅವನು ಇದುವರೆಗೆ ಯಾವುದೇ ಗೊಣಗಾಟವಿಲ್ಲದೆ ಯಾವಾಗಲೂ ಮಾಡಿದ್ದಾನೆ. ಒಂದು ಗಿಡ ಮುಗಿದರೆ ಇನ್ನೊಂದು. ಒಂದು ಗೋಡೆ ಮುಗಿದರೆ ಇನ್ನೊಂದು ಗೋಡೆ. ವೇಗವಾಗಿ ಕೆಲಸ ಮಾಡುತ್ತಿರುವಾಗ ಗಡಿಬಿಡಿಯಲ್ಲಿ ಕೆಲವೊಮ್ಮೆ ಇನ್ನು ಯಾವುದಾದರೂ ಮೀನನ್ನು ನುಂಗಿಹಾಕುವುದೂ ಉಂಟು. ತಕ್ಷಣ 'ಸಾರಿ' ಹೇಳಿ ಡಾಕ್ಟರ್ ಮುಂದಿನ ಗಿಡದ ಬಳಿ ಹೋಗುತ್ತಾರೆ. ಸಿಟ್ಟಿಲ್ಲ, ಹಗೆಯಿಲ್ಲ, ಹಠವಿಲ್ಲ. ಪರೋಪಕಾರಭಾವ ಮಾತ್ರ.

ಆ ದೊಡ್ಡ ಟ್ಯಾಂಕಿನ ಬಳಿ ಪ್ರತ್ಯೇಕವಾಗಿ ಇಟ್ಟಿರುವ ಎರಡಡಿ ಟ್ಯಾಂಕೇ ಡಾಕ್ಟರ್ ಗುರಾಮಿಯ ಆಸ್ಪತ್ರೆ.

ಆ ಹೆಸರು ಬರಲು ಕಾರಣ ಗುರಾಮಿ ಮತ್ತು ಅದರ ಜೋಡಿಯೂ ಜೊತೆಗಿದ್ದಾಗ ಅಸೌಖ್ಯತೆಯಿಂದಾಗಿ ಆ ಟ್ಯಾಂಕಿನಲ್ಲಿದ್ದವು. ಅದರ ಜೋಡಿ ಸತ್ತುಹೋಯಿತು. ಡಾಕ್ಟರ್ ಗುರಾಮಿ ಎರಡು ತಿಂಗಳ ಚಿಕಿತ್ಸೆಯ ನಂತರ ಆಶ್ಚರ್ಯಕರ ರೀತಿಯಲ್ಲಿ ಬದುಕಿ ಉಳಿಯಿತು. ಆ ನಂತರವಾಗಿತ್ತು ವಿಜು ಆ ಟ್ಯಾಂಕನ್ನು ಡಾಕ್ಟರ್ ಗುರಾಮೀಸ್ ಹಾಸ್ಪಿಟಲ್ ಎಂದು ಕರೆಯತೊಡಗಿದ್ದು. ಅದರಲ್ಲಿ ಈಗ ಇರುವುದು ಕೆಂಪಾಗಿ, ಗುಂಡಗಾಗಿ, ಸುಂದರಿಯಾಗಿದ್ದ ಸ್ವೋಡ್ ಟೆಯಿಲ್. ಹೆರಿಗೆಗಾಗಿ ಅಲ್ಲಿ ಬಿಟ್ಟಿದ್ದು. ಅದನ್ನು ಕರೆಯುವುದು 'ಪುಟ್ಟಮ್ಮಣ್ಣೀ' ಎಂದು. ಬಹುಶಃ ಆ ಮೀನು ಮರಿ ಹಾಕಿರಲೂಬಹುದು.

''ಅಪ್ಪಾ, ಪುಟ್ಟಮ್ಮಣ್ಣಿ ಹೆತ್ತಿತು...'' ವಿಜು ಕೂಗಿ ಹೇಳಿದ. ಆತ ನೋಡಿದ. ಹೌದು, ಚಿಕ್ಕ ಚಿಕ್ಕ, ನಸು ಆರೆಂಜ್ ಬಣ್ಣದ ಮರಿಗಳು. ಅವು ಟ್ಯಾಂಕಿನ ತಳದಲ್ಲಿದ್ದ ಬೆಣಚುಕಲ್ಲುಗಳ ಮೇಲಿಂದ ಪುಟುಪುಟನೆ ಚಲಿಸಿದವು. ಕೆಲವು ಅಮ್ಮನ ಬಳಿಗೆ; ಆದರೆ ತೀರಾ ಹತ್ತಿರ ಹೋಗದೆ ಈಜಾಡುತ್ತ ನಡುನಡುವೆ ವಾರೆಗಣ್ಣಿಂದ ಅಮ್ಮನೆಡೆಗೆ ನೋಡಿದವು, ತಾಯಿಯ ವಾತ್ಸಲ್ಯದ ಮೇಲೆ ಅಷ್ಟೇನೂ ವಿಶ್ವಾಸವಿಲ್ಲದವರ ಹಾಗೆ. ತಾಯಿ ಮೀನಿಗೆ ಹೆರಿಗೆಯಿಂದ ದಣಿವಾಗಿತ್ತು. ನಿಶ್ಶಕ್ತಿಯಿದ್ದರೂ ಅವಳು ಹೆಮ್ಮೆಯಿಂದ ತನ್ನ ಮರಿಗಳತ್ತ ನಿಧಾನವಾಗಿ ಈಜುತ್ತಿದ್ದಾಳೆ.

ಪುಟ್ಟಮ್ಮಣ್ಣಿಗೆ ಹಸಿವಾಗುತ್ತಿರಬಹುದು. ರಾಮಚಂದ್ರನೆಂದ ''ಮೊದಲು ನಾವು ಅವನ್ನು ದೊಡ್ಡ ಟ್ಯಾಂಕಿಗೆ ಸಾಗಿಸೋಣ. ಆ ನಂತರ ಏನಾದರೂ ತಿನ್ನಲು ಕೊಡಬೇಕು.''

ವಿಜು ಮರಿಗಳನ್ನು ಕುತೂಹಲದಿಂದ, ಅಚ್ಚರಿಯಿಂದ ನೋಡುತ್ತಿದ್ದಾನೆ. ಇದಕ್ಕೆ ಮುಂಚೆಯೂ ಆ ಟ್ಯಾಂಕಿನಲ್ಲಿ ಮೀನುಗಳು ಮರಿ ಹಾಕಿವೆ. ಆದರೆ ಪ್ರತಿ ಬಾರಿಯೂ ಒಂದೊಂದು ಹೊಸ ಮೀನೂ ಪುನಃ ಪುನಃ ಅದ್ಭುತಗಳ ಪ್ರಪಂಚವನ್ನೇ ತೆರೆದಿಡುತ್ತದೆ. ಅಮ್ಮನ ರೂಪ, ಬಣ್ಣಗಳ ಚಿಕ್ಕ ಪ್ರತಿರೂಪಗಳು. ಹೆತ್ತು ಕೆಳಗೆ ಬಿದ್ದ ಕೂಡಲೇ ಅವು ತಮ್ಮ ಜಾತಿ ಗುಣವನ್ನು ತೋರಿಸತೊಡಗುತ್ತವೆ. ಪುಟ್ಟ ಕಣ್ಣುಗಳಿಂದ ಸುತ್ತಲೂ ನೋಡಿ ಆಹಾರಕ್ಕಾಗಿ ಹುಡುಕುತ್ತವೆ.

''ಈ ಮರಿಗಳು ಈಗಲೇ ಫೈಟ್ ಮಾಡತೊಡಗಿವೆ, ಅಪ್ಪಾ.''

''ಅವು ಆಡುತ್ತಿವೆ ಮಗನೇ.''

ಏನಾದರೂ ಸಂಭವಿಸುವುದು ಒಳ್ಳೆಯದು. ಇನ್ನು ಒಂದು ವಾರದ ತನಕ ಈ ಮರಿಗಳ ಆಟವನ್ನು ನೋಡಿಕೊಂಡಿರಬಹುದು. ನೆನಪುಗಳ ಆಕ್ಟೋಪಸ್ ಹಿಡಿತದಲ್ಲಿ ಆತನಿಗೆ ತಾತ್ಕಾಲಿಕವಾದ ಸಮಾಧಾನ ಸಿಗಬಹುದು. ಆಫೀಸಿಗೆ ಹೋದರೆ ಕೆಲಸದಲ್ಲಿ ಮುಳುಗುತ್ತಾನೆ. ಮನೆಯಲ್ಲಿ ಆಗಬೇಕಾದ ಕೆಲಸಗಳ ಬಗ್ಗೆ ನೆನಪುಮಾಡಿಕೊಳ್ಳುವ ಅಗತ್ಯವಿಲ್ಲ. ಕೆಲಸದಾಕೆ ರೇಣು ಒಳ್ಳೆಯವಳು. ವಿಜುವನ್ನು ಶಾಲೆಗೆ ಕರೆದುಕೊಂಡು ಹೋಗುವುದು ಮತ್ತು ಕರೆದುತರುವುದು ಅವಳೇ. ಮನೆಯಲ್ಲೂ ಅವನಿಗೆ ಬೇಕಾದ ಎಲ್ಲ ಕೆಲಸಗಳನ್ನು ಮಾಡಿಕೊಡುತ್ತಾಳೆ. ರೇಣು ಅಕ್ಕ ಅಂದರೆ ಆತನಿಗೆ ತುಂಬ ಇಷ್ಟ.

ಫೈಲುಗಳ ಮಧ್ಯೆ ಕಣ್ಣು ನೆಟ್ಟಿರುವಂತೆ ಮಧ್ಯೆ ಯಾತನೆಯಿಂದ ತುಂಬಿದ ಒಂದು ಮುಖ ಮನಸ್ಸಿನಲ್ಲಿ ಬಂದು ನಿಲ್ಲುತ್ತದೆ. ಒಂದು ವರ್ಷದ ನಂತರವೂ ಆ ಮುಖ ಆತನನ್ನು ಇನ್ನೂ ದಣಿಸುತ್ತಿದೆ. ನೋವು ಸಹಿಸಲಾಗದೆ ರಾಗಿಣಿ ಹೇಳುತ್ತಾಳೆ. ಇದಕ್ಕಿಂತ ಸಾವೇ ಉತ್ತಮ. ಆತ ಅಸಹಾಯಕನಾಗಿ ನೋಡುತ್ತ ನಿಲ್ಲುತ್ತಾನೆ. ಅವಳ ದೇಹವನ್ನು ಸ್ಪರ್ಶಿಸುವ ಧೈರ್ಯವಿಲ್ಲದೆ ಒಂದು ಮೃದುವಾದ ಸ್ಪರ್ಶವೂ ಬಹಳ ಯಾತನೆಯನ್ನು ಉಂಟುಮಾಡುವಂತಿತ್ತು.



ಒಂದು ದಿನ ವಿಜು ಕೇಳಿದ, ''ಅಪ್ಪಾ, ಸತ್ತುಹೋದವರು ಒಂದು ದಿನ ತಿರುಗಿ ಬರುವುದಿಲ್ಲವೆ ?''

ಆತ ಯೋಚಿಸಿದ. ಸತ್ತುಹೋದವರು ತಿರುಗಿ ಬಂದಾರೇ ? ಸಾವಿನ ಬಗ್ಗೆ, ಸಾವಿನ ನಂತರದ ಬದುಕಿನ ಬಗ್ಗೆ ತನ್ನ ಮನಸ್ಸಿನಲ್ಲಿದ್ದ ಕಲ್ಪನೆಗಳೇನೆಂಬುದು ಆತನಿಗೆ ಗೊತ್ತಿಲ್ಲ. ತಾನು ಏನಾದರೂ ಹೇಳಿದರೆ ಅದು ತನ್ನ ಭಾವನೆಗಳನ್ನು ಕೊಲ್ಲಬಹುದೆಂದು ಆತ ಭಯಪಟ್ಟ. ನಿಜ ಹೇಳಬೇಕೆಂದರೆ, ರಾಗಿಣಿ ಒಂದು ದಿನ ತಿರುಗಿ ಬರುವಳೆಂದೂ, ತೀರಾ ಸಹಜವಾಗಿ, ಏನೂ ನಡೆದಿಲ್ಲವೆಂಬಂತೆ, ತಾನು ನಿಲ್ಲಿಸಿದ ಸ್ಥಳದಿಂದ ಬದುಕನ್ನು ಮತ್ತೆ ಪ್ರಾರಂಭಿಸಬಹುದೆಂದೂ, ಇದೆಲ್ಲವೂ ಒಂದು ದುಃಸ್ವಪ್ನ ಮಾತ್ರವೆಂದೂ ನಂಬಲು ಆತ ಪ್ರಯತ್ನಿಸಿದ್ದ. ಸ್ವಪ್ನಗಳಿಂದ ಮೋಸ ಹೊಂದಲು ಆತ ಪ್ರಯತ್ನಿಸಿದ್ದ.

ಸಾವೆಂದರೇನೆಂದು ಆತ ಯೋಚಿಸುವುದಿದೆ. ಜೀವನದ ಕೊನೆಯೆ ? ಅಥವಾ ಒಂದು ರೂಪಾಂತರ ಹೊಂದುವುದು ಮಾತ್ರವೆ ? ಅಲ್ಲ ಅದಕ್ಕಿಂತಲೂ ಶ್ರೇಷ್ಠವಾದ ಆತ್ಮ ಮತ್ತು ಪುನರ್ಜನ್ಮದ ಪರಂಪರೆಯಲ್ಲಿರುವ ಒಂದು ತಂತು ಮಾತ್ರವೇ, ಸಾವೆಂದರೆ ?

''ತಿರುಗಿ ಬರಲು ಸಾಧ್ಯವೆ ?'' ವಿಜು ಕೇಳುತ್ತಿದ್ದಾನೆ.

''ನಮಗೆ ಏನೂ ತಿಳಿಯದು ಮಗನೇ'' ಆತ ವಿಜುವಿನ ಬೆನ್ನು ನೇವರಿಸುತ್ತ ಹೇಳಿದ. ''ಈ ಪ್ರಪಂಚದಲ್ಲಿ ನಮಗೆ ತಿಳಿದಿರುವುದು ತಿಳಿಯದುದಕ್ಕಿಂತ ಎಷ್ಟೋ ಹೆಚ್ಚು.''

''ನನಗನ್ನಿಸುವುದು...'' ಅವನು ಅರ್ಧದಲ್ಲಿ ನಿಲ್ಲಿಸಿದ. ತುಸು ಹೊತ್ತು ಆಲೋಚಿಸಿದ.

''ನನಗನ್ನಿಸುವುದು ಅಮ್ಮ ತಿರುಗಿ ಬರುತ್ತಾಳೆ ಅಂತ. ಅಮ್ಮನ ಕೈ ಹಿಡಿದುಕೊಂಡು ನಡೆಯುತ್ತಿರುವ ಬಗ್ಗೆ ನನಗೆ ಆಗಾಗ ಕನಸು ಬೀಳುತ್ತದೆ. ಎಲ್ಲಿಗೆ ಹೋಗುವುದೆಂದು ಗೊತ್ತಿಲ್ಲ. ನಡೆಯುತ್ತಲೇ ಇರುತ್ತೇನೆ. ಎಲ್ಲಿಗೂ ತಲುಪುವುದಿಲ್ಲ.''

ರಾತ್ರಿ ನಿದ್ರೆ ಮಾಡುವುದಕ್ಕೆ ಮೊದಲು ವಿಜುವಿಗೆ ಕಥೆ ಹೇಳಬೇಕು. ಆತ ಹೆಚ್ಚಾಗಿ ಹೇಳುವುದು ಕಲ್ಪನೆಯಲ್ಲಿ ಅಲ್ಲಲ್ಲೇ ಹುಟ್ಟಿಕೊಳ್ಳುವ ಕಟ್ಟುಕಥೆಗಳು. ಒಂದು ವಾಕ್ಯ ಹೇಳುವಾಗ ಮುಂದಿನ ವಾಕ್ಯ ಏನಾಗಿರಬಹುದೆಂದು ಗೊತ್ತಿಲ್ಲ. ಹೇಳಿದ ನಂತರ ಆ ವಾಕ್ಯದ ರಚನೆ, ಅರ್ಥ ಮತ್ತು ವಿಜುವಿನ ಪ್ರತಿಕ್ರಿಯೆಗಳು ಮುಂದಿನ ವಾಕ್ಯ ರಚನೆಯಲ್ಲಿ ಸಹಾಯಮಾಡುತ್ತವೆ. ವಿಜುವಿನ ಆಸಕ್ತಿಯನ್ನವಲಂಬಿಸಿ ಕಥೆ ಉದ್ದವಾಗುತ್ತದೆ. ಆದರೆ ಕಳೆದ ಹದಿನೈದು ದಿವಸಗಳಿಂದ ಅವನಿಗೆ ಕಥೆ ಬೇಡವಾಗಿದೆ. ಬದಲಾಗಿ, ಹೊಸತಾಗಿ ಕೊಳ್ಳಲು ಹೋಗುತ್ತಿರುವ ಮನೆಯ ಬಗೆಗಿನ ವರ್ಣನೆ- ವಿವರಣೆಗಳು ಬೇಕಾಗಿವೆ. ಒಂದು ದಿನ ಕೇಳಿದ್ದನ್ನೇ ಮರುದಿನ ಆವರ್ತಿಸುತ್ತಾನೆ. ಅದರಲ್ಲಿ ಏನಾದರೂ ಬಿಟ್ಟುಹೋದರೆ ಅವನು ಹಿಡಿದುಬಿಡುತ್ತಾನೆ.

''ಹಾಗಾದರೆ ಬಾಲ್ಕನಿಯ ವಿಷಯ ಹೇಳಲಿಲ್ಲವಲ್ಲ ?''

''ಸರಿ, ಸರಿ'' ರಾಮಚಂದ್ರನೆಂದ : ಬಾಲ್ಕನಿಯಲ್ಲಿ ಅಲ್ಯೂಮಿನಿಯಂ ರೈಲಿಂಗಿಗೆ ತಾಗಿಸಿ ಎಳೆಯಬಹುದಾದ ಸ್ಫಟಿಕ ಬಾಗಿಲುಗಳಿವೆ. ಅದರ ಮೂಲಕ ನೋಡಿದರೆ ತುಂಬಾ ದೂರದತನಕ ನಿರಾತಂಕವಾಗಿ ನೋಡಬಹುದು. ಕೆಳಗೆ ಮರದ ತುದಿಗಳು ಒಂದು ಹಸುರು ಹೊದಿಕೆಯ ಹಾಗೆ ಕಾಣುತ್ತವೆ. ಮೇಲೆ ನೀಲಾಕಾಶ. ನಡುನಡುವೆ ಬಿಳಿಯ ಮೋಡಗಳು. ಅವುಗಳ ಮಧ್ಯೆ ಹಾರಾಡುವ ಪಕ್ಷಿಗಳು. ನಿಜ ಹೇಳಬೇಕೆಂದರೆ ಹೊಸ ಮನೆ ಸಿದ್ಧವಾಗಿದೆ. ಮೂರನೇ ಅಂತಸ್ತಿನ ಫ್ಲಾಟ್ ತನ್ನ ವರ್ಣನೆಯಲ್ಲಿ ಚಿತ್ರಿಸಿಕೊಂಡ ಹಾಗೆಯೇ ಇದೆ. ವಿದ್ಯುತ್ ಕನೆಕ್ಷನ್ ಸಿಕ್ಕಿದ ಕೂಡಲೇ ಅಲ್ಲಿಗೆ ಹೋಗಿ ಇರಬಹುದೆಂದು ಆತ ದುಃಖದಿಂದ ಎಣಿಸಿದ. ಈ ಮನೆಯಲ್ಲಿ ರಾಗಿಣಿಯ ಹೆಜ್ಜೆ ಗುರುತುಗಳಿವೆ. ಅವಳು ಉಸಿರಾಡಿದ ಗಾಳಿ ಈ ಮನೆಯಲ್ಲಿದೆ. ನೆನಪುಗಳಿಂದ ಬಿಡುಗಡೆ ಹೊಂದಲೆಂದು ತಾನು ಮನೆ ಬದಲಾಯಿಸಲು ನಿರ್ಧರಿಸಿದ್ದರ ಬಗ್ಗೆ ಆತ ನೊಂದುಕೊಂಡ.

ವಿಜುಗೆ ನಡುನಡುವೆ ಅಮ್ಮನ ನೆನಪಾಗುವುದಿದೆ. ಒಂದು ದಿನ ಬೆಳಗ್ಗೆ ಎದ್ದಾಗ ಅವನು ಕ್ಯಾಸೆಟ್ಟುಗಳನ್ನಿಟ್ಟಿದ್ದ ಡ್ರಾಯರ್ ಎಳೆದು ಹುಡುಕುತ್ತಿದ್ದ.

ಆತ ಕೇಳಿದ, ''ಏನಪ್ಪ, ಏನು ಹುಡುಕುತ್ತಿದ್ದೀಯಾ ?''

''ಒಂದು ಕ್ಯಾಸೆಟ್.''

ಯಾವ ಕ್ಯಾಸೆಟ್ ಎಂದು ಹೇಳಲು ಅವನಿಂದಾಗಲಿಲ್ಲ. ಕೊನೆಗೆ ಒಂದು ಧೂಳು ಹಿಡಿದ ಕ್ಯಾಸೆಟ್ಟನ್ನು ಎತ್ತಿ ತೋರಿಸಿದ :

'ಶ್ರೀ ವೆಂಕಟೇಶ ಸುಪ್ರಭಾತ'

ಅದು ರಾಗಿಣಿಯ ಕೆಲವೇ ಕೆಲವು ದೌರ್ಬಲ್ಯಗಳಲ್ಲೊಂದಾಗಿತ್ತು.

ವಿಜು ಆ ಕ್ಯಾಸೆಟ್ ಹಿಡಿದುಕೊಂಡು ನಿಂತಿದ್ದಾನೆ.

''ಇದು ಒಳ್ಳೆ ಕ್ಯಾಸೆಟ್ಟಾ ಅಪ್ಪಾ ?''

ಕಳೆದ ಒಂದು ವರ್ಷದಿಂದ ಮನೆಯಲ್ಲಿ ಸುಬ್ಬುಲಕ್ಷ್ಮಿಯ ಧ್ವನಿ ಕೇಳಿರಲಿಲ್ಲ. ಅದು ಅವನಿಗೆ ತಿಳಿದಿತ್ತು. ಅದಕ್ಕೆ ಕಾರಣವೇನೆಂಬುದನ್ನು ಊಹಿಸಬೇಕು.

''ಮಗನೇ, ನಿನಗೆ ಇದನ್ನು ಕೇಳಬೇಕೆನ್ನಿಸುತ್ತಿದೆಯೆ ?''

ಅವನ ಮುಖ ಅರಳಿತು.

ಮರುದಿನ ಮುಂಜಾನೆ ವಿಜು ಏಳುವುದಕ್ಕೆ ಮುಂಚೆ ಆತ ಆ ಕ್ಯಾಸೆಟ್ ಹಾಕಿದ. ಹೊರಗೆ ಇನ್ನೂ ಕತ್ತಲಿತ್ತು. ಕಿಲುಬುಹಿಡಿದ ಒಂದು ಹಿತ್ತಾಳೆಯ ಕಾಲುದೀಪವನ್ನು ಆತ ಷೆಲ್ಫಿನಿಂದ ಹುಡುಕಿ ತೆಗೆದ. ಹುಳಿ ಹಾಕಿ ತಿಕ್ಕಿ ತೊಳೆದಾಗ ದೀಪ ಹೊಳೆಯಿತು. ಅದಕ್ಕೆ ಎಣ್ಣೆ-ಬತ್ತಿಗಳನ್ನು ಹಾಕಿ ಆತ ದೀಪ ಉರಿಸಿದ. ರಾಗಿಣಿಯ ಬಣ್ಣ ಒಂದು ಹಿತ್ತಾಳೆ ದೀಪದ ಬಣ್ಣವಾಗಿತ್ತು. ಜಗುಲಿಯಲ್ಲಿ ಗೋಡೆಗೆ ಹೊಡೆದಿಟ್ಟಿದ್ದ ಸ್ಟ್ಯಾಂಡಿನಲ್ಲಿದ್ದ ಧೂಳು ಹಿಡಿದಿದ್ದ ಒಂದು ಶ್ರೀಕೃಷ್ಣನ ಮೂರ್ತಿಯನ್ನು ಒರೆಸಿ ಸ್ವಚ್ಛಮಾಡಿದ. ಬಳಿಯಲ್ಲಿ ದೀಪ ವಿಟ್ಟ. ಊದಿನಕಡ್ಡಿ ಹಚ್ಚಿದ. ಸುಬ್ಬುಲಕ್ಷ್ಮಿ ಹಾಡುತ್ತಿದ್ದಳು.

ವಿಜು ಇನ್ನೂ ನಿದ್ರಿಸುತ್ತಲೇ ಇದ್ದ.

ಎಚ್ಚರವಾಗಿ ಎದ್ದು ಬಂದ ನಂತರ ವಿಜು ಕೇಳಿದ.

''ಅಪ್ಪಾ, ಇವತ್ತು ಬೆಳಿಗ್ಗೆ ನೀನು ಆ ಕ್ಯಾಸೆಟ್ ಹಾಕಿದ್ದೆಯಾ ?''

ಹೌದೆಂದು ಆತ ತಲೆಯಾಡಿಸಿದ.

ಭಾನುವಾರ, ರಜಾದಿನಗಳಲ್ಲಿ ಆತ ಯಾವಾಗಲೂ ತಡವಾಗಿಯೇ ಏಳುತ್ತಿದ್ದ. ಏಳುವರೆಗೆ ಎದ್ದು ಬಂದಾಗ ವಿಜುವಿನ ಸ್ನಾನ ಮುಗಿದಿತ್ತು. ರೇಣು ಅವನನ್ನು ಹೊರಡಿಸುತ್ತಿದ್ದಳು. ಆತನಿಗೆ ಆಶ್ಚರ್ಯವಾಯಿತು. ಅವನಿಂದ ಪೌಡರಿನ ಪರಿಮಳ ಬರುತ್ತಿತ್ತು. ಆತ ಅವನನ್ನು ಬಳಿಗೆ ಸೆಳೆದು ಅಪ್ಪಿಕೊಂಡ.

''ಮಗನೇ, ಇವತ್ತು ನೀನು ಒಳ್ಳೆ ಹುಡುಗನ ಹಾಗೆ ಬೇಗ ಸ್ನಾನ ಮಾಡಿಬಿಟ್ಟಿದ್ದೀಯಲ್ಲ ?''

ಆತ ಕೇಳಿದ. ವಿಜು ಪ್ರಶ್ನಾರ್ಥಕ ಭಾವದಿಂದ ಅಪ್ಪನನ್ನು ನೋಡಿದ.

''ಇವತ್ತಲ್ಲವೇ ಹೊಸ ಮನೆ ನೋಡಲು ಹೋಗೋಣವೆಂದು ಹೇಳಿದ್ದು ?''

ಹೌದಲ್ಲವೆ ? ಆತನಿಗೆ ಮರೆತುಹೋಗಿತ್ತು. ಈ ಭಾನುವಾರ ಏನಿದ್ದರೂ ಅವನನ್ನು ಕರೆದುಕೊಂಡು ಹೋಗುತ್ತೇನೆಂದು ಒಪ್ಪಿಕೊಂಡಿದ್ದ. ಕಳೆದ ಎರಡು ಭಾನುವಾರಗಳಲ್ಲೂ ಸಾಧ್ಯವಾಗಿರಲಿಲ್ಲ.

''ಅಪ್ಪಾ, ಎದ್ದು ಸ್ನಾನ ಮಾಡು.''

''ಇಗೋ ಎದ್ದೆ.'' ಆತ ಎದ್ದು ನಿಂತ.

''ಆಗಲಿ, ನೀನು ಇವತ್ತು ಮೀನಿನ ಮರಿಗಳನ್ನು ನೋಡಿದೆಯಾ ?''

''ಇಲ್ಲ.'' ಅವನು ಕ್ಷಮೆ ಕೇಳುವ ಧ್ವನಿಯಲ್ಲಿ ಹೇಳಿದ.

''ಮರೆತೇ ಹೋಯಿತು. ನಾನು ಹೋಗಿ ನೋಡಿ ಬರುತ್ತೇನೆ. ಅಷ್ಟರೊಳಗೆ ನೀನು ಸ್ನಾನ ಮಾಡಿ ಬಾ ಅಪ್ಪಾ.''

''ಆಗಲಿ.''

ಆದರೆ ಸ್ನಾನಗೃಹ ಪ್ರವೇಶಿಸಿದ ಕೂಡಲೇ ಆತನಿಗೆ ಮಗನ ಕರೆ ಕೇಳಿಸಿತು. ಏನೋ ಗಂಭೀರವಾದ ವಿಷಯಕ್ಕೇ ತನ್ನನ್ನು ಕರೆಯುತ್ತಿದ್ದಾನೆ ಅನ್ನಿಸಿತು. ನೋಡಿದರೆ ಅವನು ಡಾಕ್ಟರ್ ಗುರಾಮಿಯ ಆಸ್ಪತ್ರೆಯ ಮುಂದೆ ನಿಂತಿದ್ದಾನೆ.

''ಅಪ್ಪಾ, ಇಲ್ಲಿ ನೋಡಿ, ಇದರ ನೀರು ಕೊಳಕಾಗಿದೆ. ಇದನ್ನು ಬದಲಾಯಿಸೋಣ.''

ನೀರು ಕೊಳಕಾಗಿದೆ ಹೌದು. ಅದರಿಂದ ಮರಿಗಳಿಗೆ ತೊಂದರೆಯಾಗುತ್ತಿದೆ. ಮರಿಗಳು ನೀರಿನ ಮೇಲ್ಮೈಯ ಬಳಿ ಉಸಿರಾಡಲು ಕಷ್ಟಪಡುತ್ತಿರುವ ಹಾಗೆ ಈಜಾಡುತ್ತಿವೆ. ಆಗಷ್ಟೇ ಆತನ ಗಮನಕ್ಕೆ ಬಂತು – ಫಿಲ್ಟರ್ ಕೆಲಸ ಮಾಡುತ್ತಿಲ್ಲ. ಬಹುಶಃ ರಾತ್ರಿಯಿಡೀ ಅದು ಕೆಲಸ ಮಾಡಿರಲಿಕ್ಕಿಲ್ಲ. ನೀರು ಕೊಳಕಾಗಲು ಕಾರಣ ಅದುವೇ.

''ನಾವು ಕೂಡಲೇ ನೀರು ಬದಲಾಯಿಸಬೇಕಪ್ಪಾ.''

ಆತ ಆಲೋಚಿಸಿದ... ಈಗ ನೀರು ಬದಲಾಯಿಸಿದರೆ ಆ ಬಡಪಾಯಿಗಳಿಗೆ ತೊಂದರೆಯಾಗಬಹುದು. ಬಹುಶಃ ಅಸ್ವಸ್ಥತೆಯಿಂದ ಎಲ್ಲವೂ ಸತ್ತುಹೋಗಲೂಬಹುದು. ಆತನೆಂದ :

''ಹಾಗೆಲ್ಲ ನೀರು ಬದಲಾಯಿಸಕೂಡದು ಮಗನೇ. ಒಂದು ದಿನವಷ್ಟೇ ಆದ ಮರಿಗಳಲ್ಲವೆ ? ಅವಕ್ಕೆ ಈಗಲೂ ಅಮ್ಮನ ವಾಸನೆಯುಳ್ಳ ನೀರೇ ಬೇಕು ಈಜಾಡಲು. ನಾವು ಈ ಫಿಲ್ಟರನ್ನು ಸರಿಪಡಿಸೋಣ. ಎರಡು ಗಂಟೆಗಳ ಒಳಗೆ ನೀರು ಸ್ವಚ್ಛವಾಗುತ್ತದೆ.''

''ಈ ನೀರಿಗೆ ತಾಯಿ ಮೀನಿನ ವಾಸನೆಯಿರುತ್ತದೆಯೆ ?''

''ಇರಬಹುದು. ಒಂದು ವಾರದಿಂದ ಆ ಮೀನು ಈ ಟ್ಯಾಂಕಿನಲ್ಲಿ ಇದ್ದದ್ದಲ್ಲವೆ ? ಈ ಮರಿಗಳು ಅಮ್ಮನ ಹೊಟ್ಟೆಯಲ್ಲಿ ಮಲಗಿದ್ದಾಗ ಇದ್ದ ವಾಸನೆಯೇ ಅವು ಸ್ವಲ್ಪ ದೊಡ್ಡದಾಗುವ ತನಕ ಅವಕ್ಕೆ ಬೇಕು. ನಾವು ನೀರು ಬದಲಾಯಿಸುವುದು ಪಾಪ.''

ವಿಜು ಮೌನವಾಗಿ ಟ್ಯಾಂಕಿನೊಳಗೆ ನೋಡುತ್ತ ನಿಂತ.

ಆತ ನಿಧಾನವಾಗಿ ಸ್ನಾನಗೃಹಕ್ಕೆ ಹೋದ. ಸ್ನಾನಗೃಹಕ್ಕೆ ಹೊಕ್ಕು ಬಾಗಿಲು ಹಾಕಿಕೊಂಡಾಗ ಆತನಿಗೆ ಯಾಕೋ ರಾಗಿಣಿಯ ನೆನಪಾಯಿತು. ಒಂದು ದಿನ ರಾಮಚಂದ್ರ ಆಫೀಸಿನಿಂದ ಬಂದಾಗ ರಾಗಿಣಿ ಚಿಕ್ಕ ಟ್ಯಾಂಕಿನ ಮುಂದೆ ಕುಳಿತಿದ್ದಳು. ಆಗ ಆ ಟ್ಯಾಂಕಿಗಿನ್ನೂ ಡಾಕ್ಟರ್ ಗುರಾಮಿಯ ಆಸ್ಪತ್ರೆಯೆಂದು ಹೆಸರಿಟ್ಟಿರಲಿಲ್ಲ. ಅದನ್ನು ಶಾಶ್ವತವಾಗಿ ಒಂದು ಹೆರಿಗೆ ವಾರ್ಡಾಗಿ ಮಾಡಿದ ನಂತರ ವಿಜು ಆ ಹೆಸರಿಟ್ಟದ್ದು. ಆತ ಬಳಿ ಬಂದಾಗ ಸದ್ದು ಮಾಡಬಾರದೆಂದು ಆಕೆ ಸನ್ನೆ ಮಾಡಿದಳು. ನಂತರ ಮೆಲ್ಲನೆ ಹೇಳಿದಳು.

''ನೋಡಿ, ಇದು ಮರಿ ಹಾಕುತ್ತಾ ಇದೆ.''

ಆತ ಅಲುಗಾಡದೆ ಆಕೆಯ ಬಳಿ ಹೋಗಿದ್ದ. ಅದೊಂದು ಸ್ವೇಡ್ ಟೆಯಿಲ್ ಆಗಿತ್ತು. ಕೆಂಪಗೆ ಗುಂಡಗೆ ಸುಂದರಿಯಾಗಿದ್ದ ಒಂದು ಮೀನು. ತುಸು ಹೊತ್ತು ಅದು ಈಜಾಡುತ್ತಿತ್ತು. ನಂತರ ತಳದಲ್ಲಿದ್ದ ಕಲ್ಲುಗಳಿಗೆ ಒಂದು ಇಂಚು ಮೇಲಿಂದ ಅಲುಗಾಡದೆ ನಿಲ್ಲುತ್ತಿತ್ತು. ಹೊಟ್ಟೆಯ ಅಡಿಭಾಗದಿಂದ ಎರಡು ಮೂರು ಮರಿಗಳು ಹೊರಗೆ ಬೀಳುತ್ತಿದ್ದವು. ನಂತರ ಒದ್ದಾಟ. ಆ ಮೀನು ಟ್ಯಾಂಕಿನ ಮೇಲ್ಭಾಗಕ್ಕೂ ತಳಭಾಗಕ್ಕೂ ಹಾರುತ್ತ ಹೊರಳಾಡುತ್ತ ನರಳಿತು.

''ಪಾಪ, ಅದಕ್ಕೆ ತುಂಬ ನೋವಾಗುತ್ತಿದೆಯೆಂದು ಕಾಣುತ್ತದೆ.''

ರಾಗಿಣಿ ಹೇಳಿದಳು. ಅವಳ ಧ್ವನಿಯಲ್ಲಿ ಸಹತಾಪವಿತ್ತು. ಅದು ಅವನನ್ನು ನೋಯಿಸಿತು. ಸ್ವಲ್ಪ ಹೊತ್ತಿನ ನರಳಾಟದ ನಂತರ ಆ ಮೀನು ಪುನಃ ಒಂದು ರೀತಿಯ ಶಾಂತ ಸ್ಥಿತಿಗೆ ಬಂದು ಈಜತೊಡಗಿತು. ಪುನಃ ಒಂದೆಡೆ ನಿಶ್ಚಲವಾಗಿ ನಿಂತಿತು. ಹೊಟ್ಟೆಯ ಅಡಿ ಭಾಗದಿಂದ ಮರಿಗಳು ಹೊರಗೆ ಬೀಳುತ್ತಿವೆ !

ಆತ ಅರ್ಧಗಂಟೆಗೂ ಹೆಚ್ಚು ಹೊತ್ತು ಆ ಟ್ಯಾಂಕಿನ ಮುಂದೆ ಕುಳಿತ. ಹೆರಿಗೆಯಾಗಿ ಮುಗಿಯುವಷ್ಟು ಹೊತ್ತಿಗೆ ಆಕೆ ವಿವಶಳಾಗಿದ್ದಳು.

ಫಕ್ಕನೆ ಒಂದು ಬಿಕ್ಕಳಿಕೆ ಕೇಳಿದಾಗ ರಾಮಚಂದ್ರನ ಗಮನ ಅತ್ತ ಹೋಯಿತು. ರಾಗಿಣಿ ಅಳುತ್ತಿದ್ದಳು. ಸೀರೆಯ ಸೆರಗಿನಿಂದ ಅವಳಿಗರಿವಿಲ್ಲದಂತೆ ಹರಿದ ಕಣ್ಣೀರನ್ನೊರಸಿಕೊಳ್ಳುತ್ತ ಆಕೆ ಮೌನವಾಗಿ ಅಳುತ್ತಿದ್ದಳು.

ರಾಗಿಣಿಯ ಹೆರಿಗೆ ತುಸು ಕಷ್ಟವೇ ಆಗಿತ್ತು. ಅವಳು ಮೊದಲೇ ಕೃಶಕಾಯಳಾಗಿದ್ದಳು. ಹೆರಿಗೆನೋವು ಕಾಣಿಸಿಕೊಂಡ ನಂತರವೇ ಅವಳನ್ನು ಆಸ್ಪತ್ರೆಗೆ ಸೇರಿಸಿದ್ದು. ಹತ್ತು ದೀರ್ಘ ಗಂಟೆಗಳ ಕಾಲ ಆಕೆ ಹೆರಿಗೆಯ ನೋವು ಸಹಿಸಿಕೊಳ್ಳುತ್ತ ಮಲಗಿದಳು. ಕೊನೆಗೆ ಅವಳೆಂದಳು, ''ನನಗೆ ಸಹಿಸಲಿಕ್ಕಾಗುತ್ತಿಲ್ಲ.'' ಒಂದು ಗಂಟೆ ಕಳೆದ ನಂತರ ಮಗುವನ್ನು ಹೊರಗೆ ತೆಗೆದರು.

ಸ್ನಾನ ಮುಗಿಸಿ ಆತ ಬೇಗನೆ ಹೊರಟ. ದೋಸೆ ಸಿದ್ಧವಾಗಿದೆಯೆಂದು ರೇಣು ಹೇಳಿದಳು. ಆತ ವಿಜುವನ್ನು ಕರೆಯಲೆಂದು ಹೋದ. ಅವನು ಟ್ಯಾಂಕಿನ ಮುಂದೆ ಅದೇ ಭಂಗಿಯಲ್ಲಿ ನಿಂತಿದ್ದ. ಅವನ ಮುಖ ಬಾಡಿಹೋಗಿತ್ತು.

''ಏನಾಯಿತು ವಿಜು ?'' ಆತ ಕೇಳಿದ.

ಅವನು ಏನೂ ಹೇಳಲಿಲ್ಲ. ಮೀನಿನ ಮರಿಗಳನ್ನೇ ಸುಮ್ಮನೆ ನೋಡುತ್ತಿದ್ದ. ಅವನು ಏನನ್ನೋ ಗಾಢವಾಗಿ ಯೋಚಿಸುತ್ತಿದ್ದಂತೆ ಕಂಡಿತು.

ಅಪ್ಪಾ, ಈ ಮರಿಗಳಿಗೆ ನಿಜವಾಗಲೂ ಈ ನೀರಿನಲ್ಲಿ ಅಮ್ಮನ ವಾಸನೆ ಸಿಗುತ್ತದೆಯೆ ?

ಹೌದು ಮಗನೇ ಸಿಗುತ್ತದೆ. ಎಲ್ಲ ಜೀವಿಗಳಿಗೂ ಹಾಗೆಯೇ. ಮಕ್ಕಳಿಗೆ ಅಮ್ಮನ ವಾಸನೆ ಗೊತ್ತಾಗಿಬಿಡುತ್ತದೆ.

ಆತ ಫಕ್ಕನೆ ಮಾತು ನಿಲ್ಲಿಸಿದ. ವಿಜುವಿನ ಮುಖ ಕಪ್ಪಾಗುವುದನ್ನೂ ಕಣ್ಣುಗಳಲ್ಲಿ ನೀರು ತುಂಬಿಕೊಳ್ಳುವುದನ್ನೂ ಆತ ನೋಡಿದ. ಆ ಕಣ್ಣೀರನ್ನು ಒರೆಸಲು ಅಸಮರ್ಥನಾಗಿದ್ದ. ಸಮಾಧಾನದ ಮಾತುಗಳೊಂದನ್ನೂ ಹೇಳಲಾಗದೆ ಆತ ಮಗನನ್ನು ಸುಮ್ಮನೆ ಎದೆಗವಚಿಕೊಂಡ. ಆತನ ಕಣ್ಣುಗಳೂ ತುಂಬಿಕೊಳ್ಳುತ್ತಿದ್ದವು. ಬಿಕ್ಕಳಿಸುವುದರ ಮಧ್ಯೆ ಅವನೆಂದ, ''ಅಪ್ಪಾ, ನಾವು ಈ ಮನೆ ಬಿಟ್ಟುಹೋಗುವುದು ಬೇಡ. ನಾವು ಇಲ್ಲೇ ಇರೋಣ.''

---


ಮಲಯಾಳಂ ಮೂಲ : **ಇ. ಹರಿಕುಮಾರ್**

ಕನ್ನಡಕ್ಕೆ : **ಪಾರ್ವತಿ ಜಿ. ಐತಾಳ್**

'ಸುರಗಂಗಾ', ಬಸ್ರೂರು ಅಡ್ಡರಸ್ತೆ

ಕುಂದಾಪುರ - ೫೭೬ ೨೦೧. ಉಡುಪಿ ಜಿಲ್ಲೆ

# ಶಿಕ್ಷಣ ಮತ್ತು ವಿದ್ಯಾರ್ಥಿ

**''ಮನುಷ್ಯನಲ್ಲಿ ಸುಪ್ತವಾಗಿರುವ ಶಕ್ತಿಯನ್ನು, ಅಂತರ್ಗತವಾಗಿರುವ ಪರಿಪೂರ್ಣತೆಯನ್ನು ಸಂವರ್ಧನೆಗೊಳಿಸಿ ಹೊರತರುವುದೇ ಶಿಕ್ಷಣ'' ಎಂದು ಸ್ವಾಮಿ ವಿವೇಕಾನಂದರು ಹೇಳಿದ್ದಾರೆ. ಇದು ಸಾಧ್ಯವಾಗಿ ಸುಸಂಸ್ಕೃತ ಮನಃಸ್ಥಿತಿಯ ವ್ಯಕ್ತಿತ್ವವನ್ನು ರೂಪಿಸುವುದೇ ನಿಜವಾದ ಶಿಕ್ಷಣ. ಶಿಕ್ಷಣ ಹಾಗೂ ಮಾನವ ಅಭಿವೃದ್ಧಿ ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ.**

ಕೆ. ಆರ್. ಉಮಾದೇವಿ ಉರಾಳ್

ಬಿಹಾರದ ಮುಜಾಫರ್‌ಪುರ ಜಿಲ್ಲೆಯ ಬೊಚಾಹ ಎಂಬ ಕುಗ್ರಾಮದ ದಲಿತ ಬಡ ಕುಟುಂಬದ ಅನಿತಾ ಕುಶ್ವಾಹ ಕಳೆದ ವರ್ಷ (೨೦೦೮) 'ಸಾಧಕ ಹುಡುಗಿ' ಎಂಬ ಯುನಿಸೆಫ್‌ನ ಪ್ರಶಂಸೆಗೆ ಪಾತ್ರಳಾದಳು. ಆಕೆಯ ಸಾಧನೆಯನ್ನು ರಾಷ್ಟ್ರೀಯ ಶಿಕ್ಷಣ ಮತ್ತು ಸಂಶೋಧನೆ ಮತ್ತು ತರಬೇತಿ ಮಂಡಳಿ (ಎನ್.ಸಿ.ಇ.ಆರ್.ಟಿ.) ಐದನೇ ತರಗತಿಯ ಪಠ್ಯಪುಸ್ತಕದಲ್ಲಿ ಅಳವಡಿಸಿದೆ.

ಅನಿತಾ ಹತ್ತು ವರ್ಷವಾದರೂ ಶಾಲೆಯ ಮೆಟ್ಟಿಲೇರಿರಲಿಲ್ಲ. ಆದರೆ ಅವಳ ಅದಮ್ಯ ಬೇಡಿಕೆಗೆ ಮನಕರಗಿ ಕೊನೆಗೆ ಆಕೆಯನ್ನು ತಂದೆ ತಾಯಿ ಶಾಲೆಗೆ ಸೇರಿಸಿದರು. ಬಡತನದಿಂದಾಗಿ ಮಧ್ಯದಲ್ಲಿ ಆಕೆಯೇ ಕುಟುಂಬಕ್ಕೆ ಸಹಾಯ ಮಾಡಬೇಕಾದ ಪರಿಸ್ಥಿತಿ ಬಂತು. ಅನಿತಾ ಮನೆಪಾಠ ಹೇಳಿದಳು. ಆದಾಯ ಸಾಕಾಗಲಿಲ್ಲ. ಅವಳ ಬಳಿ ಬಂದು ಜೇನುಸಾಕಣೆ ಪೆಟ್ಟಿಗೆ ಇತ್ತು. ಮೂರು ರಾಣಿ ಜೇನುಗಳು ಇದ್ದವು. ತಾಯಿ ರೇಖಾ ದೇವಿ ಸಾಲಮಾಡಿ ೬,೦೦೦ ರೂ. ತಂದುಕೊಟ್ಟಳು. ಜೇನುಸಾಕಣೆ ಪ್ರಾರಂಭ ಮಾಡಿದ ಅನಿತಾ ಮೊದಲ ವರ್ಷವೇ ೫೦,೦೦೦ ರೂ. ಲಾಭ ಗಳಿಸಿದಳು. ನಂತರ ಅದೇ ಉದ್ಯಮದಿಂದ ಶಿಕ್ಷಣ ಮುಂದುವರಿಸಿ ಇಂಗ್ಲಿಷ್‌ನಲ್ಲಿ ಪದವಿ ಪಡೆದಳು. ''ಪುಟ್ಟ ಪುಟ್ಟ ಜೇನ್ನೊಣಗಳು ನಿರಂತರವಾಗಿ ಜೇನು ಸಂಗ್ರಹದ ಕೆಲಸ ಮಾಡುವಾಗ ಎರಡು ಕೈಕಾಲು ಹೊಂದಿರುವ ನಾನೇಕೆ ಸಾಧನೆ ಮಾಡಬಾರದು ಎಂಬ ಪ್ರೇರಣೆಯನ್ನು ನಾನು ಜೇನ್ನೊಣಗಳಿಂದ ಪಡೆದೆ'' ಎಂದು ಹೇಳುವ ಅನಿತಾ ಸ್ತ್ರೀ ಜಾಗೃತಿಗಾಗಿ ಯುನಿಸೆಫ್ ಭಾರತದಲ್ಲಿ ಆಯ್ಕೆ ಮಾಡಿದ ೧೫ ಮಂದಿಯಲ್ಲಿ ಅತಿ ಚಿಕ್ಕವಳು. ಬಡತನದ ವಿರುದ್ಧ ಯುದ್ಧ ಮಾಡಲು ಅನಿತಾ ಹಿಡಿದ ಗುರಾಣಿಯೇ ಶಿಕ್ಷಣ.

ಈ ವಾಸ್ತವಿಕ ಪ್ರಸಂಗ ಶಿಕ್ಷಣ ಮತ್ತು ವಿದ್ಯಾರ್ಥಿಯ ನಡುವಿನ ಅನನ್ಯತೆಯನ್ನು, ಅವಿನಾಭಾವ ಸಂಬಂಧವನ್ನು ಹಾಗೂ ಅನುಸಂಧಾನವನ್ನು ತಿಳಿಸುವ ಒಂದು ಸಮರ್ಥ ನಿದರ್ಶನ. ಶಿಕ್ಷಣ ಎಂದರೆ ನಾಲ್ಕು ಗೋಡೆಗಳ ನಡುವೆ ಶಿಕ್ಷಕರ ಬೋಧನೆ ಪಡೆದು, ಪಠ್ಯಪುಸ್ತಕಗಳನ್ನು ಅಭ್ಯಸಿಸಿ, ಪರೀಕ್ಷೆಗಳನ್ನೆದುರಿಸಿ, ರ್‍ಯಾಂಕ್ ಪಡೆದು, ವೃತ್ತಿ ಶಿಕ್ಷಣ ಪ್ರವೇಶಿಸಿ ಕೊನೆಗೆ ಒಂದು ವೃತ್ತಿ ಪಡೆಯುವುದು ಎಂಬ ಭಾವನೆ ಹೆಚ್ಚಿನವರಲ್ಲಿದೆ. ಜೀವನ ನಿರ್ವಹಣೆಗೆ ಅಗತ್ಯವಾದ ಅನ್ನ ಸಂಪಾದನೆಯ ಉದ್ಯೋಗ ಒದಗಿಸಿ ಕೊಡುವುದೂ ಶಿಕ್ಷಣದ ಒಂದು ಪ್ರಮುಖ ಗುರಿ. ನಿಜ. ಆದರೆ ವಿದ್ಯಾರ್ಥಿಯ ಜೀವನದಲ್ಲಿ ಶಿಕ್ಷಣದ ಪ್ರಭಾವ ಕೇವಲ ಅಷ್ಟಕ್ಕೇ ಸೀಮಿತವಾಗಿಲ್ಲ. ಅಷ್ಟಕ್ಕೆ ಮಾತ್ರ ಸೀಮಿತವಾದಲ್ಲಿ ಶಿಕ್ಷಣದ ಉದ್ದೇಶ ವಿಫಲವಾದಂತೆಯೇ ಸರಿ. ''ಮನುಷ್ಯನಲ್ಲಿ ಸುಪ್ತವಾಗಿರುವ ಶಕ್ತಿಯನ್ನು, ಅಂತರ್ಗತವಾಗಿರುವ ಪರಿಪೂರ್ಣತೆಯನ್ನು ಸಂವರ್ಧನೆಗೊಳಿಸಿ ಹೊರತರುವುದೇ ಶಿಕ್ಷಣ'' ಎಂದು ಸ್ವಾಮಿ ವಿವೇಕಾನಂದರು ಹೇಳಿದ್ದಾರೆ. ಇದು ಸಾಧ್ಯವಾಗಿ ಸುಸಂಸ್ಕೃತ ಮನಃಸ್ಥಿತಿಯ ವ್ಯಕ್ತಿತ್ವವನ್ನು ರೂಪಿಸುವುದೇ ನಿಜವಾದ ಶಿಕ್ಷಣ. ಶಿಕ್ಷಣ ಹಾಗೂ ಮಾನವ ಅಭಿವೃದ್ಧಿ ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ.

ಇದಕ್ಕಾಗಿ ಯುನೆಸ್ಕೊ, ವಿದ್ಯಾರ್ಥಿಗಳು ಕರಗತಗೊಳಿಸಿಕೊಳ್ಳಬೇಕಾದ ಹತ್ತು ಜೀವನಕೌಶಲ ಶಿಕ್ಷಣ ಸೂತ್ರಗಳನ್ನು ಮುಂದಿಡುತ್ತವೆ. ಅವುಗಳೆಂದರೆ – ನಿರ್ಧಾರ ಸಾಮರ್ಥ್ಯ, ಸಮಸ್ಯೆ ನಿವಾರಣೆ, ಕ್ರಿಯಾತ್ಮಕ ಯೋಜನೆ, ವಿಮರ್ಶಾಪರತೆ, ಪ್ರಭಾವಶಾಲಿ ಸಂವಹನ, ಕೌಶಲ್ಯ, ತಿಳುವಳಿಕೆ, ಅನುಭೂತಿ ಶಕ್ತಿ, ಭಾವನೆಗಳ ಮೇಲೆ ನಿಯಂತ್ರಣ ಹಾಗೂ ಮಾನಸಿಕ ಒತ್ತಡ ನಿರ್ವಹಣೆ.

ಮಾನವ ಸಂಪದಭಿವೃದ್ಧಿಗಾಗಿ 'ಎಲ್ಲರಿಗೂ ಶಿಕ್ಷಣ' ಎಂಬ ಆದರ್ಶವನ್ನು ಸಾಕಾರಗೊಳಿಸಲು ಸಂವಿಧಾನದಲ್ಲಿ



ಶಿಕ್ಷಣವನ್ನು ಮೂಲಭೂತ ಹಕ್ಕುಗಳಲ್ಲಿ ಅಳವಡಿಸಲಾಗಿದೆ. ಇದಕ್ಕಾಗಿ ಸರ್ವಶಿಕ್ಷಾ ಅಭಿಯಾನ, ಸಂಪೂರ್ಣ ಸಾಕ್ಷರತಾ ಆಂದೋಲನ, ಮುಂದುವರಿಕೆ ಕಲಿಕಾ ಕೇಂದ್ರ, ಚಿಣ್ಣರ ಅಂಗಳ, ಬಿಸಿಯೂಟ, ಉಚಿತ ಬಟ್ಟೆ, ಸೈಕಲ್, ಪಠ್ಯಪುಸ್ತಕ ವಿತರಣೆ ಮುಂತಾದ ಶೈಕ್ಷಣಿಕ ಯೋಜನೆಗಳನ್ನು ರೂಪಿಸಲಾಗುತ್ತಿದೆ.

ಹೀಗೆ ಹತ್ತಾರು ಶೈಕ್ಷಣಿಕ ಯೋಜನೆಗಳನ್ನು ರೂಪಿಸಿಕೊಂಡಿರುವ ವ್ಯವಸ್ಥೆ ವಿದ್ಯಾರ್ಥಿಗಳ ಬೌದ್ಧಿಕ ವಿಕಾಸದಲ್ಲಿ ಗುರುತರ ಪಾತ್ರ ವಹಿಸುವ ಪಠ್ಯಪುಸ್ತಕ ರಚನೆಯಲ್ಲಿ ವಿಶೇಷ ಗಮನ ಹರಿಸಬೇಕಾಗುತ್ತದೆ. ಪಠ್ಯಪುಸ್ತಕಗಳು ಮಕ್ಕಳ ಮನಸ್ಸನ್ನು ಆಕರ್ಷಿಸಿ ಅರಳಿಸುವಂತಿರಬೇಕು. ವೈಜ್ಞಾನಿಕ ಮನೋಭಾವ, ವೈಚಾರಿಕ ಚಿಂತನೆಗೆ ಎಡೆಕೊಡುವಂತಿರಬೇಕು, ಸಮಕಾಲೀನ ವಿಚಾರಗಳ ಬಗ್ಗೆ ಅರಿವು ಮೂಡಿಸುವಂತಿರಬೇಕು. ಚಿರಂತನ ಮೌಲ್ಯಗಳಾದ ನೈತಿಕತೆಯ ಅಂಶಗಳನ್ನು ಎಳೆಯ ಮನಗಳಲ್ಲಿ ಹಸಿಗೋಡೆಯಲ್ಲಿ ಹರಳೊತ್ತಿದಂತೆ ಬಿತ್ತುವಂತಿರಬೇಕು. ಆದರೆ ಇಂದಿನ ಶಿಕ್ಷಣ ವ್ಯವಸ್ಥೆಯಲ್ಲಿ ಆದರ್ಶವಾದ ಪಠ್ಯಪುಸ್ತಕ ರಚನೆ ಇನ್ನೂ ಕೈಗೂಡಬೇಕಾದ ಆಶಯವಾಗಿ ಮಾತ್ರ ಉಳಿದಿರುವುದು ವಿಷಾದನೀಯ.

**ಇಂದು ಏನಾಗಿದೆ ?**

ಇಂದು ಶಿಕ್ಷಣವು ವಿದ್ಯಾರ್ಥಿಗಳಿಗೆ ಆನಂದಕರವಾದ ಅಂಶವಾಗಿ ಉಳಿಯದೆ ಅದು ಒಂದು ಹೊರೆಯಾಗಿಬಿಟ್ಟಿದೆ. ಶುಷ್ಕ ಮಾಹಿತಿಗಳ ಸಂಗ್ರಹಣೆಯನ್ನು ಹೆಚ್ಚು ಹೆಚ್ಚು ತಲೆಯಲ್ಲಿ ತುಂಬಿಸಿಟ್ಟುಕೊಳ್ಳಬೇಕಾದ ಅಗತ್ಯ ತಲೆದೋರಿದೆ. ಶಿಕ್ಷಣವು ಕೇವಲ ಉದ್ಯೋಗ ಗಳಿಕೆಯಷ್ಟನ್ನೇ ಗುರಿಯಾಗಿಸಿಕೊಂಡು ವಿದ್ಯಾರ್ಥಿಗಳು ಆತಂಕ, ಒತ್ತಡ, ಉದ್ವಿಗ್ನತೆಗಳಲ್ಲಿ ತಮ್ಮ ವಿದ್ಯಾರ್ಥಿ ಜೀವನ ಕಳೆಯುವಂತಾಗಿದೆ. ಹಲವು ಬಾರಿ ಖಿನ್ನತೆ, ಆತ್ಮಹತ್ಯೆಗೂ ಎಡೆಮಾಡಿಕೊಡುವಂಥ ಒತ್ತಡ ವಿದ್ಯಾರ್ಥಿ ಸಮೂಹದ ಮೇಲಿದೆ.

ಇಡಿಯ ಶಿಕ್ಷಣ ರಂಗವೇ ಸ್ಪರ್ಧಾತ್ಮಕವಾಗಿರುವಾಗ ಪೋಷಕರು ಕೂಡ ತಮ್ಮ ಮಗು ಯಶಸ್ವಿಯಾಗಲಿ ಎಂದು ಹಾರೈಸುವುದು ಅನಿವಾರ್ಯವೇ ಆಗುತ್ತದೆ. ಈ ಸ್ಪರ್ಧೆಯೊಂದಿಗೆ ನಾಗಾಲೋಟ ಹೂಡಲು ಅಂಕಗಳಿಕೆ ಮತ್ತು ಉದ್ಯೋಗ ಗಳಿಕೆಯ ಗುರಿಯನ್ನು ಮಗುವಿನ ಮುಂದಿಡಬೇಕಾಗುತ್ತದೆ. ಆಗ ಸುಸಂಸ್ಕೃತ ವ್ಯಕ್ತಿತ್ವವನ್ನು ರೂಪಿಸಬೇಕಾದ ಶಿಕ್ಷಣದ ಗುರಿ ಅದೆಲ್ಲೋ ಕರಗಿ ಮಾಯವಾಗಿಬಿಟ್ಟಿರುತ್ತದೆ. ಗುಣಾತ್ಮಕ ಶಿಕ್ಷಣವನ್ನು ಪಡೆದು ಗಿಡದಲ್ಲಿ ಸಹಜವಾಗಿ ಅರಳಿ ಸುಗಂಧ ಸೂಸುತ್ತಾ ಸೊಂಪಾಗಿ ಬಿರಿದ ಹೂವಿನಂತಿರಬೇಕಾದ ವಿದ್ಯಾರ್ಥಿ ಬಲವಂತವಾಗಿ ಅರಳಿಸಿದ ಹೂವಿನಂತಾಗುತ್ತಾನೆ. ಆ ಹೂವಿಗೆ ನೋಡಲೂ ಸೊಬಗಿರುವುದಿಲ್ಲ, ಅರಳಿದರೂ ಕಂಪು ಸೂಸುವುದಿಲ್ಲ.

**ಏನು ಆಗಬೇಕಿದೆ ?**

ಇಂತಹ ಸನ್ನಿವೇಶದಲ್ಲಿ ಪೋಷಕರು ಮತ್ತು ಶಿಕ್ಷಕರು ಶಿಕ್ಷಣದ ಹೊಣೆಗಾರಿಕೆಯನ್ನು ಹೊರಲು ತಾವು ಹೆಚ್ಚಿನ ಹೊಣೆಗಾರರಾಗಬೇಕಾಗುತ್ತದೆ.

ಮನೆಯೇ ಮೊದಲ ಪಾಠಶಾಲೆ ಎಂಬಂತೆ ಮೊದಲನೆಯದಾಗಿ ಮೌಲ್ಯಗಳ ಅರಿವು, ಗುರು ಹಿರಿಯರಲ್ಲಿ ಗೌರವ, ಸಮವಯಸ್ಕರಲ್ಲಿ ಸ್ನೇಹ, ಪ್ರಾಣಿಪಕ್ಷಿ ಪರಿಸರ ಪ್ರೇಮ, ಸರಳವಾದ ಸಹಜವಾದ ನಡವಳಿಕೆ ಇವುಗಳನ್ನು ತಮ್ಮ ಮಕ್ಕಳಲ್ಲಿ ಮೈಗೂಡಿಸಬೇಕೆಂಬ ತುಡಿತ ಪೋಷಕರಲ್ಲಿ ಇರಬೇಕಾಗುತ್ತದೆ. ಏಕೆಂದರೆ ಅವರೇ ಮಗುವಿನ ಮೊದಲ ಶಿಕ್ಷಕರು.

ಇನ್ನು ಇಂದು ಕಂಪ್ಯೂಟರ್, ಇಂಟರ್‌ನೆಟ್, ಇ-ಮೇಲ್, ಆನ್‌ಲೈನ್ ಎಜುಕೇಷನ್ ಎಂದು ಏನೇ ತೀವ್ರ ಪ್ರಗತಿಪರ ಬದಲಾವಣೆಗಳಾಗುತ್ತಿದ್ದರೂ ಯಾವುದೇ ಶಿಕ್ಷಣ ವ್ಯವಸ್ಥೆಯು ಉತ್ಕೃಷ್ಟತೆ ಪಡೆಯುವಂತಾಗುವುದು ಅರ್ಪಣಾ ಮನೋಭಾವದ ಶಿಕ್ಷಕರಿಂದ ಹಾಗೂ ಅವರಲ್ಲಿ ಗೌರವ ಪ್ರೀತಿ ಹೊಂದಿರುವ ಜ್ಞಾನದಾಹಿ ವಿದ್ಯಾರ್ಥಿಗಳಿಂದ ಎನ್ನುವುದರಲ್ಲಿ ಎರಡು ಮಾತಿಲ್ಲ. ಈ ಗುರು ಶಿಷ್ಯ ಸಂಬಂಧದ ಮಾನವೀಯ ಎಳೆಯನ್ನು ಯಾವುದೇ ಸುಧಾರಿತ ತಂತ್ರಜ್ಞಾನ ಎಂದಿಗೂ ಸರಿಗಟ್ಟಲಾರದು. ಇಷ್ಟು ಪ್ರಾಮುಖ್ಯತೆಯುಳ್ಳ ಶಿಕ್ಷಕ ವರ್ಗ ವಿದ್ಯಾರ್ಥಿಗಳನ್ನು ರೂಪಿಸುವಲ್ಲಿ ಗುರುತರ ಹೊಣೆಗಾರಿಕೆ ಹೊಂದಿದೆ.

ಮೊದಲನೆಯದಾಗಿ, ವಿವಿಧ ಬುದ್ಧಿಮಟ್ಟದ ಎಲ್ಲ ವಿದ್ಯಾರ್ಥಿಗಳಲ್ಲೂ ಆಸಕ್ತಿ ಮೂಡುವಂತೆ, ಅರ್ಥವಾಗುವಂತೆ ಪಾಠ ಮಾಡಬಲ್ಲ ಬೋಧನಾ ಕೌಶಲ್ಯವನ್ನು ಕರಗತಗೊಳಿಸಿಕೊಳ್ಳುವುದು ಮೂಲಭೂತ ಅಗತ್ಯ. ಅದರೊಂದಿಗೆ, ತನ್ನ ಬೋಧನೆಯ ಎಡೆ ಎಡೆಯಲ್ಲಿ ಸುಸಂಗತವೆನ್ನಿಸುವಂತೆ ಸಂಸ್ಕೃತಿಯ ಮೌಲ್ಯಗಳನ್ನು, ಉದಾತ್ತ ವ್ಯಕ್ತಿಗಳ ಜೀವನ ಕ್ರಮವನ್ನು, ದೇಶದ ಹಿರಿಮೆಯನ್ನು, ಸಮಕಾಲೀನ ಸಮಸ್ಯೆಗಳು, ಪ್ರಗತಿ, ವಸ್ತುಸ್ಥಿತಿಗಳತ್ತ ಗಮನ ಸೆಳೆವ ಅಭಿರುಚಿ ಮತ್ತು ಕೌಶಲ್ಯ ಓರ್ವ ಶಿಕ್ಷಕನಿಗಿರಬೇಕಾಗುತ್ತದೆ. ಏಕೆಂದರೆ ತರಗತಿಯಲ್ಲಿ ಪಾಠಬೋಧನೆ ಒಂದು ಯಾಂತ್ರಿಕ ಕ್ರಿಯೆಯಲ್ಲ. ಒಬ್ಬ ಪ್ರತಿಭಾವಂತ ಶಿಕ್ಷಕನಿಗೆ ಬೋಧನೆ ಒಂದು ಸೃಜನಶೀಲ ಕಲೆ. ಪಠ್ಯದ ವಿಷಯಕ್ಕೆ ಅನುಗುಣವಾಗಿ, ಪೂರಕವಾಗಿ ಒಬ್ಬ ಅಧ್ಯಾಪಕ ವಿದ್ಯಾರ್ಥಿಗಳ ಗಮನ ಸೆಳೆದು ವಿಷಯದಲ್ಲಿ ಸುಸಂಸ್ಕೃತ ಅಭಿರುಚಿ ಮೂಡಿಸಬೇಕಾಗುತ್ತದೆ. ಏಕೆಂದರೆ ಅಧ್ಯಾಪಕರೇ ವಿದ್ಯಾರ್ಥಿಗಳ ಎರಡನೆಯ ಪೋಷಕರಾಗಿರುತ್ತಾರೆ.



ಇಂತಹ ಹೊಣೆಗಾರಿಕೆಯನ್ನು ಶಿಕ್ಷಕರಿಂದ ನಿರೀಕ್ಷಿಸುವಾಗ ಶಿಕ್ಷಕರನ್ನು ಅಷ್ಟೇ ಗೌರವಯುತವಾಗಿ ನಡೆಸಿಕೊಳ್ಳುವ ವ್ಯವಸ್ಥೆಯೂ ಅಗತ್ಯ. ಶಿಕ್ಷಕರಿಗೆ ಸುಭದ್ರವಾದ ವೇತನ ಶ್ರೇಣಿ, ಅನಗತ್ಯ ಕೆಲಸಗಳ ಹೊಣೆಯಿಂದ ಪಾರುಮಾಡುವುದು, ಅಧ್ಯಯನಕ್ಕೆ, ಹೆಚ್ಚಿನ ಶಿಕ್ಷಣಾರ್ಹತೆಗೆ ಅವಕಾಶ, ಕೆಳಹಂತದ ಅಧ್ಯಾಪಕರಿಗೆ ಹೆಚ್ಚಿನ ಗೌರವ ಮುಂತಾದ ಕ್ರಾಂತಿಕಾರಿ ಪ್ರಯೋಗಗಳನ್ನು ಅಳವಡಿಸಿಕೊಳ್ಳುವುದು ಅಗತ್ಯ.

ಜಿ. ಪಿ. ರಾಜರತ್ನಂ ಅವರ ಜನ್ಮಶತಮಾನೋತ್ಸವದ ಬೆಳಕಿನಲ್ಲಿ (ಜನನ : ೦೫-೧೨-೧೯೦೮) ಹೇಳುವುದಾದರೆ ತಮ್ಮ ಕಂಚಿನಂಥ ಕಂಠದಲ್ಲಿ ವಿದ್ಯಾರ್ಥಿ ಸಮುದಾಯವನ್ನು ತಮ್ಮ ಅದ್ಭುತ ಬೋಧನಾ ಕೌಶಲ್ಯದಿಂದ ಮಾಂತ್ರಿಕ ಮೋಡಿಗೊಳಪಡಿಸುತ್ತಿದ್ದ ಅವರು ಒಬ್ಬ ಆದರ್ಶ ಶಿಕ್ಷಕನಾಗಲು ಹೇಳುತ್ತಿದ್ದ ಕಿವಿಮಾತುಗಳಿಗೆ ನಾವಿಂದು ಕಿವಿಗೊಡಬೇಕಿದೆ. ಒಂದು ಗಂಟೆಯ ಪಾಠಕ್ಕೆ ಎರಡು ಗಂಟೆ ಸಿದ್ಧತೆ ಮಾಡಿಕೊಳ್ಳಬೇಕು, ವಿದ್ಯಾರ್ಥಿಗಳ ಉತ್ಸಾಹ ಹೆಚ್ಚುವಂತೆ ಶಿಕ್ಷಕರು ಪ್ರೇರೇಪಿಸಬೇಕು. ನೂರು ವಿದ್ಯಾರ್ಥಿಗಳಿಗೆ ಪಾಠ ಹೇಳಿದ ನಂತರವೂ ತಾನೂ ಒಬ್ಬ ವಿದ್ಯಾರ್ಥಿಯೇ ಎಂಬ ಭಾವ ಶಿಕ್ಷಕರಲ್ಲಿರಬೇಕು ಎಂಬುದು ಜಿ. ಪಿ. ರಾಜರತ್ನಂ ಅವರ ಹಿತನುಡಿ. ಅಂತಹ ಶ್ರದ್ಧಾವಂತ ಶಿಕ್ಷಕರ ಸಂಖ್ಯೆ ಹೆಚ್ಚಿದಾಗಲೇ ಶಿಕ್ಷಣದ ನಿಜವಾದ ಆಶಯ ವಿದ್ಯಾರ್ಥಿಗಳಿಗೆ ಲಭ್ಯವಾದೀತು.

ಕೆ. ಆರ್. ಉಮಾದೇವಿ ಉರಾಳ್
ಉಪನ್ಯಾಸಕಿ, 'ವನಸುಮ', ಆಜಾದ್ ರಸ್ತೆ
ತೀರ್ಥಹಳ್ಳಿ - ೫೭೭ ೪೩೨, ಶಿವಮೊಗ್ಗ ಜಿಲ್ಲೆ

## ಗತವೈಭವ

**ನಿನ್ನ ಮುಖ ಮುದುಡಿದರೆ**

**ಕನ್ನಡಿಯ ಮೇಲೆ ಮುನಿಸೇಕೆ ?**

**ಮಾಜಿ ಚೆಲುವೆ ಈ ಮುಪ್ಪಿನಲಿ**

**ಯೌವನದ ಹಂಬಲವೇಕೆ !!**

'ಹೊಟ್ಟೆರಾಯನ ನಿತ್ಯದಟ್ಟಹಾಸವೊ ಬಾಳು
ದೃಷ್ಟ ಧಣಿಯೊಳಿಗಕೆ ಸೊಟ್ಟು ಮೈ ಬಾಗು
ಹಿಟ್ಟಿಗಗಲಿದ ಬಾಯಿ, ಬಟ್ಟೆಗೊಡ್ಡಿದ ಕೈಯಿ
ಇಷ್ಟೇ ನಮ್ಮೆಲ್ಲ ಕತೆ - ಮಂಕುತಿಮ್ಮ'
– ಡಿವಿಜಿ

ಹೆಸರಾಂತ ಯಕ್ಷಿಣಿಕಾರ ಜ್ಯೂನಿಯರ್ ಪಿ. ಸಿ. ಸರ್ಕಾರ್, ಕೊಲ್ಕತ್ತಾದ ಒಂದು ಕಡೆ, ತಾರಾ ಹೋಟೆಲ್ ನಿರ್ಮಿಸುತ್ತಿದ್ದು, ಅಲ್ಲಿ ದೆವ್ವಗಳ ಜತೆ ಭೋಜನ ಸವಿಯುವ ಅವಕಾಶವನ್ನು ಗ್ರಾಹಕರಿಗೆ ಒದಗಿಸಲಿದ್ದಾರಂತೆ! ಅತಿಮಾನುಷ ಕಲ್ಪನೆಯೊಂದನ್ನು ಸಾಕಾರಗೊಳಿಸಲು ಹೊರಟಿರುವ ಸರ್ಕಾರ್‌ಗೆ ದೊಡ್ಡದೊಂದು ಸಲಾಂ ಹೇಳಲೇಬೇಕು.



# ಭೋಜನವಾದ

ಮುಸ್ಸಂಜೆ ಹೊತ್ತು ದೆವ್ವಗಳ ಭೋಜನ ಸಮಯವೆಂತಲೂ, ಅಂಥ ಅಪವೇಳೆಯಲ್ಲಿ ಉಣ್ಣುವವರು ದೆವ್ವಗಳಾಗುತ್ತಾರೆ ಎಂತಲೂ ಹೇಳುತ್ತಿದ್ದ ನನ್ನಜ್ಜಿ, ಆ ಸಮಯದಲ್ಲಿ ಮನೆಯ ಹುಡುಗರಿಗೆ ಊಟ ಕೊಡುತ್ತಿರಲಿಲ್ಲ. ಇದ್ದೂ ಇದ್ದೂ ಇಳಿಹೊತ್ತಿನಲ್ಲಿ ತಿನ್ನುವವರು ಮುಗ್ಗಲಗೇಡಿಗಳೆಂದೂ ಸಮ್ಮಸ್ಟು ಬೈಯುತ್ತಿದ್ದಳು. ಹೀಗೆ, ಮನುಷ್ಯರ ಭೋಜನ ವೇಳೆಯಿಂದ ದೆವ್ವಗಳನ್ನು ದೂರವಿಟ್ಟು, ಅವುಗಳಿಗಾಗಿ ಪ್ರತ್ಯೇಕ ಟೈಮ್ ಟೇಬಲ್ ಗೊತ್ತುಮಾಡಿದ್ದರೇನೊ! ಊಟ ಕೊಡದೆ, 'ದೆವ್ವದ ನೆಪ' ಹೇಳಿ, ಸತಾಯಿಸುತ್ತಿದ್ದ ಅಜ್ಜಿಯ ಮೇಲೆ ಹುಡುಗರಾದ ನಾವೆಲ್ಲ, ''ಈ ಅಜ್ಜಿ ಸಾಯಬಾರದೆ, ಪೀಡಾ'' ಎಂದೇನೊ ಶಾಪ ಕೊಡುತ್ತಿದ್ದುದುಂಟು. ಮತ್ತೆ ಮರುಕ್ಷಣದಲ್ಲಿ, ಹಾಗೆ ಸತ್ತುಹೋಗಿ, ದೆವ್ವವಾಗಿ ಕಾಡಲಾರಂಭಿಸಿದರೆ... ಎಂದು, ಹೆದರಿ, ವಿಶಾಪ ಹೇಳುತ್ತಿದ್ದೆವು.

ಈಗ ಯಕ್ಷಿಣಿಕಾರ ಸರ್ಕಾರ್‌ರ ಹೋಟೆಲ್‌ಗೆ ನನ್ನಜ್ಜಿಯನ್ನು ಕರೆದೊಯ್ಯಬೇಕು. ಅಲ್ಲಿ ಅವಳೆದುರಿಗೇ ಕುಂತು ದೆವ್ವಗಳ ಜತೆ ಕವಳ ಕತ್ತರಿಸುತ್ತ, ಸೇಡು ತೀರಿಸಿಕೊಳ್ಳಬೇಕೆನಿಸುತ್ತಿದೆ. ಆದರೆ ಅಜ್ಜಿ ಈಗಿಲ್ಲ.

ಅರೆರೆ... ಇದೇನಿದು! ಮನದಂಗಳದಲ್ಲಿ ಈಗ ಭೋಜನಾವಲೋಚನೆಗಳು ಥಕ್ ಥೈ... ಥಕ್ ಥೈ... ಎಂದು ಕುಣಿಯತೊಡಗಿವೆ...!! ಇದಕ್ಕೆ ಸರ್ಕಾರ್‌ರ 'ದೆವ್ವ ಭಕ್ತಿ' ಕಾರಣವಾಗಿರಬಹುದು. ಅದೇನಾದರೂ ಇರಲಿ, ಬುತ್ತಿಯಂತೂ ಬಿಚ್ಚಿರುವೆ. ಸವಿಯಲು ನೀವೂ ಬನ್ನಿ.

ನಮ್ಮ ಈ ಜನಕ್ಕೂ ಭೋಜನಕ್ಕೂ ಹಳೆಯ ಕಾಲದ ನೆಂಟಸ್ತಿಕೆ. ಜೀವನ ಮತ್ತು ಭೋಜನಗಳೆರಡೂ ಗಳಸ್ಯ ಕಂಠಸ್ಯ. ಒಂದನ್ನು ಬಿಟ್ಟು ಇನ್ನೊಂದಿಲ್ಲ. ನಾವೆಲ್ಲರೂ ಭೋಜನ ಜೀವಿಗಳು. 'ಭೋಜನ ಹಿತಾಯ ಜೀವನ ಸುಖಾಯ' ಅಂಬೋದು ಬದುಕಿನ ಪರಮ ಸತ್ಯ. ನಾನು, ಒಬ್ಬ ಭೋಜನ ಸ್ನೇಹಿ. ಭೋಜನವೆಂಬುದು ಇರದೇ ಹೋಗಿದ್ದರೆ, ಜೀವನದಲ್ಲಿ ಇನ್ನೇನಿದೆ ಸುಡಗಾಡು! ಹಾಗಂತ ಹೇಳುವ 'ಬೋ' ಜನರಲ್ಲಿ ನೀವೂ ಒಬ್ಬರೆಂದುಕೊಳ್ಳುವೆ. ಭೋಜನವೇ ಜೀವನದ ಜೀವಜೀವಾಳ. ಜೀವನಂ ಸರ್ವಂ ಭೋಜನಮಯಂ.

ಸುಖಭೋಜನದ ಮುಂದೆ ಎಂಥ ಸ್ವರ್ಗಸುಖವೂ ಬಿದ್ದುಹೋಗಬೇಕು. 'ಉಪ'ಜೀವನಕ್ಕಾಗಿ ಭೋಜನವೆ ಹೊರತು, ಯಃಕಶ್ಚಿತ ಭೋಜನಕ್ಕಾಗಿ ಈ ಜೀವನವಲ್ಲ ಎಂದೆಲ್ಲ ಪ್ರತಿಪಾದಿಸುವ ಭೋಜನದ್ವೇಷಿಗಳನ್ನು ನಾನು ದ್ವೇಷಿಸುತ್ತೇನೆ. ಅಲ್ಲದೆ, ಅಂಥ ಪರಮಸುಖ ದಯಪಾಲಿಸಿರುವ ಭೋಜನದೇವಗೆ ಹೀಗೆ ಅವಮಾನಿಸುವದೆ! ಹೋಗ್ಲಿ, ಆತನ ಒಗೆತನವಿಲ್ಲದೆ ಯಾರಾದರೂ ಈ ಜಗತ್ತಿನಲ್ಲಿ ಬದುಕಿದ್ದಾರೆಯೆ, ಹೇಳಿ ನೋಡೋಣ . ಯಾರು ಏನೇ ತಕರಾರು ತೆಗೆಯಲಿ, ನಾನೊಬ್ಬ ಭೋಜನವಾದಿ. ಹಾಗಂತ ಹೇಳುವಲ್ಲಿ ಅಭಿಮಾನಪಡುತ್ತೇನೆ. ಸಾಲ ಮಾಡಿಯಾದರೂ ಸೈ, ಹೋಳಿಗೆ ತುಪ್ಪಕ್ಕೆ ಜೈಕಾರ ಹಾಕುವ ಕವಳಪ್ರಿಯರ ಶಾಲೆಗೆ ಸೇರಿದವನು ನಾನು.

ಅನ್ನದೇವರ ಮುಂದೆ ಇನ್ನು ಅದೆಂಥ ದೇವರಿದ್ದಾನು? ''ಪೈಲೆ ಪೇಟೋಬಾ ನಂತರ ವಿಠೋಬಾ'' ಎಂಬುದು ಮರಾಠಿಗರಲ್ಲಿ ಮನೆಮಾತು. ಹೊಟ್ಟೆಪ್ಪನ ಮುಂದೆ ಯಾವ ಜಟ್ಟೆಪ್ಪನ ಆಟವೂ ನಡೆಯುವದಿಲ್ಲ. ಸಕಲ ಬ್ರಹ್ಮಾಂಡವನ್ನು ತರಗೆಲೆಯಂತೆ ಜಾಲಾಡಿಸುವಷ್ಟು ಬಲಶಾಲಿ ಈ ಭೋಜನದೇವ. ಖಾನಾ, ಪೀನಾ, ಮೋಜ್ ಉಡಾನಾ. ಹೊಟ್ಟೆ ತುಂಬ ಮುದ್ದೆ, ಕಣ್ಣು ತುಂಬ ನಿದ್ದೆ ಇವೆರಡು ಇದ್ದವನು ರಾಜಪುರುಷ.

ಎಲ್ಲರೂ ಮಾಡೋದು ಗೇಣು ಹೊಟ್ಟೆಗಾಗಿ, ಗೇಣು ಬಟ್ಟೆಗಾಗಿ ಎಂದು ದಾಸರು ಸುಮ್-ಸುಮ್ಮನೆ ಹೇಳಿಲ್ಲ. ಪ್ರಸಾದ, ಊಟ, ಕವಳ, ಕೂಳು ಅಂತೆಲ್ಲ ಕರೆಯಿಸಿಕೊಳ್ಳುವ ಈ ಕ್ರಿಯೆಯಲ್ಲಿ, ಸುಖ ಭೋಜನ, ರಾಜ ಭೋಜನ, ಸುಗ್ರಾಸ ಭೋಜನ, ಮೃಷ್ಟಾನ್ನ ಭೋಜನ, ಬ್ರಹ್ಮ ಭೋಜನ, ಸಾತ್ವಿಕ ಭೋಜನ, ಅಸುರ ಭೋಜನಗಳಿತ್ಯಾದಿ, ಈ ಭೋಜನ ಮಹಾವೃಕ್ಷದ ಟಿಸಿಲು-ಟೊಂಗೆಗಳಷ್ಟೆ! ನಮಗಿರುವ ಶಾಕ-ಮಾಂಸ, ಆಹಾರದ ತಲಬನ್ನು ದೇವರಿಗೂ ತಗಲಿಸಿದ ಭೂಪರು ನಾವು. ಬೇಡರ ಕಣ್ಣಪ್ಪನ ಕತೆ ಗೊತ್ತಲ್ಲ! ಮೊದಲು ಅವನಿಗೆ ನೈವೇದ್ಯ ಸಲ್ಲಿಸಿದ ಮೇಲೆಯೆ ನಾವುಣ್ಣೋದು. ಇಂಥ ನೈವೇದ್ಯದ ಬಲ ಇರುವದರಿಂದಲೆ, ತನ್ನ ಕೆಲಸ ಸಾಕ್ಷಾತ್ ದೇವರ ಕೆಲಸ ವೆಂದೇ ಸಾರುವ, ಸರಕಾರಿ ಕಚೇರಿಗಳ ಹಿರಿ-ಕಿರಿ ಮರಿ ದೇವತೆಗಳೆಲ್ಲ ನಮ್ಮ ಇಷ್ಟಾರ್ಥ ಪೂರೈಸುತ್ತಿರುವದು!

'ಯದ್ ಭೋಜನಂ, ತದ್ ಭಾವಂ' ಉಣ್ಣುವ ಊಟಕ್ಕೂ, ನಮ್ಮ ಸ್ವಭಾವಕ್ಕೂ ನೇರಾನೇರ ಸಂಬಂಧವಿದೆ. ''ನಿನ್ನಿಷ್ಟ ಏನೆಂದು ಹೇಳು, ನೀನೆಂಥವನೆಂದು ನಾನು ಹೇಳುತ್ತೇನೆ'' ಅಂತಾನೆ ತತ್ವಜ್ಞಾನಿ ಬರ್ಟ್ರಂಡ್ ರಸ್ಸೆಲ್. ನಮ್ಮ ಆಚಾರ-ವಿಚಾರ, ಸಂಸ್ಕೃತಿ-ಸಂಸ್ಕಾರ, ಅಭಿರುಚಿ, ಆಸಕ್ತಿಗಳು ನಾವು ಭಕ್ಷಿಸುವ ಪದಾರ್ಥಗಳ ಮೇಲೆ ಅವಲಂಬಿತ ವಾಗಿವೆ ಎಂಬುದು ರಸ್ಸೆಲ್‌ನ ವಿಚಾರ. ಅಂದ್ಮೇಲೆ, ನಮ್ಮ ಭೋಜನಕ್ಕೂ ಒಂದು 'ವಜನ'ವಿದೆ ಅಂದಂತಾಯಿತು.

ನಮ್ಮೆಲ್ಲ ಮದುವೆ-ಮುಂಜಿವೆ, ಪ್ರಸ್ತ, ಸೀಮಂತನ, ನಾಮಕರಣ, ಹುಟ್ಟುಹಬ್ಬದ ಸಡಗರಗಳಂತೂ ಸರಿಯೇ ಸರಿ. ಶ್ರಾದ್ಧ, ಪುಣ್ಯತಿಥಿಗಳೆಂಬ ಸಾವಿನ ನಂತರದ ಅಪರ ಕ್ರಿಯೆಗಳಲ್ಲೂ ಷಡ್ರಸೋಪೇತ ಭೋಜನವೇ ನಮಗೆ ಪ್ರಾಣಜೀವಾಳವಯ್ಯ!

ಸಭೆ-ಸಮಾರಂಭ, ಸಮ್ಮೇಳನ-ಸಮಾವೇಶಗಳಲ್ಲೂ ಭೋಜನವೇ ಪ್ರಧಾನ. ಅವುಗಳ ಯಶ-ಅಪಯಶಸ್ಸುಗಳ ಮೌಲ್ಯಮಾಪನದ ಹೊಣೆಗಾರಿಕೆ ಭೋಜನ ರಾಜನದು. ನಮ್ಮ ಸಾಹಿತ್ಯ ಸಮ್ಮೇಳನಗಳು ಎಷ್ಟು ಯಶಸ್ವಿ ಎಂಬುದರಲ್ಲಿ ಅಲ್ಲಿನ ಗೋಷ್ಠಿ, ಚರ್ಚೆಗಳು ಗೌಣವಾಗಿ, ಅಲ್ಲಿರುವ ಭೋಜನೋಪಚಾರ ಢಾಳಾಗಿ ಕಾಣುತ್ತವೆ.

ಮಲ್ಲಿಕಾರ್ಜುನ ಹುಲಗಬಾಳಿ

'ಬಾರಾ ವರ್ಷಕ್ಕೊಮ್ಮೆ ಬಾರಕೂರ ಜಾತ್ರೆ' ಅಂದ್ಕೊಂಡು, ಸಿಕ್ಕ ಅವಕಾಶ ಚೆನ್ನಾಗಿಯೇ ಉಪಯೋಗಿಸಿಕೊಳ್ಳುವ ಜಾಣ ಉಣ್ಣುಗರಿಗೆ, ಮದುವೆ ಯಾರದಾದರೆ ಏನಂತೆ? ಮೊದಲ ಪಂಕ್ತಿಯಲ್ಲಿಯೇ ಠಳಾಯಿಸುತ್ತಾರೆ. ಹೀಗೆ ಊಟಕ್ಕೆ ಅಡ್ಡಾಡುತ್ತ, ಇತೋ ಭ್ರಷ್ಟಃ ತತೋ ಭ್ರಷ್ಟರಾಗಿ ತುತ್ತುಕೂಳಿಗಾಗಿ ತೂಕ ಕಳೆದುಕೊಳ್ಳುವ ಬುದ್ಧಿಜೀವಿಗಳದೆ ಆಧಿಕ್ಯ! ಇಂಥವರು ಸಾಹಿತ್ಯಲೋಕದ ಎಡ-ಬಲ ಪಂಥಗಳಲ್ಲೂ ಸಿಗುತ್ತಾರೆ. ಇವರ ಭೋಜನಪ್ರಜ್ಞೆ ಅಗಾಧವಾದುದು. ಭೋಜನ ವಾಸನೆ ಅವರ ಮೈಮನದಲ್ಲಿ ತುಂಬಿಕೊಂಡಿರುತ್ತದೆ. ಭೋಜನ ಭಾಗ್ಯದ ಬೆನ್ನು ಹತ್ತಿ, ಸಾಮ್ರಾಜ್ಯವನ್ನೆ ಕಳೆದುಕೊಂಡ ಆ ಪೇಶ್ವೆ ಬಾಜಿರಾಯನ ಮುಂದೆ ಇವರಾವ ಲೆಕ್ಕ ಬಿಡಿ! [illegible]

ಶುಭಕಾರ್ಯಗಳಲ್ಲಿ ಮದುವೆ ಇದ್ದಂತೆ ಊಟದಲ್ಲಿ ಹೋಳಿಗೆಯೂಟದ್ದೇ ಪಾರಮ್ಯ. ಹಾಗಂತ ಹೇಳುವ ಕಾಲವೂ ಇತ್ತು. ಯಾಕಂದ್ರೆ, ಅಂದಿನ ಆ ಮದುವೆಗಳಲ್ಲಿ ಹೋಳಿಗೆಯೂಟ [illegible]. ಅದೇ ಕಾರಣವಿದ್ದೀತು, ಮದುವೆ ಎಂಬ ಪದಕ್ಕೆ ಸಮಾನಾರ್ಥವಾಗಿ 'ಹೋಳಿಗೆ' ಪದ ಈಗಲೂ ಬಳಸುತ್ತಾರೆ. 'ಹೋಳಿಗೀ ಯಾವಾಗ ಹಾಕಸಾಂವಪಾ ?' ಎಂದು ಕೇಳುವದು, ಅವಿವಾಹಿತನೊಬ್ಬನ ಮದುವೆ ಬಗ್ಗೆ ವಿಚಾರಿಸಿದಂತೆ.

ಮದುವೆಗೆ ಬಂದಿರುವ ಬಹುಜನರಲ್ಲಿ ಭೋಜನಪ್ರಿಯರೆ ಅಧಿಕ. ಹೋಳಿಗೆಯ ಜತೆಗೆ, ಹುಗ್ಗಿ, ತುಪ್ಪ, ಅನ್ನ ಸಾಂಬಾರು, ಭಜ್ಜಿ-ಹಪ್ಪ, ಉಪ್ಪಿನಕಾಯಿ, ಕೋಸಂಬ್ರಿ, ಚಟ್ನಿ, ಹೀಗೀಗೆ ಭೋಜನ-ಸಮೃದ್ಧಿ ಸವಿಯುವ ಆಶೆ ಹೊತ್ತು ಬಂದವರು. ಛೇ! ಅಂದಿನ ಐದೈದು ದಿನಗಳ ಮದುವೆ ಈಗ ಕುಬ್ಜಗೊಂಡು, ತಾಸೆರಡು ತಾಸಿನ ಯಾದಿ-ಶಾದಿಯಾಗಿದೆ, ಟೆಸ್ಟ್‌ಗಳ ಬದಲಿಗೆ ಟ್ವೆಂಟಿ-೨೦ ಚುಟುಕು ಕ್ರಿಕೆಟ್ ಧಾಂಗುಡಿ ಇಟ್ಟಂತೆ.

ಅದೇನೆ ಇರ್‍ಲಿ, ಮದುವೆ ಅಂತಂದ್ರೆ ಅದು ಮದುವೇನೇ! ಅಲ್ಲಿರುವ ಮಜ ಮತ್ತೆಲ್ಲೂ ಕಾಣಸಿಗದು. ವಿವಾದಕ್ಕೂ-ವಿವಾಹಕ್ಕೂ ಅಲ್ಲಿ ಸಮಕುಸ್ತಿ. ತಂಟೆ-ತಗಾದೆಗಳು, ಜಗಳ ಜಪಾಟೆಗಳು, ರಂಪ-ರಾಮಾಯಣಗಳು ಆ ಕಾಲದ ಮದುವೆ ಸಮಾರಂಭದ ಪುಕ್ಕಟೆ ಮನರಂಜನೆ ಐಟಂಗಳು. ಹಾಗೆ, ಮದುವೆ ಮನೆಯಲ್ಲೂ ಬಾಯಿಗೆ ಬಾಯಿ, ಕೈಗೆ ಕೈ ಹತ್ತಿ, ಹೊಡೆದಾಡುವ ಪ್ರಸಂಗಗಳು ತೀರ ಸಾಮಾನ್ಯ. ಈಗ ಈ ಪುಕ್ಕಟೆ 'ಐಟಂ'ಗಳು ನಮ್ಮ ಶಾಸನ-ಸಭೆಗಳಿಗೆ ಶಿಫ್ಟ್ ಆಗಿವೆ.

ಊಟದ ವ್ಯವಸ್ಥೆ ಮಾತ್ರ ಸರಿಯಾಗಿದ್ದರೆ ಸಾಲದು. ಉಪಚಾರವೂ ಭರ್ಜರಿಯಾಗಿರ ಬೇಕು. ಯಾಕಂದ್ರೆ, ಊಟಕ್ಕೆ ಬಾಲಂಗೋಚಿಯಾಗಿ ಉಪಚಾರವೂ ಸೇರಿರುವುದರಿಂದ, ಈ 'ಊಟೋಪಚಾರ'ಕ್ಕೆ ಆ ಪರಿ ಕೊಂಬು ಮೂಡಿರುತ್ತದೆ. ಇಂಥ ಊಟೋಪಚಾರದಲ್ಲಿ ಅಪ್ಪಿತಪ್ಪಿ ಏನಾದರೂ ಹೇರಾಫೇರಿಯಾಯಿತೊ, ಮುಗಿದೇಹೋಯ್ತು, ಹರೋಹರಾ! ಕಲ್ಯಾಣ ಮಂಟಪವೊ ಕದನ-ಭೂಮಿಯಾಗಿ ಬಿಡುತ್ತಿತ್ತು.

ಮೂವತ್ತು-ಮೂವತ್ತೈದು ವರ್ಷಗಳ ಹಿಂದಿನ ಒಂದು ಪ್ರಸಂಗ ನೆನಪಿಗೆ ಬರುತ್ತಿದೆ. ಸಹೋದ್ಯೋಗಿಯೊಬ್ಬನ ಮದುವೆಗೆಂದು ನಾವು ಎಂಟ್ಹತ್ತು ಜನ ಗೆಳೆಯರು ಹಿಂದಿನ ದಿನವೆ ರಾಣೆಬೆನ್ನೂರಿಗೆ ಹೋದೆವು. ಗಂಡಿನ ಕಡೆಯವರೆಂದು ಊಟೋಪಚಾರ ಚೆನ್ನಾಗಿಯೆ ಮಾಡಿದರು. ಆ ರಾತ್ರಿಯ ಬಸ್ಸಿಗಿಯೂಟ. ಮರುದಿನದ ನಸುಕಿನ ಖಡಕ್ ಚಹಾ, ಬೆಳಗಿನ ಗರ್ಮಾಗರಂ ನಾಷ್ಟಾ, ರಾಜೋಪಚಾರವೇ ಆಯ್ತು.

ಪರಂತೂ, ಅಕ್ಷತಾ ದಿನದ ಊಟದಲ್ಲಿ ಎಡವಟ್ಟಾಯಿತು. ಅನ್ನದ ಜತೆಗೆ ಕೊನೆಯಲ್ಲಿ ಬಡಿಸುವ ಮಜ್ಜಿಗೆ ಮಟ್ಟಾ ಸಾಲದೆಹೋಯಿತು. ಬೇಸಿಗೆ ದಿನವಾಗಿದ್ದರಿಂದ, ಎಲ್ಲರೂ ಅದನ್ನೇ ಮತ್ತೆ ಮತ್ತೆ ಕೇಳಿ ಕುಡಿದ ಕಾರಣದಿಂದಾಗಿ, ಮಟ್ಟಾ ಅಲ್ಲಿ ತಳಮಟ್ಟ ಕಂಡಿತ್ತು. ಇದು ಗೊತ್ತಿದ್ದ ನಮ್ಮ ಕಿಲಾಡಿ ಮಿತ್ರ ಸಿದ್ರಾಮ, ಮುದ್ದಾಮ್ ಮಜ್ಜಿಗೆ ಮಟ್ಟಾಗೆ ಗಂಟುಬಿದ್ದ.

"ಮದುಮಗನಿಗೆ ಮಟ್ಟಾ ಬೇಕ್ರೀ, ಜಲ್ದೀ ತಗೊಂಡು ಬರ್‍ರೀ" ಎಂದು [illegible] ಮಾಡಿದ. ಪಾಪ, ಹೆಣ್ಣಿನವರು ಕೈ-ಕೈ ಹಿಚುಕುತ್ತ ಪೇಚಾಡಿದರು. ಮಜ್ಜಿಗೆ ಅಂದೋ[illegible] ಇನ್ನುಳಿದ ಪದಾರ್ಥಗಳಂತೆ, ಅರ್ಜೆಂಟಕ್ಕೆ ಸಿಗುವ ವಸ್ತು ಅಲ್ಲವಲ್ಲ! ಏನ್ಮಾಡೋದು?

ಅವರಲ್ಲೊಬ್ಬ ತಲೆ ಓಡಿಸಿದ. "ಮಟ್ಟಾನಾ...? ಆಯ್ತು ತರ್ತಿನಿ ತಡೀರಿ" [illegible] ಹೇಳಿ, ಓಡೋಡುತ್ತ ಅಡಿಗೆ ಮನೆಯತ್ತ ಹೋದ. ಹೋದ ಅಷ್ಟೇ, ಹೋದ[illegible] ಎಷ್ಟೊತ್ತಾದರೂ ತಿರುಗಿ ಬರಲೇಇಲ್ಲ. ಮಟ್ಟಾ ಬರಲೊಲ್ಲದು, ಅದು ಇಲ್ಲದೆ ಸಮ[illegible] ಊಟ ಮುಗಿಸಲೊಲ್ಲರು. ಜಿದ್ದಿಗೆ ಬಿದ್ದವರಂತೆ, ಮದುಮಗನ ಜತೆ, ಆತನ ಪಟಾ[illegible] ಕುಂತೇಬಿಟ್ಟಿತು. ಆಗ ಸಿದ್ರಾಮನ ವೀರಭದ್ರಾವತಾರ ನೋಡುವಂತಿತ್ತು!

"ಏನ್ರೀ, ಮಟ್ಟಾ ತರ್ತಿನಿ ಅಂತ ಅತ್ಲಾ ಕಡೆ ಹೋದಾಂವಾ, ಹೋಗೇ ಬಿಟ್ಟನಲ್ರಿ. ಮಟ್ಟಾನೂ ಇಲ್ಲಾ, ಮಟ್ಟಾ ತರಾಕ ಹೋದ ಮನುಷ್ಯಾನೂ ಇಲ್ಲ. ಹೂಂ... [illegible] ಬಿಡ್ರೀ, ನಿಮ್ಮ ಮಟ್ಟ ಎಷ್ಟ ಅನ್ನೋದು" ಎಂದು ಕುಟುಕಿದ.

ಗೆಳೆಯರ ಮುಂದೆ ಹೀಗಾಯಿತೆಂದು ಅಳಿಯ, ಮದುಮಗನಿಗೆ ಅವಮಾ[illegible] ವಾಯಿತೆಂದು ಗೆಳೆಯರು, ಹೀಗೆ ಸೆಟಗೊಂಡು ಕುಂತುಬಿಟ್ಟರು. ಈ ಅಳಿಯ-ಗೆಳೆಯರನ್ನು ಗದ್ದಾ-ತುಟಿ ಹಿಡಿದು, ಸಮಾಧಾನಿಸುವಲ್ಲಿ ಹೆಣ್ಣಿನ ಕಡೆಯವರು ನಿಜಕ್ಕೂ ಹಣ್ಣಾಗಿಹೋದರು. ನಯ-ವಿನಯ ಬೆರೆತ ಉಪಚಾರ, ಮೃಷ್ಟಾನ್ನ ಭೋಜನ, ಸಕಲವೂ ಅಲ್ಲಿತ್ತು. ಆದರೇನು, ಮಜ್ಜಿಗೆಗೆ ಹೋದ ಮಾನ, ಮೃಷ್ಟಾನ್ನ ಕೊಟ್ಟರೂ ಸರಿದೂಗಲಿಲ್ಲ.

ನನ್ನ ಸಹೋದ್ಯೋಗಿಯ ಆ ರಾಣೆಬೆನ್ನೂರಿನ 'ರಾಣಿ'ಯೋ ಪ್ರಚಂಡ ಘಟವಾಣಿ[illegible] ಸೇರಿಗೆ ಸವ್ವಾಸೇರು. "ಏನ್ ಬಂಗಾರಕ್ಕ ಸೆಟಗೊಳಲಿಲ್ಲಾ, ಬೆಳ್ಳಿಗೆ ಸೆಟಗೊಳಲಿಲ್ಲಾ, ಹೋ[illegible] ಹೋಗಿ, ಸೊಟ್ಟ ಒಂದ್ ಗ್ಲಾಸ್ ಮಟ್ಟಾದ ಸಲುವಾಗಿ ಆ ಪರಿ ರಂಪಾಟ ಮಾಡೂದ ಽಽಽ[illegible] ಹೂಂಽಽಽ... ಎಲ್ಲಿ ಹೋಗ್ತದ ನಿಮ್ಮ ಚಿಲ್ಲರ ಬುದ್ಧಿ" ಎಂದು ಈಗಲೂ ಹಂಗಿಸು[illegible]ತ್ತಿರುತ್ತಾಳೆ. ಈ ಗಂಡೆಂಬ ಪ್ರಾಣಿ ಕಕವಕ ಮಾಡುತ್ತ, ಉಗುಳು ನುಂಗಿ ತೆಪ್ಪಗಾಗುತ್ತೆ.

ಯಾವ-ಯಾವದೊ ಕಾರಣಕ್ಕೆ ಮುನಿಸಿಕೊಂಡ ಮಿತ್ರಸಮೂಹವನ್ನು ಮೆತ್ತಗಾ[illegible]ಸುವಲ್ಲೂ ಈ ಭೋಜನಕೂಟಗಳು ಸ್ನೇಹ-ಸೇತುಗಳಾಗುತ್ತವೆ. "ಯಾಕೋ ಅಂವಾ ನಿನ್[illegible] ಮ್ಯಾಲ ಗರ್ಮ್ಯಾಗ್ಯಾನೋಪಾ. ಒಮ್ಮೆ ಮನಿಗಿ ಊಟಕ್ಕೆ ಕರದು, ಎಲ್ಲಾ ಸುದ್ದ ಮಾಡ್ಕೊ" ಎಂಬ ಭೋಜನಾನುಭವಿಗಳ ಕಿವಿಮಾತು ಬೇರೆ. ಇದೇನೂ ಸುಳ್ಳಲ್ಲ. ಯಾಕಂದ್ರೆ, ಭಿನ್ನಮತಿಗಳನ್ನು ಪ್ರಸನ್ನಮತಿಗಳನ್ನಾಗಿಸಬಲ್ಲ ಪಾಶುಪತಾಸ್ತ್ರ ಈ ಪೊಲಿಟಿಕಲ್ ಡಿನ್ನರ್ ಪಾರ್ಟಿಗಳಿಗುಂಟು. ಮುಖ ನೋಡಿ ಮಣೆ ಹಾಕುವ ಕಲೆಯನ್ನು ನಮ್ಮ ರಾಜಕೀಯಸ್ಥರಿಗೆ ಹೇಳಿಕೊಡುವುದೆ!

ಮುದ್ದೆ-ನಿದ್ದೆಗಳೆರಡು ಸುಖದವ್ವನ ಅವಳಿ ಸಂತಾನಗಳಂತೆ. ಇವೆರಡು ಮಟ್ಟಸ[illegible]ವಾಗಿದ್ದರೆ, ಬುದ್ಧಿ ತಾನಾಗಿಯೇ ಚುರುಕುಗೊಳ್ಳುತ್ತದೆ. ಮೊದಲಿನ ಎರಡರ ಪೈಕಿ ಒಂದರಲ್ಲಿ ಹೆಚ್ಚು ಕಮ್ಮಿಯಾಯಿತೊ, ಮುಗ್ದೇಹೋಯ್ತು. ಬುದ್ಧಿ ಬಿದ್ದುಹೋಗುತ್ತದೆ. ಆದರೆ, ಎಲ್ಲವೂ ಒಂದು ಅಳತೆಯಲ್ಲಿದ್ದರೆ ಚೆನ್ನ. ಅಳತೆ ಮೀರಿತೊ, ಅಪಾಯ ಕಟ್ಟಿಟ್ಟಬುತ್ತಿ. ಅದಕ್ಕೆ ಹೇಳೋದು, "ಕೂಳು ಹೆಚ್ಚಾಗಿ ಕುಲಾಚಾರ ಹುಟ್ಕೊಂತು" ಅಂತ.

ಉಂಗುರವಿಲ್ಲದ ಬೆರಳಿನಂತೆ, ಊಟವಿಲ್ಲದ ಪಾರ್ಟಿ ಕೂಡ ಸಪ್ಪೆ ಸಪ್ಪೆ. ಸುಖ[illegible] ಭೋಜನ ಸವಿಯಲು ಸಂತೋಷ ಕೂಟ ಒಂದು ನೆಪ ಮಾತ್ರ. ಇದಕ್ಕಾವ ನೀತಿ ಸಂಹಿತೆಯೂ ಅನ್ವಯಿಸುವದಿಲ್ಲ. ಹೊಸ ಮನೆ ಕಟ್ಟಿಸಿದಾಗ, ಹಳೆ ಮನೆ ರಿಪೇರಿ ಮಾಡಿಸಿದಾಗ, ಬಂಧು-ಬಳಗದ ಮೊದಲ ಡಿಮಾಂಡ್, "ಊಟಾ ಯಾವಾಗ ಹಾಕಸ್ತೀಯಪಾ ? ಪಾರ್ಟಿ ಮನಗಂಡ ಅಂದ್ರ, ಮನಗಂಡೇ ಆಗಿರಬೇಕ್ ನೋಡು" ಎಂದು ಹಕ್ಕೊತ್ತಾಯ ಮುಂದಿಡುತ್ತಾರೆ.

ನಮ್ಮ ಪ್ರಮೋಶನ್, ಟ್ರಾನ್ಸಫರ್, ಪುಸ್ತಕ ಬಿಡುಗಡೆ, ಅದಕ್ಕೆ ಬಂದ ಯಾವುದೊ ಒಂದು ಪ್ರಶಸ್ತಿ, ವಾಹನ ಖರೀದಿ ಅಥವಾ ಅದನ್ನು ಮಾರಿದ್ದು, ಮಗನಿಗೆ ಮೆಡಿಕಲ್ ಸೀಟ್, ಮಗಳಿಗೆ ರಂಗೋಲಿ ಸ್ಪರ್ಧೆಯಲ್ಲಿ ಬಂದ ಸಮಾಧಾನಕರ ಬಹುಮಾನ ಎಲ್ಲವೂ ಭೋಜನ[illegible] ನೆಪಕ್ಕೆ ಮೂಲವಾಗುತ್ತವೆ. ಒಮ್ಮೊಮ್ಮೆ ಯಾವ ಕಾರಣ[illegible] ಇಲ್ಲದಿದ್ದಾಗಲೂ, "ಜಸ್ಟ್ ಫಾರ್ ಎ ಚೇಂಜ್, ಬಾಳ ದಿನಾ[illegible] ಆತಲ್ಲೊ ನಿಮ್ಮ ಮನಿಯೊಳಗ ಉಂಡು" ಅನ್ನೋದು[illegible] ಔತಣಕೂಟಕ್ಕೆ ಮೇಜುವಾಣಿಯಾಗುವದುಂಟು. [illegible] ಭೋ'ಜನ'ರ ಮುಂದೆ, ಬಡಿಸುವವರೆ ಬಳಲಬೇಕು, ನಾಚಬೇಕು.



''ಕಟ್ಟೆ ಇದ್ದಲ್ಲಿ ಕರೆದುಕೊಂಡು ಕೂಡು, ರೊಟ್ಟಿ ಇದ್ದಲ್ಲಿ ಹಂಚಿಕೊಂಡು ತಿನ್ನು'' ಅಂತ ಹೇಳ್ತಾರೆ. ಸಹಭೋಜನದಲ್ಲಿರುವ ಮಜಾ, ಒಂಟಿ ಊಟದಲ್ಲಿಲ್ಲ. ಜಾತ್ರೆ-ಯಾತ್ರೆಗಳಿರಬಹುದು, ಹರಿಕಥೆ, ಪುರಾಣ-ಪ್ರವಚನಗಳ ಪ್ರಸಂಗಗಳೇ ಇರಬಹುದು, ಎಲ್ಲೆಲ್ಲಿ ಜನ ಸಮುದಾಯವೊ, ಅಲ್ಲೆಲ್ಲ ಭೋಜನ ಸಮಾರಾಧನೆ ಇದ್ದದ್ದೆ! 'ಭೋಜನ ಸುಖಾಯ ಬಹುಜನ ಹಿತಾಯ' ಹಾಗಂತ ನಮ್ಮವರೇ ಹೇಳಿದ್ದಾರಲ್ಲ!

ನಾವು ಹುಡುಗರಾಗಿದ್ದಾಗ, ಬೆಳದಿಂಗಳೂಟ ಹೆಚ್ಚು ಕಡಿಮೆ ಪ್ರತಿ ಹುಣ್ಣಿಮೆಗೂ ನಡೆಯೋದು. ಮನೆಯ ಮಾಳಿಗೆಯ ಮೇಲೆ ನಡೆಯುತ್ತಿದ್ದ ಆ ಸಮೀಚೀನ ಸಮಾರಾಧನೆಯಲ್ಲಿ ಓಣಿಯ ಜನರೆಲ್ಲ ಬಂದು ಕೂಡುತ್ತಿದ್ದರು. ತಮ್ಮ ಮನೆಯಿಂದ ತಂದಿರುವ ತರತರದ ಉಂಬುವ ಪದಾರ್ಥಗಳು ಅಲ್ಲಿರುತ್ತಿದ್ದವು. ''ವಿವಾಹ ಭೋಜನವಿದು, ವಿಚಿತ್ರ ಭಕ್ಷ್ಯಗಳಿವು, ದೊರಕಿತು ಎನಗೆ ಒಂದು... ಅಹ್ ಹ...ಹ...ಹಾ...'' ಎಂಬ ಹಾಡು ನೆನಪಾಗಬೇಕು, ಹಾಗಿರುತ್ತಿತ್ತು ಆ ಊಟದ ಸೊಗಸು!

ಯಾರ್‍ಯಾರ ಮನೆಯಿಂದ ಏನೇನು ವಿಶೇಷಗಳು ಎಂಬ ಮೆನೂ ಅಲ್ಲಿ ಸಿಗುತ್ತಿತ್ತು. ಬುತ್ತಿ ಬಿಚ್ಚುತ್ತಿದ್ದಂತೆ, ತಿಂಬೋ ಪದಾರ್ಥಗಳು ಪರಸ್ಪರ ವಿನಿಮಯವಾಗುತ್ತಿದ್ದವು. ಆಗ ಬೆಳದಿಂಗಳೂಟಕ್ಕೆ ವೈವಿಧ್ಯದ ರುಚಿ! ಆ ರುಚಿ ಆಹಾ! ಅದನ್ನು ಉಂಡವರೇ ಬಲ್ಲರು! ಉಂಡಾದ ಮೇಲೆ, ದವಡೆಗಳಲ್ಲಿ ಗುಳುಗುಳುಗುಟ್ಟುವ ತಾಂಬೂಲದ ಆ ರಸಾಸ್ವಾದವೇನು! ನೆನಪಿಸಿಕೊಂಡರೆ, ಈಗಲೂ ಬಾಯಲ್ಲಿ ನೀರು ಬರುತ್ತೆ.



ಅಲ್ಲಿ ಊಟಕ್ಕೆ ಮುಂಚೆ, ''ಇದು ಗುರುವಿನ ಪಾಲು, ಇದು ಹಿರಿಯರ ಪಾಲು, ಇದು ಕಾಗವ್ವ-ಗುಬ್ಬವ್ವಗಳ ಪಾಲು'' ಎನ್ನುತ್ತ ಪ್ರತಿಯೊಬ್ಬ ತಾನು ತಂದಿರುವ ಊಟದ ಎಲ್ಲ ಪದಾರ್ಥಗಳ ಚೂರುಚೂರು ಸ್ಯಾಂಪಲ್‌ಅನ್ನು ಗುಂಪಿನ ಮಧ್ಯದಲ್ಲಿಟ್ಟ ತಂಬಿಗೆಯ ಸುತ್ತ ಇಡುತ್ತಿದ್ದರು. ಗುರು-ಹಿರಿಯರ ಸ್ಮರಣೆ, ಸುತ್ತಲ ಜೀವ ಸಂಕುಲದ ಕಾಳಜಿ ಆ ಭಾವದಲ್ಲಿದ್ದೀತು. ಊಟದ ಮರುದಿನ, ಹಾಗೆ, ತಂಬಿಗೆ ಸುತ್ತ ಇಟ್ಟಿದ್ದ ಆಹಾರದ ಚೂರುಗಳನ್ನು ಪ್ರಾಣಿ-ಪಕ್ಷಿಗಳಿಗೆ ಹಾಕುತ್ತಿದ್ದರು.

ಆಷಾಢ ತಿಂಗಳ ಪ್ರತಿ ಬುಧವಾರ ಗುಳ್ಳವ್ವಕ್ಕೆಂದು ವನಭೋಜನಕ್ಕೆ ನಮ್ಮ ಕಡೆ ಈಗಲೂ ಹೋಗುತ್ತಾರೆ. ಅದರ ಹಿಂದಿನ ದಿನ, ಪಿರಮಿಡ್ ಆಕಾರದ ಮಣ್ಣಿನ ಗುಳ್ಳವ್ವನ ಮೂರ್ತಿಗೆ ಪೂಜೆಯಾಗುತ್ತದೆ. ಮರುದಿನ ಮಧ್ಯಾಹ್ನ ಬುತ್ತಿ ಕಟ್ಟಿಕೊಂಡು, ಊರಾಚೆಯ ತೋಟಗಳಿಗೊ, ನದಿತಟದ ಕಡೆಗೊ, ಗುಂಪು ಕಟ್ಟಿಕೊಂಡು ಜನ ಹೋಗುವದರ ಮೂಲ ಉದ್ದೇಶ ಸಹಭೋಜನವೇ ಆಗಿದೆ. ಕೂಡಿ ಬಾಳಿದರೆ ಸಾಲದು, ಜತೆಗೂಡಿ ಉಂಡಾಗಲೇ ಸ್ವರ್ಗಸುಖ.

ಮೌನೇನ ಕವಳಂ ಜಾಸ್ತಿ, ಪಟ್ಟಾಗಿ ಕುಂತು, ನಿರುಮ್ಮಳಾಗಿ ಕವಳ ಕತ್ತರಿಸುವ ದಿನಗಳು ಹೋಗಿಬಿಟ್ಟಿವೆ. ಬಫೆ ಸಿಸ್ಟಮ್ ಬಂದಮೇಲೆ, ನಮ್ಮಂತೆ ನಾವು ಮಾಡುವ ಊಟವೂ ಸೊರಗತೊಡಗಿದೆ. ಮೊದ ಮೊದಲು, ''ಇದೇನೋ ಮಾರಾಯಾ, ಕೈಯಾಗ ತಾಟ ಹಿಡ್ಕೊಂಡು, ಊಟಕ್ಕ ಸಾಲಿನ ಒಳಗ ನಿಂದರೋದು ಜೈಲಿನಾಗಿನ ಕೈದಿಗಳಂಗ! ಛೇ... ಯಾವನಿಗೆ ಬೇಕು ಈ ಪರಿ ಉಣ್ಣೋದು?'' ಅಂತೆಲ್ಲಾ ಮೂಗು ಸಿಂಡರಿಸುತ್ತಿದ್ದ ಜನ ಕ್ರಮೇಣ ಬದಲಿ ವ್ಯವಸ್ಥೆಗೆ ಹೊಂದಿಕೊಳ್ಳಬೇಕಾಯಿತು. ಭೋಜನಕ್ಕೆ ಸೋಲದವರಾರು?

ನಮ್ಮ ಕಡೆ, ಬೈಠಕ್‌ನ ಖಾನಾವಳಿಗಳಲ್ಲಿ ಚಕ್ಕಲು-ಬಕ್ಕಲು ಕುಂತು, ಆರಾಮವಾಗಿ ಊಟ ಸವಿಯಬಹುದು. ಆದರೆ ಇಂಥ ನಿರುಮ್ಮಳತೆ, ವ್ಯವಧಾನ ದೊಡ್ಡ ದೊಡ್ಡ ಸಿಟಿಗಳಲ್ಲಿ ಎಲ್ಲಿ ಸಿಕ್ಕೀತು? ಇಲ್ಲಿ ಉಂಡಂತೆ ಅಲ್ಲಿ ಉಣ್ಣುವಂತಿಲ್ಲವಲ್ಲ. ಕಾಲುಗಳ ಸಂದಿಯಲ್ಲಿ ಬ್ರೀಫ್‌ಕೇಸ್ ಅಮಕಿಸಿಕೊಂಡು, ಎಡಗೈಯಲ್ಲಿ ಬ್ಯಾಗ್ ಸಂಬಾಳಿಸಿಕೊಳ್ಳುತ್ತ, ಊಟವೆಂಬ ಸರ್ಕಸ್ ಮಾಡುತ್ತಿರುವವರ ದರ್ಶನಭಾಗ್ಯ ಇಂಥ ದರ್ಶಿನಿಗಳಲ್ಲಿ ನಿಚ್ಚಳವಾಗಿ ಸಿಗುತ್ತದೆ. ಈ ತಿಂಬೋ ಮಂದಿಗೆ, ಉಂಬೋ ಸುಖ ಎಂತು ಸಿಕ್ಕೀತು! ಅಡಸಲು-ಬಡಸಲು ಬಾಯಿಗೆ ತುರುಕಿಕೊಂಡು, ಉಂಡ ಶಾಸ್ತ್ರ ಮಾಡಿ, ಬುಡುಬುಡು ಎದ್ದೋಡುವ ಅರ್ಜೆಂಟ್ ಜೀವಿಗಳಿಗೆ ಊಟ ಅಂಬೋದು ಕಾಟಾಚಾರದ ಒಂದು ಕರ್ಮ, ಅಷ್ಟೆ. ಆಗಿನಂತೆ ಉಂಬುವ ಅಂಥ ಘಟೋತ್ಕಚರು ಈಗಿಲ್ಲ. ಅಂಥ ಸುಖ ಭೋಜನ ದಿನಗಳೂ ಇಲ್ಲ. ತೂಗಿ ತೂಕ ಮಾಡಿ ತಿನ್ನುವ ಡೈಯಟಾಂಗಿಗಳಿಗೆ ಹೆಚ್ಚಾಗಬಹುದಾದ ಕ್ಯಾಲೊರೀಸ್‌ನ ಚಿಂತೆ. ಸಿಕ್ಕಾಪಟ್ಟೆ ತಿಂದುಬಿಟ್ಟರೆ, ಬಾಡಿ ಫಿಟನೆಸ್ ಧಡಂ-ಫಡಂ ಆಗಿಬಿಟ್ಟೀತು ಅಂಬೋ ಭಯ. ನಾಲಿಗೆ ಕಟ್ಟಿ ಹಾಕಿದೆ. ತುತ್ತು ಅನ್ನ ತಿಂದು, ಗುಟುಕು ನೀರು ಕುಡಿದು 'ಅಽಽಽಬ್' ಎಂದು ಮೆತ್ತಗೆ ಢರಕಿ ಬಿಡುವ ನಾಜೂಕಯ್ಯಗಳಿವರು.

ಊಟದಿಂದ ಹಸಿವು ಹಿಂಗುವಂತೆ, ತಿಂಡಿ ತಿಂಬೋದರಿಂದ ಅದು ಹಿಂಗಲಾರದು. 'ಅನ್ನ ಉಣ್ಣೋದಕ್ಕೆ, ತಿಂಡಿ ತಿಂಬೋದಕ್ಕೆ' ಅನ್ನುವ ಮಾತೂ ಇದೆ. ಉಣ್ಣೋದರಲ್ಲಿರುವ ತೃಪ್ತಭಾವ, ಈ ತಿಂಬೋದಕ್ಕೆ ಖಂಡಿತ ಇಲ್ಲವೆಂತಲೂ ಹೇಳುತ್ತಾರೆ.

'ಅನ್ನವಿಲ್ಲದ್ದು ಊಟವಲ್ಲ, ಮಾಳಿ ಇಲ್ಲದ್ದು ತೋಟವಲ್ಲ'. ಊಟದಲ್ಲಿ ಅನ್ನವೇ ಮುಖ್ಯ. ನಮ್ಮ ಕಡೆಯ ಜವಾರಿ ಊಟದ ಸೊಬಗು ಅಂತಿಂಥದ್ದಲ್ಲ. ಗಡಗಿಯೊಳಗ ಮಾಡಿದ ಕಟ್ಟಿನ ಆಮ್ರ (ಸಾರು), ಹೊಗೆಯಾಡೊ ಬಿಸಿಬಿಸಿ ಬ್ಯಾಳಿ ಕೂಡಿಸಿದ ಕಿಚಡಿ, ಅದರ ಮ್ಯಾಲ ಕಮ್ಮನ್ನ ವಾಸನೀ ತುಪ್ಪಾ, ತಾಬಂಡಿ ತುಂಬ ಹಾಕೊಂಡು ತಾ ಹೊಡತಾನ ಹೊಡದರ, ಏನ್ ಹೇಳ್ಲಿ ಅದರ ಮಜಾ...! ''ಆಹಾ... ಸ್ವರ್ಗದಾಗ ಇರೋರಿಗೂ ಹೊಟ್ಟಿಕಿಚ್ಚ ಬರ್ತದ ಹೊಟ್ಟಿಕಿಚ್ಚಾ'' ಎಂದೆಲ್ಲ ಊಟದ ವರ್ಣನೆ ಮಾಡುವ ನಮ್ಮ ಬಸಪ್ಪ ಮಾವನ ಮಾತು ಖರೆ ಅನಿಸಬೇಕಾದ್ರ, ನೀವೊಮ್ಮೆ ಅದರ ಸವಿ ಸವೀಬೇಕು.

ಎಣಗಾಯಿ ಬದ್ನಿಕಾಯಿ, ಕಟಕ ರೊಟ್ಟಿ, ಕುಟ್ಟಿದ ಸೆಂಗಾ ಚೆಟ್ನಿ, ಬಳ್ಳೊಳ್ಳಿ ಕೆಂಪು ಚಟ್ನಿ, ಆದರ ಮ್ಯಾಲ ತಪಾ ತಪ ಹಾಕ್ಕೊಂಡ ಕುಸಬೀ ಎಣ್ಣಿ... ಬಲ್ಲವರೇ ಬಲ್ಲರು ಅದರ ಸವಿ! ನಮ್ಮ ಪುಂಡಿಪಲ್ಲೆ-ಝುಣ್ಕಾ ನುಚ್ಚಿನ ಕಾಂಬಿನೇಶನ್ನಕ್ಕ ಸರಿಸಾಟಿಯಾಗುವಂಥ ಫಾಸ್ಟ್‌ಫುಡ್-ಐಟಂ ಇನ್ನೊಂದೆಲ್ಲಿದೆ ಹೇಳಿ?

ನಮ್ಮ ಭೋಜನಪ್ರಿಯ ಹರಿಹರಾದಿಗಳು ಬಾಯ್ತುಂಬ ಉಲಿಯುವ 'ಉಂಬೋದು' ಅಂಬೊ ಶಬುದಾನ ಕೇಳೋದರಲ್ಲೂ ಮಜಾ ಇದೆ. ಹಬ್ಬ ತಪ್ಪಿದರೂ ಹೋಳಿಗೆಯೂಟ ತಪ್ಪಬಾರದೆಂಬ ಹಪಾಹಪಿತನ ಮುದ್ದೆಪ್ರಿಯರದು. ಹಬ್ಬಕ್ಕೆ ಒಂದೇ ದಿನ. ಆದರೆ ಹೋಳಿಗೆಗೆ ಮೂರು ದಿನವಂತೆ. ತಂಗಳ ಹೋಳಿಗೆಯ ಜತೆಗೆ, ಬಿಸಿಬಿಸಿ ಹಾಲುತುಪ್ಪದೊಂದಿಗೆ ಉಣ್ಣುವ ಸೌಭಾಗ್ಯ, ಅದು ನಿಜಕ್ಕೂ ಸೌ(ನೂರು) ಭಾಗ್ಯವೆ!

ಊಟದ ಕೊನೆಯಲ್ಲಿ, ಮೊಸರನ್ನ ಉಣ್ಣಲೇಬೇಕೆಂಬುದು ಆಗ ನಮ್ಮಮ್ಮನ ವರಾತು. ಹಾಗೆ ಉಣ್ಣದಿದ್ದರೆ, ಸೋದರಮಾವಂದಿರಿಗೆ ಬಡತನ ಬರುತ್ತದೆಂಬ ನಂಬಿಕೆ ಕಾರಣವಾಗಿ, ಹೊಟ್ಟೆ ಭರ್ಚಕ್ ತುಂಬಿದ್ದರೂ, ಸೋದರಮಾವನಿಗೆ ದಾರಿದ್ರ್ಯ ಬರದಿರಲೆಂದು ನಾವು ಮೊಸರನ್ನ ತಿನ್ನಲೇಬೇಕಾಗುತ್ತಿತ್ತು. ಆದರೂ, ತನ್ನ ಸೋಂಬೇರಿತನದಿಂದಾಗಿ ಅಮ್ಮನ ಏಕಮಾತ್ರ ಅಣ್ಣ, ಇದ್ದ ಆಸ್ತಿ ಕಳೆದುಕೊಂಡು, ಬಡತನ ಮೈಮೇಲೆಳೆದುಕೊಂಡ. ಆಗ ನಾವು ಉಂಡಿದ್ದ ಮೊಸರನ್ನ ಅವನನ್ನು ರಕ್ಷಿಸಲೇ ಇಲ್ಲ.

ಅಂದಹಾಗೆ, ಭೂರಿ-ಭೋಜನ, ದಿನನಿತ್ಯದ ಭಕ್ಷ್ಯ ವಸ್ತುವಲ್ಲ. ಹೊಟ್ಟೆ ತುಂಬಿದ ಮೇಲೆ ಹುಗ್ಗಿಯೂ ಮುಳುಮುಳು. ಆದರೆ, ಈ ಹಸಿವೆ ಅಂಬೋದಿದೆಯಲ್ಲ, ಅದರಂಥ ಶತ್ರುವೂ ಇಲ್ಲ. ಮಿತ್ರನೂ ಇಲ್ಲ. ''ಹಸಿಯದೆಲೆ ಉಣಬೇಡ'' ಎಂದು ಸರ್ವಜ್ಞ ಹೇಳಿರುವದರಲ್ಲಿ ಅರ್ಥವಿದೆ.

ಒಬ್ಬೊಬ್ಬರದು ಒಂದೊಂದು ಲೆವಲ್‌ನಲ್ಲಿ ತಿನ್ನುವ ತಾಕತ್ತಿರುವದನ್ನು ನಾನು ಗಮನಿಸಿದ್ದೇನೆ. ಅದೇ ಆ ಕೆಪ್ಯಾಸಿಟಿಯನ್ನು ತಮ್ಮ ಪ್ರಚಂಡ ಪರಾಕ್ರಮವೆಂಬಂತೆ ಹೇಳಿಕೊಳ್ಳುವವರೂ ಇದ್ದಾರೆ. ಕೂಳು ಕುತ್ತ, ನೀರು ಬಿತ್ತ ಅಂತಾರೆ. ಆ ಮಾತಿಗೆ ಉದಾಹರಣೆ ಇಲ್ಲಿದೆ.

ನಮ್ಮೂರಲ್ಲಿ ಅತಿಭೋಜನ ಪರಾಕ್ರಮಿಯೊಬ್ಬನಿದ್ದ. ನೋಡಲು ಒಣ ಹುಣಸಿಕಡ್ಡಿ. ಆದರೆ ಆತನ ಪಾಚಕ ಶಕ್ತಿಯೋ ಅಪರಂಪಾರ. ''ಅಲ್ಲಿ ಅಷ್ಟ ತಿಂದಾ, ಇಲ್ಲಿ ಇಷ್ಟ ತಿಂದಾ'' ಅಂತೆಲ್ಲ ಜನ ಹೇಳೋರು. ಒಮ್ಮೆ ಊರಲ್ಲಿ ಯಾರದೋ ಒಂದು ಸೀಮಂತನ ಕಾರ್ಯಕ್ರಮ. ಕೂಡಿದ್ದವರು ಆತನ ಪಾಚಕ ಪರಾಕ್ರಮಕ್ಕೆ ಎಂದಿನಂತೆ ಸವಾಲು ಹಾಕಿದರು. ಅದೇನು ಮಹಾ ಎಂಬಂತೆ, ಬುಟ್ಟಿ ತುಂಬ ಸಜ್ಜಕ ಹೋಳಿಗೆ ತಿಂದು, ವಾರ್ಬ್ವಾ ಅಂತ ಬೆನ್ನು ಚಪ್ಪರಿಸಿಕೊಂಡ. ನಂತರ, ಜೀರ್ಣಿಸಿಕೊಳ್ಳಲಾಗದೆ, ಆಸ್ಪತ್ರೆಯಲ್ಲಿ ವಿಲಿವಿಲಿ ಒದ್ದಾಡಿ, ಮರುದಿನ ಸತ್ತುಹೋದ.

ಗುಲಬರ್ಗಾದಲ್ಲಿ ನಾನು ಎಂ.ಎ. ಓದುತ್ತಿದ್ದಾಗಿನ ಇನ್ನೊಂದು ಪ್ರಸಂಗ. ಶಿವಗೊಂಡ ಹೆಸರಿನ ಸಹಪಾಠಿ ಇದ್ದ. ಆತನಿಗೆ ಮೆಸ್ ಚಾಂಪಿಯನ್ ಎಂಬ ನಿಕ್‌ನೇಮೂ ಇತ್ತು. ಆ ಹೆಸರು ಬರಲು ಆತನ ತಿಂಬುಂಬುವ ಚಾಳಿಯೇ ಕಾರಣವಾಗಿತ್ತು. ಹಾಸ್ಟೆಲ್ ಕಾರ್ಯದರ್ಶಿಯೂ ಆಗಿದ್ದ ಆತ, ಒಂದು ಸಲ, ಹಾಸ್ಟೆಲ್‌ನಲ್ಲಿ ಮೆಸ್ ಚಾಂಪಿಯನ್‌ಶಿಪ್ ಎಂಬ ವಿಚಿತ್ರ ಸ್ಪರ್ಧೆ ಏರ್ಪಡಿಸಿದ. ಕುಂತ ಮೆಟ್ಟನಲ್ಲಿ ಐವತ್ನಾಲ್ಕು ಜಿಲೇಬಿ ಕತ್ತರಿಸಿ, ಪ್ರತಿಸ್ಪರ್ಧಿಗಳನ್ನು ಹಿಂದೂಡಿದ್ದ. ಆ ನಂತರ ರಾತ್ರಿಯಿಡಿ ಒದ್ದಾಡಿದ್ದ. ಅದು ಬೇರೆ ಮಾತು.

ನಮ್ಮದು ಭೋಜನ ಪ್ರಧಾನ ಸಂಸ್ಕೃತಿ. 'ಊಟಕ್ಕೇನ ಮಾಡ್ತೀ!' ಎಂದು ವಿಚಾರಿಸುವಲ್ಲಿ, ಉಪಜೀವನದ ದಾರಿ ತಿಳಿದುಕೊಳ್ಳುವ ಕಕ್ಕುಲಾತಿ ಕಾಣಬಹುದು. ಹುಟ್ಟಿನೊಂದಿಗೆ ಹೊಟ್ಟೆಯನ್ನು ಕಟ್ಟಿಕೊಂಡುಬಂದ ಜೀವಿಗಳಿಗೆ, ಹೊಟ್ಟೆಗೆ ಕೇಡು ಕೆಡಕಾಗದಂತೆ ನೋಡಿಕೊಳ್ಳುವ ಹೈರಾಣ ತಪ್ಪಿಲ್ಲ. ಕೈ ಕೊಟ್ಟ ದೇವರು, ಕೆಸರನ್ನು ನಿರ್ಮಿಸಿದ್ದಾನೆ. ಅದರ ಜೊತೆಯಲ್ಲಿ ಬಾಯಿಗಿರಲಿ ಎಂದು ಮೊಸರೂ ಇಟ್ಟಿದ್ದಾನೆ. ದುಡ್ಕೊಂಡು ಉಣ್ಣು. ಕಷ್ಟಾರ್ಜಿತವಾದ ಆಹಾರವೆ ಪ್ರಸಾದ ಸ್ವರೂಪಿ. ಕಾಯಕದಿಂದ ಬಂದ ಕಾರೇಸೊಪ್ಪಿಗೆ ಅಮೃತದ ಸವಿ ಇದೆ. ಪರಪುಟ್ಟಿಯಂತೆ ಪರಾನ್ನಪ್ರಿಯ ನಾಗಬೇಡ – ಎಂದು ಶರಣರೂ ಸಾರಿದ್ದಾರೆ.

ಹಾಗೆ, ಉಣ್ಣೋದು-ತಿನ್ನೋದು ಎಂಬುದು ಜೋಡಿ ನುಡಿಯಾಗಿ ಚಲಾವಣೆಯಲ್ಲಿದ್ದರೂ, ನನ್ನ ಪ್ರಕಾರ ಉಣ್ಣೋದೆ ಬೇರೆ, ತಿನ್ನೋದೆ ಬೇರೆ. ಉಣ್ಣೋದಕ್ಕೆ ಬಹುಜನ ಮಾನ್ಯತೆ ಇರುವಂತೆ, ತಿನ್ನೋದು ಎಂಬ ಅದರ ಅವಳಿ ಸಂತಾನಕ್ಕೆ ಇಲ್ಲ - ಅಂಬೋದು ನನ್ನ ಅನಿಸಿಕೆ. ಮನುಷ್ಯ ಅಂಬೊ ದ್ವಿಪಾದ ಪ್ರಾಣಿ ಉಣ್ಣುತ್ತದೆ ಮತ್ತು ತಿನ್ನುತ್ತದೆ ಕೂಡಾ. ಆದರೆ ಮಿಕ್ಕುಳಿದ ಪ್ರಾಣಿ-ಪಕ್ಷಿಗಳು ಬರೀ ತಿಂತಾವೆ, ಉಣ್ಣೋದಿಲ್ಲ.

ಮನುಷ್ಯತ್ವದ ಹದ್ದು ಮೀರಿದವನಿಗೆ 'ಹೊಟ್ಟೆಗೇನ ತಿಂತೀ ?' ಎಂದು ತಿವಿಯುವದಿಲ್ಲವೆ ? ಉಂಡವನಿಗಿರುವಂತೆ, ತಿಂದವನಿಗೆ ಅನ್ನದ ಋಣ ಇರುವದಿಲ್ಲ ಅಂತಾರೆ. ಅದನ್ನೆ ಮಾನವಂತ ಉಣ್ಣುತ್ತಾನೆ. ಹೈವಾನ ತಿಂತಾನೆ ಅಂತಲೂ ಹೇಳುವದುಂಟು. ಅನ್ನ ಉಂಡ ಮನಿಗೆ ಕನ್ನಾ ಹಾಕಬಾರದೆಂಬ ಆ ಮಾತಿನಲ್ಲಿ ಉಪಕೃತಿ ಸ್ಮರಣೆ ಭಾವ ಅಡಗಿದೆ.

ಊಟ ಉಣ್ಣೋದಕ್ಕೆ, ತಿಂಡಿ ತಿಂಬೋದಕ್ಕೆ ಎಂಬ ಅನುಭವಜನ್ಯ ಮಾತೂ ಇದೆ. ಊಟದಲ್ಲಿರುವ ಹದಗಾರಿಕೆ, ಶಿಸ್ತು, ಸ್ವಾದ ತಿನ್ನೋದರಲ್ಲಿಲ್ಲ ಅಂತಾರೆ. ಪಾಶ್ಚಾತ್ಯರಿಗೆ ಟೇಬಲ್ ಮ್ಯಾನರ್ಸ್ ಇರುವಂತೆ, ನಮ್ಮಲ್ಲೂ ಊಟಕ್ಕೊಂದು ಆರೋಗಣ ಶಾಸ್ತ್ರವಿದೆ. ಉಣ್ಣುವದು ಕೂಡ ಒಂದು ಕಲೆ. ಬರೀ ಉಂಡಶಾಸ್ತ್ರ ಮಾಡಿ ಕೈತೊಳೆದುಕೊಳ್ಳುವ ಬೂಟಾಟಿಕೆಗೆ ಅಲ್ಲಿ ಜಾಗವಿಲ್ಲ.

ನಾವು ಉಣ್ಣುವ ಊಟ ಆರೋಗ್ಯಕ್ಕೆ, ಬದುಕಿನ ಚೈತನ್ಯಕ್ಕೆ, ಮನಸ್ಸಿನ ತೃಪ್ತಿಗೆ, ದೇಹದ ಸೌಖ್ಯಕ್ಕೆ. ಅದೇ, ತಿನ್ನುವ ತಿಂಡಿ ನಾಲಿಗೆ ಚಪಲಕ್ಕೆ, ಆ ನಂತರ ವೈದ್ಯನ ಬೊಕ್ಕಸ ತುಂಬಿಸೋಕೆ. ''ನಿನ್ನ ತಿಂಗಳ ಪಗಾರಕ್ಕಿಂತ ಜಾಸ್ತಿ ರೊಕ್ಕಾ ತಂಬಾಕ ತಿನ್ನಾಕ ಖರ್ಚ ಮಾಡ್ತೀನೋ'' ಅಂತ ಕೊಚ್ಚಿಕೊಳ್ಳುತ್ತ, ''ಏನಾದರೂ ತಿನ್ನುತ್ತಿರು, ತಮ್ಮ'' ಎಂಬ ಕವಿವಾಣಿ ಅಕ್ಷರಶಃ ಪಾಲಿಸಿಕೊಂಡು ಬಂದಿದ್ದ ನನ್ನ ಹೈಸ್ಕೂಲ್ ಕ್ಲಾಸ್‌ಮೇಟ್ ಬೂಸಿ ಬಸಣ್ಣ, ಮುವತ್ತಕ್ಕೆ ಗೊಟಕ್ ಅಂದಿದ್ದ.

ತಿಂಡಿಗೆ ಬಹುರೂಪಧಾರಣ. ಒಂದೊಂದು ಕಡೆ ಒಂದೊಂದು ನಮೂನೆಯಾಗಿ ಕಾಣಿಸಿಕೊಳ್ಳುವದು ಇದರ ವಿಶೇಷ. ಚಪಾತಿ ಅಂಬೊ ಪದಾರ್ಥ, ಉತ್ತರ ಕನ್ನಡದವರ ಊಟಕ್ಕೆ ಸಂದರೆ, ದಕ್ಷಿಣ ಕನ್ನಡದವರು ಅದನ್ನು ತಿಂಡಿ ಸಾಲಿಗೆ ಸೇರಿಸುತ್ತಾರೆ. 'ದಾಸರದು ಆಟವಲ್ಲ, ದೋಸೆಯದು ಊಟವಲ್ಲ' ಅಂತಂದ್ರೂ, ದೋಸೆಯನ್ನು ಊಟಕ್ಕೆ ಸೇರಿಸುವವರೂ ಇದ್ದಾರೆ.

ಬದುಕಿನುದ್ದಕ್ಕೂ ನೋವನ್ನುಣ್ಣುವ ಬಡವರು ತುತ್ತಿನ ಚೀಲ ತುಂಬಿಸಲು ಹೆಣಗಾಡುತ್ತ ಬಂದಿದ್ದಾರೆ. ಹಿಟ್ಟಿಗಗಲಿದ ಬಾಯಿ, ಬಟ್ಟೆಗೊಡ್ಡಿದ ಕೈಯಿ ಇಷ್ಟೇ ಅವರ ಹಣೆಬರೆಹ. ಹೊಟ್ಟೆ ರಾಯನ ನಿತ್ಯದಟ್ಟಹಾಸಕ್ಕೆ ಬಾಳು ಒಡ್ಡುತ್ತ ಬಂದವರದು ಒಂದು ಕತೆಯಾದರೆ, ಎಲ್ಲವನ್ನೂ ಮಜಾ ಮಾಡುವ ಶ್ರೀಮಂತರದು ಇನ್ನೊಂದು ಕತೆ. ಶೋಕಿಗಾಗಿ ಅದು-ಇದು ತಿನ್ತಾರೆ, ತಿಂದು ತಿಂದು ಅವರು ರೋಗೇಶ್ವರರಾಗ್ತಾರೆ.



ಊಟ ಬಲ್ಲವರಿಗೆ ರೋಗವಿಲ್ಲವೆನ್ನುವ ಮಾತಿನಲ್ಲಿ ತಥ್ಯವಿದೆ. ಪಥ್ಯದ ಊಟ ರೋಗ ತಡೆದರೆ, ಅಪಥ್ಯದ ತಿನ್ನುವಿಕೆ ರೋಗಾಹ್ವಾನಕ್ಕೆ ದಾರಿ ಮಾಡಿಕೊಡುತ್ತದೆ. ಹೊಟ್ಟೆ ಕೆಟ್ಟು, ವೈದ್ಯನ ಬಳಿಗೆ ಹೋದರೆ, ಆತ ಕೇಳುವ ಮೊದಲ ಪ್ರಶ್ನೆ, ''ಅಂತಾದ್ದೇನು ತಿಂದಿರೀ ?''

ಮತ್ತೆ ಆತ, ರೋಗಿಗೆ ಹೇಳುತ್ತಾನೆ. ''ಈಗ ನಾನು ಹೇಳೊದನ್ನು ಉಣ್ಣು, ಆರಾಮ ಆದ ಮೇಲೆ ಏನಬೇಕಾದ್ದು ತಿನ್ನು''. ಉಣ್ಣುವ ಮತ್ತು ತಿನ್ನುವದರಲ್ಲಿನ ವ್ಯತ್ಯಾಸವನ್ನು ವೈದ್ಯರು ಚೆನ್ನಾಗಿಯೇ ಗುರುತಿಸಿರುತ್ತಾರೆ.

ತರಹೇವಾರಿ ತಿಂಡಿಗಳು ಚಪಲ ಚೆನ್ನಿಗರಾ... ಜಿಹ್ವಾ ಜಗತ್ತಿನಲ್ಲಿ ನಲಿದಾಡುತ್ತಿರುತ್ತವೆ. ಕೂಳುಬಾಕ... ಬಾಯಿಗೆ ಸಿಕ್ಕದ್ದನ್ನು ತಿಂತಾರೆ. ಆದರೆ, ಊಟಬಲ್ಲ ರ... ಮಹಾನುಭಾವನ ರೀತಿ ಹಾಗಲ್ಲ. ಹಾಗೆ ಹಗಲೆಲ್ಲ ... ಬಾಯಿ ಚಪ್ಪರಿಸುವದಿಲ್ಲ. ನಿಧಾನವಾಗಿ ಉಣ್ಣುತ್ತಾ... ಉಂಡದನ್ನು ಕರಗಿಸಿಕೊಳ್ಳುವ ವಿಧಾನವೂ ಆತನಿಗೆ ಗೊತ್ತಿ...

'ಏಕಾದಶಿಗೆ ತಿಂಬೋದು, ದ್ವಾದಶಿಗೆ ಉಂಬೋದು' ಅಂತಲೂ ಒಂದು ಮಾತಿದೆ. ಅದರರ್ಥ, ಉಪವಾ... ತಿನ್ನುವದಕ್ಕೆ, ಊಟ ಉಣ್ಣುವದಕ್ಕೆ.

ಹೈಸ್ಕೂಲ್‌ನಲ್ಲಿ ನಮಗೆ ಗಣಿತ ಕಲಿಸುತ್ತಿ... ಬಂಡೋಪಂತ ಮಾಸ್ತರರ ಏಕಾದಶಿಯ ... ಫಲಹಾರವೋ ಯಮ-ಭಯಂಕರ ! ಅಪ್ಪವಲಯದ... ಅವರನ್ನು 'ತಿಂಡೋಪಂತ'ರೆಂದೇ ಕರೆಯಲಾಗುತ್ತಿತ್ತು.

ಬೀರ್ ಬಾರ್‌ಗಳ ಕಾಕ್‌ಟೇಲ್ ಕಾಕಂದಿರರಿಗೆ ವಿಚಿತ್ರ... ಟೇಸ್ಟ್. ಉಣ್ಣೋದಕ್ಕಿಂತ ತಿನ್ನೋದು ಅವರಿಗೆ ಇಷ್ಟ... ಅವರ ಹಾಗೆ ರಮ್ಮೀರ, ವಿಸ್ಕಿವೀರ ಆಗಿರದ, ಪಾನ... ನಿರೋಧದ ಕಟ್ಟಾ ಅನುಚರನಾಗಿರುವ ನಾನು, ಕರಿ... ಸೆಂಗಾ ಕಾಳುಗಳಂಥ ವ್ಯಂಜನ ಪದಾರ್ಥಗಳನ್ನು ತಿನ್ನುತ್ತ... ಅವರಿಗೆ ಕಂಪನಿ ಕೊಡುತ್ತಿರುತ್ತೇನೆ.

''ಉಳ್ಳವರ ಬಡಾ ನಾಲಿಗೆಗೆ ತಿಂಡಿಯ ತಲಬು... ಅದೇ ಬರಗೆಟ್ಟ ಬಡ ನಾಲಿಗೆಗೆ ಉಂಬುವ ಹಲಗು'' ಎಂದು ಕವಿಯೊಬ್ಬ ಹೇಳುತ್ತಾನೆ. ದರ್ಶಿನಿ, ಫಾಸ್ಟ್-ಫುಡ್... ಸೆಂಟರ್‌ಗಳು ಬರಬರುತ್ತ ಹೆಚ್ಚಾಗುತ್ತಿದ್ದಂತೆ, ತಿಂಬುವ... ತಮ್ಮಣ್ಣಿಗಳ ಸಂಖ್ಯೆಯೂ ಅಧಿಕವಾಗುತ್ತ ಹೊರಟಿದೆ... ಸುಖಭೋಜನದ ಸೆಲೆಗಳು ಬತ್ತತೊಡಗಿವೆ.

ಈ ಉಂಬೋ-ತಿಂಬೋ ಪ್ರಕ್ರಿಯೆಯಲ್ಲಿ ಗಂಡಸರದೇ ಮೇಲುಗೈ. ಈ ಬಾಬತ್ತಿನಲ್ಲಿ ಅಮಿತ ಭಾಷಿಣಿಯ... ರಾಗಿರುವ ಫೀಮೇಲ್‌ಗಳು ಹಿಂದಿದ್ದಾರೆಂದು ಪತ್ರಿಕೆಗಳಲ್ಲಿ... ಬಂದಿತ್ತು. ತುಸು ತುಸುವೆ ತಿಂದು, ಮೆಲಕಾಡಿಸುವ... ತಳೋದರಿ ಮೇಡಮ್ಮಗಳು, ಮೈಡುಮ್ಮಗಾಗದಂತೆ... ಹುಷಾರಾಗಿರುತ್ತಾರೆ. ಈಟೀಟೇ ಇರುವ ಈಟಿಂಗ್ ಸ್ಟೀಲ್... ಡಬ್ಬಾದಲ್ಲಿ ಚಿತ್ರಾನ್ನ-ಮೊಸರನ್ನ ತುಂಬಿಕೊಂಡು... ಬೈ-ಟು, ಬೈ-ಥ್ರೀಗಳಾಗಿ ನಾಜೂಕಾಗಿ ತಿನ್ನುವ... ಸೂಕ್ಷ್ಮಾತೀತರ ಸಂತತಿ ಬೆಳೆಯುತ್ತಿದೆ.

ತಿನ್ನುವದಕ್ಕೆ ಇದೇ ಆಗಿರಬೇಕೆಂದೇನೂ ಇಲ್ಲವಲ್ಲ... ಎಂದು ವಾದಿಸುವ ತಿಮಿಂಗಿಲಗಳು ಜಲ್ಲಿ, ಸಿಮೆಂಟ್ ತಿಂದು, ರಸ್ತೆ, ಸೇತುವೆ ಇತ್ಯಾದಿ ನುಂಗಿ ನೀರು... ಕುಡಿಯುತ್ತವೆ. ತಿನ್ನಬಾರದನ್ನು ತಿಂದರೆ, ಅದನ್ನು... ಕಕ್ಕಿಸಲು ಲೋಕಾಯುಕ್ತರು ಬರುತ್ತಿರುವುದು ಈ... ದೇಶದ ಆರೋಗ್ಯದ ದೃಷ್ಟಿಯಿಂದ ಒಳಿತು... ಉಪ್ಪು ತಿಂದವನು ನೀರು ಕುಡಿಯುತ್ತಾನೆ, ಬಿಡಿ.

'ಭೋಜನವಾದೀ ಸುಖೀ ಭವ'

ಮಲ್ಲಿಕಾರ್ಜುನ ಹುಲಗಬಾಳಿ
ಬಸವ ಸದನ, ಬನಹಟ್ಟಿ - [illegible]
ಬಾಗಲಕೋಟೆ ಜಿಲ್ಲೆ

# ಅಕಬರ ಅಲಿ ಸಮಗ್ರ ಕಾವ್ಯ – ಒಂದು ಹಕ್ಕಿ ನೋಟ

ಅಕಬರ ಅಲಿಯವರು 'ಚುಟುಕು ಕವಿ' ಎಂದೇ ಕನ್ನಡ ಸಾಹಿತ್ಯದ ಓದುಗರಿಗೆ ಚಿರಪರಿಚಿತರು. ಆದರೆ ಅವರ ಸೃಜನಶೀಲ ಪ್ರತಿಭೆಯನ್ನು ಹೀಗೆ ಚುಟುಕುಗೊಳಿಸಿ ನೋಡುವುದು ಸಮಂಜಸವಲ್ಲ. ಅಲಿ ಅವರ ಸಮಗ್ರ ಕಾವ್ಯವನ್ನು ಅಧ್ಯಯನ ಮಾಡಿದರೆ ಅವರು ಚುಟುಕಗಳ ಆಚೆಗೆ ಕೆಲವಾರು ಉತ್ತಮ ಕವಿತೆಗಳನ್ನು ರಚಿಸಿರುವುದರ ಪರಿಚಯವಾಗುತ್ತದೆ.

೧೯೫೧ರಿಂದ ಆರಂಭಿಸಿ ೨೦೦೫ರ ತನಕ ಅರ್ಧ ಶತಕಕ್ಕೂ ಮೀರಿದ ಕಾಲಾವಧಿಯಲ್ಲಿ ಅಕಬರ ಅಲಿಯವರು ತಾವು ರಚಿಸಿರುವ ಕವನಗಳ ಒಂಭತ್ತು ಕವನ ಸಂಗ್ರಹಗಳನ್ನು ಹೊರತಂದಿದ್ದಾರೆ. 'ವಿಷಸಿಂಧು' (೧೯೫೧), 'ನವಚೇತನ' (೧೯೬೧), 'ಸುಮನ ಸೌರಭ' (೧೯೬೫), 'ಗಂಧಕೇಶ್ವರ' (೧೯೭೨), 'ತಮಸಾ ನದಿ ಎಡಬಲದಿ' (೧೯೭೭), 'ಕಸಿಗುಲಾಬಿಯ ಕಥನ' (೧೯೯೩), 'ಬೆಳಕಿನ ಆರಾಧನೆ' (೨೦೦೫) ಇವುಗಳು ಅಲಿಯವರ ಈವರೆಗಿನ ಪ್ರಕಟಿತ ಕವನ ಸಂಕಲನಗಳು. ಪೂರ್ಣವಾಗಿ ಚುಟುಕಗಳಿಂದಲೇ ಕೂಡಿದ ಅನ್ನ (೧೯೫೨) ಹಾಗೂ ಅಕಬರ ಅಲಿ ಚುಟುಕುಗಳು (೧೯೮೬) ಸಹ ಇವರ ಸಾಹಿತ್ಯ ಕೃಷಿಯ ಪಟ್ಟಿಯಲ್ಲಿವೆ. ಇಷ್ಟೆಲ್ಲಾ ಕಾವ್ಯ ವ್ಯವಸಾಯ ನಡೆಸಿದ್ದರೂ ಅಲಿಯವರು ಕನ್ನಡ ಕಾವ್ಯ ಪರಂಪರೆಯಲ್ಲಿ ಅಷ್ಟಾಗಿ ಖ್ಯಾತಿಯನ್ನು ಗಳಿಸಿದವರಲ್ಲ. ಈಗಿರುವ ಪ್ರಸಿದ್ಧಿ ಏನಿದ್ದರೂ 'ಚುಟುಕು ಕವಿ' ಎಂಬುದಕ್ಕೆ ಮೀಸಲಾಗಿರುವಂಥದ್ದು. ಹೀಗಾಗಿ ಇವರನ್ನು ''ಚುಟುಕ ಎಂಬ ಎಲೆಮರೆಯ ಕವಿ'' ಎನ್ನಬಹುದು. ತಮ್ಮ ಕಾವ್ಯಶಕ್ತಿಯನ್ನು ವಿಮರ್ಶಾಲೋಕ ಹೀಗೆ ಸೀಮಿತಗೊಳಿಸಿ ನೋಡುತ್ತಾ ಬಂದಿರುವುದರ ಬಗ್ಗೆ ಕವಿ ಅಲಿಯವರೊಳಗೂ ಅವ್ಯಕ್ತವಾದ ನೋವೊಂದು ಸ್ಥಾಯಿಯಾಗಿದೆ. ಇದು ಅವರ 'ಕೋಗಿಲೆಯ ಕಳವಳ' ಎಂಬ ಕವಿತೆಯಲ್ಲಿ ಹೀಗೆ ವ್ಯಕ್ತವಾಗುತ್ತದೆ :

ಯಾರ ಕಣ್ಣಿಗೂ ಬೀಳದಂತಹ ಒಂದು
ಗಿಡದ ಝುಡುಪಿನಲ್ಲಿ
ಹುಗಿದುಕೊಂಡಿದ್ದು
ಹಾಡ ಹನಿಸುತ್ತಾ ಚಿಲಿಪಿಲಿ ಚಿಮುಕಿಸಿ
ಹತ್ತೂ ಕಡೆಯ ಗಿಡ ಬಳ್ಳಿ ಮೈಮನವ ಜುಮ್ಮೆನಿಸಿ
ನಾನು ಬಳಕೊಂಡದ್ದು ಅಷ್ಟರಲ್ಲೆ ಇದೆ.

ಅಲಿಯವರು ನಮ್ಮ ಪ್ರಧಾನ ಕವಿಗಳಲ್ಲಿ ಒಬ್ಬರಲ್ಲವಾದರೂ ಕೆಲವಾದರೂ ಅತ್ಯುತ್ತಮವೆನಿಸುವಂಥ ಕವಿತೆಗಳನ್ನು ರಚಿಸಿದ್ದಾರೆ. ಅಲಿಯವರ ಕವಿತೆಗಳ ಕುರಿತ ನಿರ್ಲಕ್ಷ್ಯವನ್ನು ಸಾಹಿತಿಯೊಬ್ಬನನ್ನು ಪ್ರಕಾರವೊಂದಕ್ಕೆ ಬದ್ಧಗೊಳಿಸಿನೋಡುವ ಇಮೇಜಿನ ಆರೋಪದಿಂದ ಉಂಟಾದ ಸಮಸ್ಯೆ ಎಂದು ಪರಿಗಣಿಸಬಹುದು. ಸಿನಿಮಾಗಳಲ್ಲೂ ಹೀಗೆ ನಟರನ್ನು ಹಾಸ್ಯ ನಟ, ಸಾಹಸ ನಟ, ಪೋಷಕ ನಟ ಎಂಬಿತ್ಯಾದಿಗಳಿಗೆ ಬ್ರಾಂಡ್ ಮಾಡಿ ನೋಡುವುದಿದೆ. ಈ ಹಿನ್ನೆಲೆಯಲ್ಲಿ ಅಜ್ಞಾತವಾಗಿರುವ ಅಲಿಯವರ ಕಾವ್ಯದ ಬಗ್ಗೆ ಮೊದಲು ಲಕ್ಷ್ಯ ನೆಟ್ಟು, ನಂತರ ಅವರ ಚುಟುಕುಗಳತ್ತ ಗಮನ ಹರಿಸ ಬಹುದಾಗಿದೆ.

ಮೂಲತಃ ಅಕಬರ ಅಲಿಯವರದು ಪ್ರಯೋಗಶೀಲ ವ್ಯಕ್ತಿತ್ವ. ಅವರ ಮೊದಲ ಸಂಕಲನದಲ್ಲಿನ ಎಲ್ಲ ಕವಿತೆಗಳೂ ಸಾನೆಟ್‌ಗಳು ಎಂಬ ಅಂಶ ಈ ಮಾತುಗಳನ್ನು ಪುಷ್ಟೀಕರಿಸಬಲ್ಲದು. ಆರಂಭದಲ್ಲಿ ಸಂಸ್ಕೃತಭೂಯಿಷ್ಠ ಭಾಷಾಬಳಕೆ, ಉಪದೇಶಾತ್ಮಕ ಗುಣ ಅಲಿಯವರ ಕವಿತೆಗಳಲ್ಲಿ ಢಾಳಾಗಿ ಕಾಣಸಿಗುವ ಸಂಗತಿಗಳಾಗಿವೆ.

**ಡಾ|| ಬಿ. ಸಿ. ನಾಗೇಂದ್ರ ಕುಮಾರ್**

'ನವ ಚೇತನ'ದಲ್ಲಿ ಬಂಗಾಲಿಯ ರವೀಂದ್ರರ ಗೀತಾಂಜಲಿಯನ್ನು ಒಳಗೊಂಡಂತೆ ಮಲೆಯಾಳಿ ಕವಿ ನಾರಾಯಣ ಮೆನನ್, ಉರ್ದು ಕವಿ ಕಾಝಿ ನಜರುಲ್ ಇಸ್ಲಾಂ ಮುಂತಾದ ದೇಶೀಯ ಕವಿಗಳ ಅನುವಾದಿತ ಕವನಗಳಿವೆ.

ನಂತರದ ಸಂಕಲನಗಳಲ್ಲಿ ಅಲಿಯವರು ಮಾಗಿದ ಕವಿಯಾಗಿ ಕಾಣಸುತ್ತಾರೆ. ಶೈಲಿಯ ವಿಷಯಕ್ಕೆ ಬಂದರೆ ಅಲಿಯವರ ಕೆಲವು ಕವಿತೆಗಳೂ ನವೋದಯದ ನಂದನವನದಲ್ಲಿ ಅರಳಿದ ಮೊಲ್ಲೆ ಜಾಜಿಗಳಂತಿವೆ. ಇನ್ನು ಕೆಲವು ನವ್ಯದ ಬೊಕೆಗಳು; ಮತ್ತುಳಿದವು ಬಂಡಾಯದ ಕೆಂಪು ಗುಲಾಬಿಗಳು. ಈ ನೆಲೆಯಿಂದ ಅಕಬರ ಅಲಿಯವರನ್ನು ಸಮನ್ವಯ ಕವಿಯೆನ್ನಬಹುದು.

ಕುವೆಂಪು ಹಾಗೂ ಅಡಿಗರ ಕಾವ್ಯ ಪ್ರಭಾವವನ್ನು ಅಲಿಯವರ ಕೆಲವು ಕವಿತೆಗಳಲ್ಲಿ ಸ್ಥೂಲವಾಗಿ ಗುರುತಿಸಬಹುದು. ಲೋಕನಿರ್ಲಕ್ಷಿತ ವಸ್ತು ವಿಷಯಗಳ ಮಹತ್ವದ ಪ್ರತಿಪಾದನೆ ಮಾಡುವ 'ಲೋಕವೇ ಸಾಕ್ಷಿ', ಜಡದಲ್ಲೂ ಚೈತನ್ಯವನ್ನರಸುವ 'ಬಂಡೆಗಲ್ಲು', ವಿಜ್ಞಾನದ ಬಗ್ಗೆ ಒಲವನ್ನು ತೋರುವ 'ಯೋಜನಾ ಮೇಘ', ನಾಡಿಭಕ್ತಿಯನ್ನು ಸಾರುವ 'ಕರ್ನಾಟಕ ಭುವನೇಶ್ವರಿ' ಮುಂತಾದ ಕವನಗಳು ಕುವೆಂಪು ಅವರ ಕಾವ್ಯ ಜಗತ್ತನ್ನು ನೆನಪಿಸುತ್ತವೆ. 'ಹುಚ್ಚು ಮಂಗ', 'ಗಾಳಿ ಕೋಳಿ', 'ನಾನೇ ಸುಧಾರಕ' ಮೊದಲಾದ ಕವಿತೆಗಳು ಅಡಿಗರ ಭಾಷಾ ಶೈಲಿಗೆ ಹತ್ತಿರವಾಗಿವೆ.

ಮೇಲಿನವರೆಂದರೆ ಆಯ್ತು; ಅಂಗಾಲ ನೆಕ್ಕಲಿಕೂ
ಹೇಸದಂಥ
ಗತ್ತು
ಆದರಲೂ ಆಗೀಗೊಮ್ಮೆ ಕರಡಿಯ ಪಿಕಮತ್ತು
ಕೆಳಗಿನವರನೊ ಕಾಲ ಕಸವಾಗಿ ಕಾಣುವ ತಲೆ
ಪಿತ್ತದ ಮತ್ತು,
ಸಿಕ್ಕವರ ಸಿಗಿದುಹಾಕುವಲಿ ಕತ್ತಿಕಿರುಬನ ಕರಾಮತ್ತು.
(ಹುಚ್ಚುಮಂಗ)

ಧರ್ಮನಿರಪೇಕ್ಷತೆ ಅಕಬರ ಅಲಿ ಮುಲ್ಲಾ ಅವರ ಕಾವ್ಯದ ಅಂತಃಸತ್ವವಾಗಿದೆ. ಭಾರತೀಯ ಹಿಂದೂ ಪುರಾಣ, ಮಹಾಕಾವ್ಯಗಳಿಂದ ರೂಪಕಗಳನ್ನು ಎತ್ತಿಕೊಳ್ಳುತ್ತಾರೆ. ಕೃಷ್ಣ, ಆದಿಶೇಷ, ರಾಧೆ, ಭೀಮ, ಭೀಷ್ಮ, ಕೌರವ, ಕುಂತಿ, ಗಾಂಧಾರಿ, ಪೂತನಿ ಮುಂತಾದ ಪಾತ್ರಗಳೆಲ್ಲಾ ರೂಪಕಗಳು ಮತ್ತು ಪ್ರತಿಮೆಗಳಾಗಿ ಅಲಿಯವರ ಕಾವ್ಯದಲ್ಲಿ ಮರುಹುಟ್ಟು ಪಡೆಯುತ್ತವೆ. ಸಮಕಾಲೀನ ಸಂದರ್ಭದ ಸೂಕ್ಷ್ಮ ಅರ್ಥಪ್ರಪಂಚದ ಅನಾವರಣಕ್ಕೆ ಅಲಿಯವರು ಇಂತಹ ಪುರಾಣ ಪ್ರತೀಕಗಳನ್ನು ಬಳಸಿಕೊಳ್ಳುತ್ತಾರೆ. ಜೈನ ಧರ್ಮದ ಬಾಹುಬಲಿಯಾಗಿರಲಿ, ಕ್ರೈಸ್ತರ ಆದಮನೇ ಇರಲಿ, ಅಲಿಯವರಿಗೆ ಯಾವುದೂ ತ್ಯಾಜ್ಯವಲ್ಲ. ವಿಕಾಸಶೀಲ ಮನಸ್ಸು ಎಲ್ಲೆಡೆಗಳಿಂದ ಪ್ರಭಾವಗಳನ್ನು, ಉತ್ತಮವಾದ ಅಂಶಗಳನ್ನು ಸ್ವೀಕರಿಸಬೇಕೆಂಬುದು ಅಲಿಯವರ ನಂಬಿಕೆಯಷ್ಟೇ ಅಲ್ಲ, ದೃಢವಾದ ನಿಲುವೂ ಹೌದು. ಇಂತಹ ಮಾರ್ಗವನ್ನು ಹೊರತುಪಡಿಸಿ ಕೇವಲ ತನ್ನ ಜಾತಿ, ಧರ್ಮ, ಸಂಸ್ಕೃತಿಗಳ ಕೂಪದಲ್ಲೇ ಬಂಧಿಯಾಗುವ ಮನುಷ್ಯ ಅತ್ಯಂತಿಕವಾಗಿ ದುರಂತಕ್ಕೊಳಗಾಗುತ್ತಾನೆ ಎನ್ನುವ ವೈಚಾರಿಕ ಗ್ರಹಿಕೆ ಅಲಿಯವರದಾಗಿದೆ. ಈ ಮಾತುಗಳಿಗೆ ನಿದರ್ಶನವಾಗಿ ಅವರ 'ಈ ಮೊಹಲ್ಲಾ'

**ಚುಟುಕಗಳು ಇಂದಿನ ವೇಗಮಯ ಜೀವನದ ಅಲ್ಪಕಾಲಿಕ, ತಾತ್ಕ್ಷಣಿಕ ಓದಿನ ರಂಜನೆಯ ಕಾರಣಕ್ಕೆ ಮಹತ್ವವನ್ನು ಪಡೆಯುತ್ತಲಿವೆ. ಹೀಗಿದ್ದರೂ ಅಲಿಯವರ ಚುಟುಕುಗಳು ಕೇವಲ ಮನರಂಜನೆಯ ಅಲ್ಪಕಾಲಿಕ ಕಿಕ್ ಕೊಡುವ, ಹಾಗೆ ಓದಿ ಹೀಗೆ ಮರೆಯಬಹುದಾದಂಥವಲ್ಲ. ಜೀವಪರ ಮೌಲ್ಯಾದರ್ಶಗಳಿಂದ ಕೂಡಿದ ಸತ್ವಯುತ ಜೀವನದ ಕನಸನ್ನು ಹೊತ್ತುಪುಟ್ಟ ದರ್ಶನ ದರ್ಪಣಗಳಾಗಿವೆ.**

ಕವನವನ್ನು ನೋಡಬಹುದು. ಆದರೂ ಯಾವುದೇ ಕವಿ ತನ್ನ ಸ್ವಂತದ ಸಾಂಸ್ಕೃತಿಕ ಅನನ್ಯತೆಯನ್ನು ಅಭಿವ್ಯಕ್ತಪಡಿಸುವ ಬಗೆ ಸಾಹಿತ್ಯ ಸೃಷ್ಟಿಯಲ್ಲಿ ಬಹಳ ಮುಖ್ಯ. ಈ ದೃಷ್ಟಿಯಿಂದ ನೋಡಿದಾಗ ಅಲಿಯವರ ಕಾವ್ಯ ಕೆಲವೊಂದು ಪ್ರಶ್ನೆಗಳಿಗೆ ಎಡೆಮಾಡಿಕೊಡುತ್ತದೆ.

ಮುಸ್ಲಿಂ ಸಂವೇದನೆಯು ಅಕಬರ ಅಲಿ ಕಾವ್ಯ ಲೋಕವನ್ನು ಆವರಿಸಿಕೊಂಡಿರುವುದು ಸ್ವಲ್ಪ ಕಡಿಮೆಯೆಂದೇ ಹೇಳಬಹುದು. ಈ ನಿಟ್ಟಿನಲ್ಲಿ ದಿಟ್ಟಿ ಹರಿಸಲು ಅವರು ತಮ್ಮ ಎಂಟನೇ ಕವನ ಸಂಕಲನ 'ಕಸಿಗುಲಾಬಿಯ ಕಥನ'ದವರೆಗೆ ಏಕೆ ಕಾಯಬೇಕಾಯಿತು, ಎಂಬ ಪ್ರಶ್ನೆಯನ್ನು ಈ ಹಿನ್ನೆಲೆಯಲ್ಲಿ ಹಾಕಿಕೊಳ್ಳಬಹುದು. ತಮ್ಮೆದುರಿಗಿನ ಓದುಗರು ಯಾರು ಎನ್ನುವುದಕ್ಕೆ ಅನು ಗುಣವಾಗಿ ಕಾವ್ಯವನ್ನು ರೂಪಿಸುವ ವಿಧಾನದ ಬಿಕ್ಕಟ್ಟುಗಳೇ ಇಂಥವು. ಅಲ್ಪಸಂಖ್ಯಾತ ಸಮುದಾಯದಿಂದ ಬಂದ ಕವಿಗೆ ಕಾಡುವ ಪರಕೀಯ ಪ್ರಜ್ಞೆ, ಸಾಂಸ್ಕೃತಿಕ ಬಿಕ್ಕಟ್ಟುಗಳೂ ಅಲಿಯವರನ್ನು ಕಾಡಿಸಿವೆ. 'ಕಸಿಗುಲಾಬಿ', 'ಅಸ್ವಸ್ಥಾಮನ ಕಥೆ'ಯಂತಹ ಕವಿತೆಗಳಲ್ಲಿ ಈ ಸಂಕಟ ಅನುರಣನಗೊಳ್ಳುತ್ತದೆ. ಕೆ. ಎಸ್. ನಿಸಾರ್ ಅಹಮದ್ ಅವರ 'ನಿಮ್ಮೊಡನಿದ್ದೂ ನಿಮ್ಮಂತಾಗದೆ' ಕವಿತೆಗೆ ಕೌಂಟರ್‌ಪಾರ್ಟ್‌ನಂತಿರುವ 'ನೀವೇನೆಂದರೂ ಸರಿ' ಚುಟುಕದಲ್ಲಿ ''ನನ್ನತನಕ್ಕೆರವಾಗದೆ ಬದುಕುವುದೇ ನನ್ನ ಬದುಕು-ಗುರಿ'' ಎಂಬ ನಿರ್ಣಯವನ್ನು ಕವಿ ಕೈಗೊಂಡಂತೆ ಕಾಣಿಸುತ್ತಾರೆ. ಆದರೆ ''ಒಮ್ಮೊಮ್ಮೆ ಅನಿಸುವುದು ಮಲತಾಯ ಮಗ ನಾನು'' ಎನ್ನುವ ಸಾಲುಗಳು ಹಾಗೂ 'ಅಸ್ವಸ್ಥಾಮ' ರೂಪಕಗಳಲ್ಲಿ ಅನ್ಯತೆಯ ಬಗೆಗಿನ ದಟ್ಟ ನೈರಾಶ್ಯ ಭಾವ ಆವರಿಸಿಕೊಂಡಿರುವುದನ್ನು ಕಾಣಬಹುದು. ಈ ಬಗೆಯ ನೋವು, ನಿರಾಶೆ ಮತ್ತು ಬೆಂಬತ್ತಿ ಕಾಡುವ ಅನ್ಯತೆಯ ಪ್ರಜ್ಞೆಗಳು ವಿಧ್ವಂಸಕತನವಾಗಿ ಮಾರ್ಪಡು ವುದರ ಬಗ್ಗೆ ಅಲಿಯವರು ತೀವ್ರ ವಿರೋಧಿಯಾಗಿದ್ದಾರೆ. ಸಾಮರಸ್ಯ ಮತ್ತು ಸಹಬಾಳ್ವೆಗಳು ಅಸಂಭವವಾದ ಸಂಗತಿಗಳಲ್ಲ ಎಂಬ ಬಲವಾದ ಆರೋಗ್ಯಕರ ನಿಲುವು ಅಲಿಯವರ ಕವಿತೆಗಳಲ್ಲಿ ವ್ಯಕ್ತವಾಗಿದೆ. 'ಅಲಾರ್ಮ್' ಎಂಬ ಚುಟುಕದಲ್ಲಿ ''ಅಲ್ಲಾ ರಾಮ್'' ಎನ್ನುವ ಶ್ಲೇಷೆ ಸಾಧಿಸುವ ಅರ್ಥದ ನೆಲೆ ಇದೇ ಆಗಿದೆ.

> ನಸುಕಿನ ಸಮಯದಿ ಅಲಾರ್ಮ್‌ದಂದದಿ
> ಕೂಗಿ ಎಚ್ಚರಿಸೆ ಮುದ್ದೂ ಮಣಿ
> ತನ್ನೊಳು ತಾ ಒಡನುಡಿದಳು ತಾಯಿ,
> ''ನಿಜಕಿದು 'ಅಲ್ಲಾ-ರಾಮ' ದನಿ !''

- ಇಲ್ಲಿ ವ್ಯವಸ್ಥೆ ಎಷ್ಟೇ ಹದಗೆಟ್ಟಿದ್ದರೂ ಸಂಪೂರ್ಣ ಅವಿಶ್ವಾಸ ಹೊಂದುವುದು ತರವಲ್ಲ ಎನ್ನುವುದು ಅಲಿಯವರ ಸ್ಪಷ್ಟ ಅಭಿಮತವಾಗಿದೆ.

> ಓ ಹುಚ್ಚಪ್ಪ ನೀ ನಿಂತ ನೆಲದ ಮೇಲು ಪದರ
> ಕೆಲಬಟ್ಟೆಗೆ ಕಾದು ಕೆಂಡವಾಗಿದ್ದರೂ
> ತಳಭಾಗದಲ್ಲಿನ್ನೂ ತೇವು ತುಂಬಿಹುದು
>
> (''ಹುಚ್ಚು ಭಾಯಿ ಮತ್ತು ಹಿಜ್ರತ್'')

- ಈ ಬಗೆಯ ಸ್ವಸ್ಥ ವಿಚಾರಗಳನ್ನು ಪ್ರತಿಪಾದಿಸುವ ಕಾರಣಕ್ಕೆ ಅಲಿಯವರ ಕವಿತೆಗಳು ಹೃದಯಕ್ಕೆ ಹತ್ತಿರವಾಗುತ್ತವೆ. ಅಲಿಯವರ ಮೇಲಾದ ಗಾಂಧೀವಾದದ ಗಾಢ ಪ್ರಭಾವವೂ ಇಂತಹ ಆರೋಗ್ಯಕರ ಚಿಂತನೆಗೆ ಕಾರಣವಿರಬಹುದು.




> ಚುಟುಕಗಳ ಬಗ್ಗೆ ಒಂದಿಷ್ಟು:
> ಕುದಿಮನದಲಿ ಕುದ್ದು ಹೊರಗೈತಂದ
> ಚಿಂತಾಮಣಿಯು ಕಡೆದ ವಜ್ರ-ಹರಳು
>
> (ನನ್ನ ಚುಟುಕು)

ಎಂದು ಅಲಿ ಮುಲ್ಲಾರು ತಮ್ಮ ಚುಟುಕುಗಳ ಹುಟ್ಟು ಹಾಗೂ ಸ್ವರೂಪವನ್ನು ಕುರಿತು ವ್ಯಾಖ್ಯಾನಿಸಿದ್ದಾರೆ. ಕುದಿಯುವ ಮನಸ್ಸಿನಿಂದ ಭಾರತದ, ಕರ್ನಾಟಕದ ರಾಜಕೀಯ, ಧಾರ್ಮಿಕ, ಸಾಮಾಜಿಕ ವ್ಯವಸ್ಥೆಗಳನ್ನು ಕಂಡು, ವಜ್ರದ ಹರಳಿನಂತಹ ಹರಿತವಾದ ಭಾಷೆಯಲ್ಲಿ ಚುಟುಕಗಳನ್ನು ಕಡೆದಿರಿಸಿದ್ದಾರೆ ಅಲಿ. ತಮ್ಮ ನಿರ್ಭೀತ ನಿಲುವುಗಳಿಂದಾಗಿ ಮುಲ್ಲಾ, ಮೌಲ್ವಿ, ಸೆಟ್ಟಿ, ಊರ ಸುಲಿಯುವ ದೇಶಪಾಂಡೆ, ರಾಜಕಾರಣಿ, ಸರ್ಕಾರಿ ನೌಕರ, ಅಧಿಕಾರಿ, ಆಧುನಿಕತೆಗೆ ಜೋತುಬಿದ್ದ ಫ್ಯಾಶನ್ನಿನ ಪೋರಿ, ಲಾರಿ ಡ್ರೈವರ್, ಸೈಕಲ್ ಸವಾರ, ಸೋಮಾರಿ ಡಾಕ್ಟರ್, ವಕೀಲ ಮುಂತಾದ ಸಮಾಜದ ಎಲ್ಲ ವರ್ಗದ ಜನರೂ ಇವರ ಚುಟುಕಗಳಲ್ಲಿ ಕಟು ವ್ಯಂಗ್ಯ ಮತ್ತು ಟೀಕೆಗೆ ಗುರಿಯಾಗುತ್ತಾರೆ. ಅಭಿವೃದ್ಧಿ ಕಾಣದ ನಗರಗಳು, ಯಾವುದಕ್ಕೂ ತಲೆ ಕೆಡಿಸಿಕೊಳ್ಳದ ಕಾರಿನ ಜನ, ಗುರಿಯಿಲ್ಲದ ಗುರುಶಿಷ್ಯರು, ಹುಸಿ ಗಾಂಧಿವಾದಿ, ದೇಶಭಕ್ತ ಇವರೆಲ್ಲರ ಸೋಗಲಾಡಿತನವನ್ನು ತಮ್ಮ ಚುಟುಕಗಳ ವಸ್ತುವಾಗಿಸಿಕೊಂಡು ಅಲಿ ಬರೆದಿದ್ದಾರೆ.

ಅಲಿಯವರ ಚುಟುಕಗಳ ವಿಶೇಷತೆಯಿರುವುದು ಅವುಗಳಲ್ಲಿನ ಔಚಿತ್ಯ ಮೀರದ ಸಹಜ ಶ್ಲೇಷೆಯಲ್ಲಿ. ಇವು ಕುಸುರಿಯ ಕುಶಲತೆಯನ್ನು ಹೊಂದಿವೆ. ಅದ್ಭುತವಾದ ಹಾಸ್ಯಪ್ರಜ್ಞೆ ಇವುಗಳಲ್ಲಿ ಹಾಸುಹೊಕ್ಕಾಗಿದೆ :

> ಹೊತ್ತು ಹೊತ್ತಿಗೆ ಹೊತ್ತಿಗೆಯ ಓದಿದವನಲ್ಲ:
> ಗುರುಬೋಧೆಯನು ಕೇಳದಂತಹ ಮಂಗ !
> ನಿನ್ನೊಬ್ಬನನೆ ನಂಬಿ ನೆಚ್ಚಿಹ ನನ್ನನು
> ತೇಲಿಸೋ ಮುಳುಗಿಸೋ ಗಾಯಿಡು-ರಂಗ
>
> (ವಿದ್ಯಾರ್ಥಿಯ ಮೊರೆ)

ಮೇಲಿನ ಮಾತಿಗೆ ಈ ಸಾಲುಗಳು ಉ... ಉದಾಹರಣೆ.

'ವಂಕಿಯ ಪ್ರಚಾರ', 'ಜೋಡಿ'ಗಳಂತಹ ಚುಟುಕಗ... ಪೋಲಿತನ ಓದುಗರಿಗೆ ಕಚಗುಳಿಯಿಡುವಂತ... ಚುಟುಕುಗಳ ವೈಲಕ್ಷಣ್ಯವೇ, ಅದು ಓದಿದ ಕೂಡ... ನಗೆಯುಕ್ಕಿಸುವುದರೊಂದಿಗೆ ಸೂಕ್ಷ್ಮವಾಗಿ ಕಟಕಿ, ವ್ಯಂ... ಗಳನ್ನು ಬೆರೆಸಿ ಚಿಂತನೆಗೆ ಹಚ್ಚುವುದು. ಇದು ... ಕೇವಲ ಒಂದಿಷ್ಟು ನಗಿಸುವಂತಹ ಹಾಸ್ಯಸೃಷ್ಟಿ... ಕಾಯಕವಲ್ಲ. ಜತೆಗೆ ತಾನು ನಿರ್ವಹಿಸುತ್ತಿರುವ ವಸ್ತು... ಸ್ಥಿತಿಯ ಬಗ್ಗೆ ತೀಕ್ಷ್ಣವಾದ ಒಳನೋಟವ... ಹೊಂದಿರುತ್ತದೆ.

ಚುಟುಕಗಳು ಇಂದಿನ ವೇಗಮಯ ಜೀವನ... ಅಲ್ಪಕಾಲಿಕ, ತಾತ್ಕ್ಷಣಿಕ ಓದಿನ ರಂಜನೆಯ ಕಾರಣ... ಮಹತ್ವವನ್ನು ಪಡೆಯುತ್ತಲಿವೆ. ಹೀಗಿದ್ದರೂ ಅಲಿಯವ... ಚುಟುಕುಗಳು ಕೇವಲ ಮನರಂಜನೆಯ ಅಲ್ಪಕಾಲಿಕ ... ಕೊಡುವ, ಹಾಗೆ ಓದಿ ಹೀಗೆ ಮರೆಯಬಹುದ... ದಂಥವಲ್ಲ. ಜೀವಪರ ಮೌಲ್ಯಾದರ್ಶಗಳಿಂದ ಕೂಡಿ... ಸತ್ವಯುತ ಜೀವನದ ಕನಸನ್ನು ಹೊತ್ತ ಪುಟ್ಟ ದರ್ಶ... ದರ್ಪಣಗಳಾಗಿವೆ. ಅಲಿಯವರ ಕವನ ಸಂಕಲನಗಳಿ... ಕನ್ನಡ ಸಾಹಿತ್ಯ ಪರಂಪರೆಯನ್ನು ಭಿನ್ನ ಭಿನ್ನ ರೀತಿಯ... ಬೆಳೆಸಿದ ಖ್ಯಾತನಾಮರಾದ ಸಾಹಿತಿಗಳು ಮುನ್ನುಡಿ... ಹಿನ್ನುಡಿಗಳನ್ನು ಬರೆದಿರುವುದು ಇನ್ನೊಂದು ವಿಶಿಷ್ಟವಾ... ಸಂಗತಿ. ಶ್ರೀರಂಗ, ವಿ. ಕೃ. ಗೋಕಾಕ್, ವಿ.ಸೀ., ಗೌರೀ... ಕಾಯ್ಕಿಣಿ, ದೇವಯ್ಯ ಹರವೆ, ತ. ಸು. ಶಾಮರಾಯ... ಚದುರಂಗ, ಎಚ್ಚೆಸ್ಕೆ ಮೊದಲಾದ ಸಾಹಿತ್ಯ ದಿಗ್ಗಜರ ... ಬರಹಗಳು ಅಲಿಯವರ ಕಾವ್ಯ- ಚುಟುಕುಗಳ ಓದಿ... ಸೂಕ್ತ ಪ್ರವೇಶವನ್ನು ದೊರಕಿಸಿಕೊಡುವಂತಿವೆ. ೨೦೦೬ನೇ ಇಸವಿಯಲ್ಲಿ 'ಅಕಬರ ಅಲಿಯವರ ಸಮಗ್ರ ಕಾವ್ಯ' ಪ್ರಕಟವಾಗಿದೆ. ಕನ್ನಡದ ಓದುಗ ವಲಯ ಇಂತಹ ಅಲಕ್ಷಿತ ಕವಿಗಳ ಬಗ್ಗೆ ಚಿತ್ತಹರಿಸುವಲ್ಲಿ ಇಂತಹ ಸಮಗ್ರ ಸಂಕಲನಗಳು ಮತ್ತಷ್ಟು ಅಗತ್ಯವಾಗಿವೆ. ದೇವಯ್ಯ ಹರವೆಯವರು 'ತಮಸಾ ನದಿಯ ಎಡ ಬಲದಿ' ಕೃತಿ... ಬರೆದ ಹಿನ್ನುಡಿಯೊಂದಿಗೆ ಈ ಬರಹವನ್ನು ಅಂತ... ಗೊಳಿಸುವುದು ಸೂಕ್ತವೆನಿಸುತ್ತದೆ. ''ಮೊದಲ... ಸಂಕಲನದ ನಂತರ ಅನುಭವದ ಸೀಮಿತವಲಯ... ವಿಸ್ತಾರವಾಗಿದೆ; ಭಾಷೆಯ ಮೇಲಿನ ಹಿಡಿತ... ಎದ್ದುಕಾಣುತ್ತದೆ; ಕಾವ್ಯದಲ್ಲಿ ಸಂಕೇತ-ಪ್ರತಿಮೆಗಳ... ಅರ್ಥವಂತಿಕೆ ವೃದ್ಧಿಸಿವೆ – ಇವೆಲ್ಲದರ ಬಳಕೆಯಿಂದ... ಕಾವ್ಯಲೋಕಕ್ಕೆ ಕೆಲವನ್ನಾದರೂ ಉತ್ತಮ ಕವನ... ನೀಡಿರುವರೆಂಬುದು; ಅದಕ್ಕಾಗಿಯೆ ಈಗ ಅವರ... ಕವನಗಳ ಒಟ್ಟು ಅಧ್ಯಯನ ಕೂಡ ಅರ್ಥವತ್ತಾದುದು''. ಶುದ್ಧ ಸಾಹಿತ್ಯಕವಾದ ಈ ದೃಷ್ಟಿಕೋನವನ್ನು ಒಳಗೊಂಡು... ಅಲಿಯವರ ಕಾವ್ಯ ಪ್ರತಿಪಾದಿಸುವ ಮಾನವೀಯ... ಮೌಲ್ಯಗಳ ನೆಲೆಯಿಂದ ಸಹ ಅಲಿಯವರ ಕಾವ್ಯ... ಮಹತ್ವದ್ದಾಗಿದೆ.

ಡಾ|| ಬಿ. ಸಿ. ನಾಗೇಂದ್ರ ಕುಮಾರ್
ನಂ. ೫೬, 'ಚಂದ್ರಾಲಯ', ಮೊದಲ ಮಹಡಿ
೧೦ನೇ ಅಡ್ಡರಸ್ತೆ, ಬಿಟಿಎಸ್ ರಸ್ತೆ, ವಿಲ್ಸನ್ ಗಾರ್ಡನ್
ಬೆಂಗಳೂರು - ೫೬೦ ೦೨೭

# ‘ಇರುವೆ ಸಿಂಹ’–ಕಥೆ ಚರಿತ್ರೆ ಮತ್ತು ವಿಜ್ಞಾನ



ಪ್ರೌಢಹಂತದ ‘ಇರುವೆ ಸಿಂಹ’ ಕೀಟವನ್ನು ಗುರುತಿಸುವುದು ಬಹಳ ಸುಲಭ. ಏರೋಪ್ಲೇನ್ ಚಿಟ್ಟೆಯಂತೆಯೇ ದಪ್ಪ ತಲೆ, ಉದ್ದವಾದ ಬಾಲದಂತಹ ಹಿಂಭಾಗ, ಉದ್ದವಾದ ರೆಕ್ಕೆಗಳು ಇವಕ್ಕಿವೆ. ಆದರೆ ಏರೋಪ್ಲೇನ್ ಚಿಟ್ಟೆಗಳಿಗೆ ‘ಆಂಟೆನಾ’ಗಳಿರುವುದಿಲ್ಲ, ಇರುವೆ ಸಿಂಹಕ್ಕೆ ತಲೆಯ ಮೇಲೆ ಎದ್ದು ಕಾಣುವ ಎರಡು ‘ಆಂಟೆನಾ’ಗಳಿರುತ್ತವೆ. ಪ್ರೌಢ ಹಂತದ ಇರುವೆ ಸಿಂಹ ಏರೋಪ್ಲೇನ್ ಚಿಟ್ಟೆಯಷ್ಟು ವೇಗವಾಗಿ ಹಾರಲಾರದು ಮತ್ತು ಕುಳಿತಾಗ ತನ್ನ ರೆಕ್ಕೆಗಳನ್ನು ಅಗಲವಾಗಿ ಹರಡದ ನೇರವಾಗಿ ಮಡಿಚಿಟ್ಟುಕೊಳ್ಳುತ್ತದೆ. ಕೇವಲ ನಾಲ್ಕು ದಿನ ಬದುಕುವ ಪ್ರೌಢ ಹಂತದ ಇರುವೆ ಸಿಂಹದ ಕುರಿತ ಕುತೂಹಲ ಕೇವಲ ಅಕೆಡೆಮಿಕ್ ಮಾತ್ರ. ವಾಸ್ತವವಾಗಿ ಇರುವೆ ಸಿಂಹ ಎಂಬುದು ವರ್ಷಗಳ ಕಾಲ ಬದುಕುವ, ಕುತೂಹಲಕಾರಿ ನಡವಳಿಕೆಗಳ, ಈ ಕೀಟದ ‘ಲಾರ್ವಾ’ ಹಂತ.

ಇರುವೆ ಸಿಂಹ (ಇನ್ನು ಮುಂದೆ ಲೇಖನದಲ್ಲಿ ಇರುವೆ ಸಿಂಹ ಎಂದರೆ ಕೀಟದ ಲಾರ್ವಾ ಹಂತ) ಬಲವಾದ, ಅಂಡಾಕಾರದ, ಮೈಮೇಲೆಲ್ಲಾ ಮುಳ್ಳುಗಳಿರುವ ಶರೀರವನ್ನು ಹೊಂದಿದೆ. ಅದರ ಪುಟ್ಟ ತಲೆಯ ಮೇಲೆ ಎರಡು ಅಗಾಧ ಗಾತ್ರದ ಏಡಿಗಿರುವಂತಹ ಕೊಂಬುಗಳಿವೆ. ಇದು ಅದರ ದವಡೆಗಳು. ಈ ಬಲವಾದ ಕೊಂಬುಗಳ ಮೇಲೂ ಹರಿತವಾದ ಸಣ್ಣ ಸಣ್ಣ ಹಲ್ಲುಗಳಿವೆ. ಕೊಂಬಿನಂತಹ ಇದರ ದವಡೆ, ಒಳಗೆ ಪೊಳ್ಳಾಗಿರುವ, ಇಂಜೆಕ್ಷನ್ ಸಿರಿಂಜ್‌ಗಳಂತೆ ಕೆಲಸ ಮಾಡುತ್ತದೆ. ಇಷ್ಟೆಲ್ಲಾ ವರ್ಣಿಸಿದ ಇರುವೆ ಸಿಂಹ ಸಹಜವಾಗಿ ನಮ್ಮ ಕಣ್ಣಿಗೆ ಬೀಳುವುದೇ ಇಲ್ಲ. ನಮಗೆ ಸ್ಪಷ್ಟವಾಗಿ ಕಾಣುವುದು ಇದು ಬೇಟೆಯಾಡಲು ರಚಿಸಿಕೊಂಡ ‘ಕುಳಿ’(ಪಿಟ್)ಗಳು ಮಾತ್ರ.

ಎ. ಸುಬ್ರಮಣ್ಯ

ಇರುವೆ ಸಿಂಹ ನ್ಯೂರೋಪ್ಟೀರಾ ಎಂಬ ಕೀಟವರ್ಗಕ್ಕೆ ಸೇರುತ್ತದೆ. ಇದು ಬೇರೆ ಕೀಟಗಳನ್ನು, ಮುಖ್ಯವಾಗಿ ಇರುವೆಗಳನ್ನು ಬೇಟೆಯಾಡುತ್ತದೆ. ಹಾಗೆಂದು ಇದೇನೂ ಇರುವೆಗಳನ್ನು ಸಿಂಹದಂತೆ ಬೆನ್ನತ್ತಿ ಹಿಡಿಯುವುದಿಲ್ಲ. ಜೇಡಗಳು ಬಲೆಯನ್ನು ನೇಯ್ದು ಆಕಸ್ಮಿಕವಾಗಿ ಅದರಲ್ಲಿ ಸಿಕ್ಕಿಬೀಳುವ ಕೀಟಗಳನ್ನು ತಿನ್ನುವಂತೆ ಇರುವೆ ಸಿಂಹ ಕೂಡ ನೆಲದಲ್ಲಿ ‘ಕುಳಿಯ’ ಬೋನು ನಿರ್ಮಿಸುತ್ತದೆ. ಹಿಂದೆ ಕಾಡಾನೆಗಳನ್ನು ಹಿಡಿಯಲು ರಚಿಸುತ್ತಿದ್ದ ಖೆಡ್ಡಾ ಮಾದರಿಯಲ್ಲಿ ಇರುವೆ ಸಿಂಹ ನೆಲದಲ್ಲಿ ಕೋನಾಕಾರದ ಕುಳಿಗಳನ್ನು ತೋಡುತ್ತದೆ. ವೃತ್ತಾಕಾರದಲ್ಲಿ ಚಲಿಸುತ್ತಾ ಕೋನಾಕಾರದ ಮೂರ್ನಾಲ್ಕು ಸೆಂ.ಮೀ. ಅಗಲದ ಹಾಗೂ ಎರಡರಿಂದ ಮೂರು ಸೆಂ.ಮೀ. ಆಳದ ಕುಳಿಯನ್ನು ಇದು ತೋಡುತ್ತದೆ ಮತ್ತು ಕಾಣದಂತೆ ಅದರಡಿಯಲ್ಲಿ ಅವಿತಿಟ್ಟುಕೊಳ್ಳುತ್ತದೆ. ಕುಳಿತೋಡುವುದು ಮರಳು ಅಥವಾ ನುಣುಪಾದ ಮಣ್ಣಿನ ನೆಲದಲ್ಲಿ. ಇದು ರಚಿಸಿದ ಕುಳಿಯ ಕೋನ ಎಷ್ಟು ಪರಿಪೂರ್ಣವಾಗಿರುತ್ತದೆಂದರೆ ಅದೇ ದಾರಿಯಲ್ಲಿ ಸಂಚರಿಸುವ ಇರುವೆ ಅಥವಾ ಯಾವುದೇ ಕೀಟ ಈ ಕುಳಿಯ ಅಂಚಿಗೆ ಬಂದೊಡನೆ ಜಾರಿ ಕುಳಿಯೊಳಗೆ ಬೀಳಲೇಬೇಕು. ನಯವಾದ ಮಣ್ಣಿನಲ್ಲಿ ಕುಳಿ ತೋಡಿರುವುದರಿಂದ ಇರುವೆಗೆ ಮೇಲೆ ಹತ್ತಲು ಹಿಡಿತ ಸಿಗುವುದೇ ಇಲ್ಲ. ಮೇಲೆ ಹತ್ತಲು ಪ್ರಯತ್ನಿಸಿದಷ್ಟೂ ಕೆಳಗೇ ಜಾರುತ್ತದೆ. ಬೇಟೆ ತನ್ನ ಗುಂಡಿಗೆ ಬಿದ್ದ ಸುಳಿವು ಸಿಕ್ಕ ಇರುವೆ ಸಿಂಹ, ಬೇಟೆ ಮೇಲೆ ಹತ್ತಲಾರದಂತೆ ಅದರತ್ತ ತನ್ನ ಕೊಂಬಿನಿಂದ ಮಣ್ಣಿನ ಕಣಗಳನ್ನು ಹಾರಿಸಿ ಕೆಳಗೆ ಬೀಳುವಂತೆ ಮಾಡಿ ತಿನ್ನುತ್ತದೆ. ತಿನ್ನುತ್ತದೆ ಎಂದರೆ ತಪ್ಪಾಗುತ್ತದೆ, ತನ್ನ ಕೊಂಬುಗಳಿಂದ ಹಿಡಿದು ಹೀರುತ್ತದೆ.



ಇರುವೆ ಸಿಂಹದ ಕೊಂಬಿನಂತಹ ದವಡೆ ಬಹೂಪಯೋಗಿ ಆಯುಧವಿದ್ದಂತೆ. ಗುಂಡಿಯನ್ನು ತೋಡಲು ಪ್ರಥಮವಾಗಿ ಇದರ ಬಳಕೆಯಾಗುತ್ತದೆ. ಬೇಟೆಯನ್ನು ಹಿಡಿಯಲು ಕಟಿಂಗ್ ಪ್ಲೇಯರ್‌ನಂತೆ ಕೊಂಬನ್ನು ಬಳಸುತ್ತದೆ. ನಂತರ ಪೊಳ್ಳಾದ ಕೊಂಬಿನಿಂದ ಬೇಟೆಯ ಶರೀರದ ಅಂಗಾಂಗಗಳು ಕರಗುವಂತಹ ದ್ರಾವಣದ ಇಂಜೆಕ್ಷನ್ ನೀಡುತ್ತದೆ. ನಂತರ ಅದೇ ಕೊಂಬನ್ನು ಹೀರುಕೊಳವೆಯಂತೆ ಬಳಸಿ ಬೇಟೆಯ ಶರೀರದ ಸತ್ವಗಳನ್ನು ಹೀರುತ್ತದೆ. ಕೊನೆಯದಾಗಿ ಉಳಿಯುವ ಬೇಟೆಯ ಶರೀರವನ್ನು ಮತ್ತು ಆಗಾಗ ಕುಳಿಯೊಳಗೆ ಬೀಳುವ ಕಲ್ಲುಗಳನ್ನು ಇರುವೆ ಸಿಂಹ ತನ್ನ ಕೊಂಬನ್ನು ಬ್ಯಾಟ್‌ನಂತೆ ಬಳಸಿ ಗುಂಡಿಯಿಂದ ಹೊರಗೆ ಬೀಳುವಂತೆ ಚಿಮ್ಮುತ್ತದೆ (ಯುವರಾಜ್ ಸಿಂಗ್ ಸಿಕ್ಸರ್ ಹೊಡೆಯುವ ರೀತಿಯಲ್ಲಿ).

ಇರುವೆ ಸಿಂಹ ಮೊಟ್ಟೆಯಿಡುವುದೂ ಮರಳು ಅಥವಾ ನುಣುಪಾದ ಮಣ್ಣಿರುವ ಜಾಗದಲ್ಲೇ. ಇಂತಹ ಪ್ರಶಸ್ತವಾದ ಜಾಗಗಳಲ್ಲಿ ಹಲವಾರು ಇರುವೆ ಸಿಂಹಗಳ ಕುಳಿಗಳು ಒತ್ತೊತ್ತಾಗಿರುವುದನ್ನು ಕಾಣಬಹುದು. ಒತ್ತೊತ್ತಾಗಿರುವ ಈ ಕುಳಿಗಳು ಚಂದ್ರನ ಮೇಲಿನ ಕುಳಿಗಳನ್ನು (ಕ್ರೇಟರ್ಸ್) ನೆನಪಿಗೆ ತರುತ್ತವೆ. ಚಂದ್ರನಿಗೂ ಇರುವೆ ಸಿಂಹಗಳಿಗೂ ಒಂದು ರೀತಿಯ ಸಂಬಂಧವೂ ಇದೆಯೆನ್ನಿ. ಹುಣ್ಣಿಮೆಯ ಆಸುಪಾಸಿನ ದಿನಗಳಲ್ಲಿ ಇರುವೆ ಸಿಂಹ ಹೆಚ್ಚು ಅಗಲವಾದ, ಆಳವಾದ ಕುಳಿಗಳನ್ನು ತೋಡುತ್ತದೆ. ಹುಣ್ಣಿಮೆ ಚಂದ್ರನನ್ನು ಗಮನಿಸಿ ಇವು ಅಗಲವಾದ ಕುಳಿಗಳನ್ನು ತೋಡಿವೆ ಎಂದು ತಿಳಿಯಬೇಡಿ. ಇರುವೆ ಸಿಂಹಗಳನ್ನು ಹೊರಗಿನ ವಾತಾವರಣದ ಸಂಪರ್ಕವಿಲ್ಲದ ಪ್ರಯೋಗಾಲಯಗಳಲ್ಲಿ ಬೆಳೆಸಿದರೂ ಕೂಡ ಅವು ಚಾಂದ್ರಮಾನ ತಿಂಗಳಿಗೆ ಅನುಸಾರವಾಗಿ ದೊಡ್ಡ ಕುಳಿಗಳನ್ನೇ ರಚಿಸುತ್ತವೆ. ಇವುಗಳ ಮೆದುಳಿನಲ್ಲಿ ಹುದುಗಿರುವ ಜೈವಿಕ ಗಡಿಯಾರ ಚಾಂದ್ರಮಾನದ ಸೂಚನೆಗಳನ್ನು ಇವುಗಳಿಗೆ ನೀಡುತ್ತಿರಬಹುದು. ಇದರ ಕುರಿತು ಹೆಚ್ಚಿನ ಸಂಶೋಧನೆಗಳು ಇನ್ನೂ ನಡೆದಿಲ್ಲ.

### ಚಿನ್ನ ಅಗೆಯುವ ‘ಇರುವೆ ಸಿಂಹ’ಗಳು

ಇರುವೆ ಸಿಂಹಗಳ ಕುರಿತ ರೋಮಾಂಚಕಾರಿಯಾದ ಕತೆಯೊಂದಿದೆ. ಕ್ರಿಸ್ತಪೂರ್ವ ಐದನೇ ಶತಮಾನದ ಗ್ರೀಕ್ ಇತಿಹಾಸಕಾರ ಹೆರೋಡೋಟಸ್ ಬರೆದಿರುವ ಕತೆ ಹೀಗಿದೆ :

ದುರ್ಗಮ ಹಿಮಾಲಯದಲ್ಲೊಂದು ನಿರ್ಜನ ಮರಳುಗಾಡಿದೆ. ಅಲ್ಲಿ ಇರುವೆ ಸಿಂಹಗಳೆಂಬ ಗುಂಪಿನಲ್ಲಿ ವಾಸಿಸುವ, ನಾಯಿಗಳಿಗಿಂತ ಸ್ವಲ್ಪ ಸಣ್ಣದಾದ ಕ್ರೂರ ಮೃಗಗಳು ಅಪಾರ ಸಂಖ್ಯೆಯಲ್ಲಿ ವಾಸಿಸುತ್ತವೆ. ಈ ಪ್ರಾಣಿಗಳೂ ನೆಲದೊಳಗೆ ಆಳವಾದ ಬಿಲಗಳನ್ನು ತೋಡಿ ವಾಸಿಸುತ್ತವೆ. ಹೀಗೆ ಬಿಲ ತೋಡಿ ಭೂಮ್ಯಂತರಂಗದಿಂದ ಹೊರಹಾಕಿದ ಮಣ್ಣಿನಲ್ಲಿ ಚಿನ್ನದಂಶವಿರುತ್ತದೆ. ‘ಇಂಡಿಯಾ’ ದೇಶದ ಜನರು ಈ

ಮಣ್ಣನ್ನು ಸಂಗ್ರಹಿಸಿ ಚಿನ್ನವನ್ನು ಪಡೆಯುತ್ತಾರೆ. ಚಿನ್ನವನ್ನು ಸಂಗ್ರಹಿಸಿ ತರುವ ಕತೆಯೂ ಅಷ್ಟೇ ರೋಚಕವಾಗಿದೆ. ಚಿನ್ನದಂಶವಿರುವ ಮಣ್ಣನ್ನು ತರುವ ಪ್ರತಿಯೊಬ್ಬರೂ ಮೂರು ಒಂಟೆಗಳೊಂದಿಗೆ ಹೋಗಬೇಕು. ಇನ್ನೂ ಮರಿಗೆ ಹಾಲೂಡಿಸುತ್ತಿರುವ ಹೆಣ್ಣು ಒಂಟೆಯ ಮೇಲೆ ಚೀಲಗಳೊಂದಿಗೆ ಅವನು ಪ್ರಯಾಣಿಸಬೇಕು. ಇನ್ನೆರಡು ಗಂಡು ಒಂಟೆಗಳು ಅಕ್ಕಪಕ್ಕದಲ್ಲಿರುತ್ತವೆ. ಇರುವೆ ಸಿಂಹಗಳಿರುವ ಪ್ರದೇಶವನ್ನು ಈ ಒಂಟೆ ಸವಾರರು ನಡುಮಧ್ಯಾಹ್ನದ ವೇಳೆಗೆ ಪ್ರವೇಶಿಸಬೇಕು. ಏಕೆಂದರೆ ಆ ಸಮಯದಲ್ಲಿ ಬಿಸಿಲಿನ ಝಳದಿಂದ ಪಾರಾಗಲು ಇರುವೆ ಸಿಂಹಗಳು ಬಿಲದಲ್ಲಿ ಮಲಗಿರುತ್ತವೆ. ಇರುವೆ ಸಿಂಹಗಳು ಇವರ ವಾಸನೆ ಹಿಡಿಯುವುದರೊಳಗೆ ತಮ್ಮ ತಮ್ಮ ಚೀಲಗಳನ್ನು ತುಂಬಿಸಿಕೊಂಡು ಆದಷ್ಟು ಬೇಗ ಒಂಟೆಗಳೊಂದಿಗೆ ದೌಡಾಯಿಸಬೇಕು. ಇರುವೆ ಸಿಂಹಗಳು ಸವಾರರ ಜಾಡು ಹಿಡಿದು ಹಿಂಬಾಲಿಸತೊಡಗುತ್ತವೆ. ಸವಾರರು ಮತ್ತು ಚಿನ್ನದಂಶದ ಮಣ್ಣನ್ನು ಹೊತ್ತ ಹೆಣ್ಣು ಒಂಟೆ ತನ್ನ ಮರಿಗಳಿಗೆ ಹಾಲೂಡಿಸಬೇಕಾದುದನ್ನು ನೆನೆದು ವೇಗವಾಗಿ ಓಡುತ್ತದೆ. ಗಂಡು ಒಂಟೆಗಳು ಹೆಚ್ಚು ದೂರ ವೇಗವಾಗಿ ಓಡಲಾರದೆ ಸುಸ್ತಾಗಿ ಹಿಂದೆ ಬೀಳುತ್ತವೆ. ಇರುವೆ ಸಿಂಹಗಳು ಹಿಂದೆ ಬಿದ್ದ ಗಂಡು ಒಂಟೆಗಳನ್ನು ಕೊಂದುತಿನ್ನುತ್ತವೆ. ಅಷ್ಟರಲ್ಲಿ ಹೆಣ್ಣು ಒಂಟೆಯ ಜತೆ ಅದರ ಸವಾರರು ತಮ್ಮ ತಮ್ಮ ಚೀಲಗಳೊಡನೆ ಇರುವೆ ಸಿಂಹದ ಪ್ರದೇಶದಿಂದ ಪರಾರಿಯಾಗಿರುತ್ತಾರೆ.

ಇರುವೆ ಸಿಂಹಗಳ ಕತೆಯ ಪ್ರಸ್ತಾಪ ಮಹಾಭಾರತದಲ್ಲೂ ಇದೆಯೆಂದು ಹೇಳಲಾಗಿದೆ. ಹೆರೋಡೋಟಸ್ ನಂತರದ ಗ್ರೀಕ್ ಇತಿಹಾಸಕಾರರಾದ ನಿಯಾರ್ಕಸ್(ಕ್ರಿ.ಪೂ. ನಾಲ್ಕನೇ ಶತಮಾನ) ಮತ್ತು ಮೆಗಸ್ತನೀಸ್(ಕ್ರಿ.ಪೂ. ಮೂರನೇ ಶತಮಾನ) ಕೂಡ ಇರುವೆ ಸಿಂಹಗಳ ಕುರಿತು ಬರೆಯುತ್ತಾರೆ. ಅಲೆಕ್ಸಾಂಡರ್ ಮತ್ತು ಪರ್ಶಿಯನ್ ದೊರೆಗಳೂ ಇರುವೆ ಸಿಂಹಗಳ ಕುರಿತು ಆಸಕ್ತರಾಗಿದ್ದರು. ತದನಂತರದ ಪರ್ಶಿಯನ್ ಮತ್ತು ಯೂರೋಪಿಯನ್ ಸಾಹಿತ್ಯ ಪರಂಪರೆಯಲ್ಲಿ ಇರುವೆ ಸಿಂಹಗಳನ್ನು ದಂತಕತೆಗಳಂತೆ ಬಿಂಬಿಸಲಾಗಿದೆ. ಹೆರೋಡೋಟಸ್ ನಂತರದ ಕಾಲದಲ್ಲಿ ಇರುವೆ ಸಿಂಹದ ಐತಿಹ್ಯ ನಾನಾ ರೀತಿಯ ರೂಪಾಂತರಗಳನ್ನು ಪಡೆದಿವೆ. ಕೆಲವೆಡೆ ಒಂಟೆಗಳ ಬದಲಿಗೆ ಕುದುರೆಗಳು ಬರುತ್ತವೆ. ಹತ್ತನೇ ಶತಮಾನದ ಆಂಗ್ಲೋ-ಸ್ಯಾಕ್ಸನ್ ಗ್ರಂಥ 'ದ ರೆಬ್ಯು ಇನ್ ಒರಿಯೆಂತ್ ಮಿರಾಬಿಲಿಬುಸ್'ದಲ್ಲಿ ಇರುವೆ ಸಿಂಹಗಳ ಐತಿಹ್ಯದ ಸುಂದರವಾದ ಚಿತ್ರಗಳಿವೆ. ಬ್ರಿಟಿಷ್ ಗ್ರಂಥಾಲಯಲ್ಲಿ ಸಂರಕ್ಷಿಸಲಾಗಿರುವ ಈ ಗ್ರಂಥ ಇರುವೆ ಸಿಂಹಗಳನ್ನು ಕಪ್ಪು-ಕೆಂಪು ಬಣ್ಣದ ಪ್ರಾಣಿಗಳೆಂದೂ, ಅವು ಮಿಡತೆಯಂತಹ ಕಾಲುಗಳನ್ನು ಹೊಂದಿವೆ ಎಂದೂ ಉಲ್ಲೇಖಿಸಿದೆ.

### ಬಯಲಾದ ಇತಿಹಾಸ

ಇರುವೆ ಸಿಂಹದ ವೃತ್ತಾಂತ ಹೆರೋಡೋಟಸ್‌ನಂತಹ ಪ್ರಾಚೀನ ಇತಿಹಾಸಕಾರರ ಕುತೂಹಲವನ್ನು ಕೆರಳಿಸಿದಂತೆಯೇ, ಆಧುನಿಕ ಚರಿತ್ರಕಾರರ ಕುತೂಹಲವನ್ನೂ ಕಾಡುತ್ತಾ ಬಂದಿದೆ. ಹೆರೋಡೋಟಸ್ ಉಲ್ಲೇಖಿತ ಇರುವೆ ಸಿಂಹದ ವೃತ್ತಾಂತ ಹುರುಳಿಲ್ಲದ ಬರೀ ದಂತಕತೆಯೇ ? ಇರುವೆ ಸಿಂಹ ಎಂಬ ಹೆರೋಡೋಟಸ್ ಉಲ್ಲೇಖಿತ ಪ್ರಾಣಿ ನಿಜವಾಗಿ





ಅಸ್ತಿತ್ವದಲ್ಲಿದೆಯೇ ಅಥವಾ ಅದೊಂದು ಕಾಲ್ಪನಿಕ ಸೃಷ್ಟಿಯೇ ? ಇರುವೆ ಸಿಂಹದ ಐತಿಹ್ಯದಲ್ಲಿ ಕೆಲವಾದರೂ ಸತ್ಯದ ಎಳೆಗಳಿರಬಹುದೇ ? ಇಂತಹ ಹಲವಾರು ಪ್ರಶ್ನೆಗಳು ಚರಿತ್ರಕಾರರನ್ನು ಕಾಡುತ್ತಲೇ ಇದ್ದವು.

ಎರಡೂವರೆ ಸಾವಿರ ವರ್ಷ ಮಾನವನನ್ನು ನಿರಂತರವಾಗಿ ಕಾಡಿದ ಕುತೂಹಲವನ್ನು ಕಡೆಗೂ ತಣಿಸಿದ್ದು ಫ್ರೆಂಚ್ ಮಾನವಶಾಸ್ತ್ರಜ್ಞ ಮಿಚೆಲ್ ಪೈಸೆಲ್. ಎಂಬತ್ತರ ದಶಕದಲ್ಲಿ ಹಿಮಾಲಯದ ಪ್ರಾಚೀನ ಬುಡಕಟ್ಟುಗಳ ಅಧ್ಯಯನಕ್ಕೆಂದು ಭಾರತಕ್ಕೆ ಬಂದ ಪೈಸೆಲ್ ಉತ್ತರ ಕಾಶ್ಮೀರದ ಡಸ್ಸಾರ್ ಎಂಬ ಸಿಂಧೂನದಿಯ ಪಕ್ಕದ ಶೀತ ಮರುಭೂಮಿಯಲ್ಲಿ ಇರುವೆ ಸಿಂಹದ ಮೂಲವನ್ನು ಹುಡುಕಿದ್ದಾರೆ. ಕಾಶ್ಮೀರ ಮತ್ತು ಪಾಕ್ ಆಕ್ರಮಿತ ಕಾಶ್ಮೀರದಲ್ಲಿ ಹರಡಿರುವ ಡಸ್ಸಾರ್ ಬಯಲಿನಲ್ಲಿ ಮಾರ್ಮಟ್‌ಗಳೆಂಬ ನೆಲದ ಅಳಿಲುಗಳು ವಾಸಿಸುತ್ತವೆ. ದಂಷ್ಟ್ರಕ ಜಾತಿಯ, ಬೆಕ್ಕಿನ ಗಾತ್ರದ, ಗುಂಪಿನಲ್ಲಿ ವಾಸಿಸುವ ಇವು ಹುಲ್ಲು, ಗೆಡ್ಡೆಗೆಣಸುಗಳನ್ನು ತಿನ್ನುವ ಶುದ್ಧ ಸಸ್ಯಾಹಾರಿಗಳು. ತಮ್ಮ ಹರಿತವಾದ ಹಲ್ಲು, ಉಗುರುಗಳನ್ನು ಆತ್ಮರಕ್ಷಣೆಗಾಗಿ ಮಾತ್ರ ಬಳಸುತ್ತವೆ. ನೆಲದಲ್ಲಿ ಎರಡು ಮೂರು ಅಡಿ ಆಳದಲ್ಲಿ ಬಿಲ ತೋಡಿ ಸುರಂಗಜಾಲಗಳನ್ನೇ ಇವು ನಿರ್ಮಿಸಿಕೊಂಡಿರುತ್ತವೆ. ಬಿಲ ತೋಡಿ ಹೊರಹಾಕಿದ ಡಸ್ಸಾರ್ ಬಯಲಿನ ಮಣ್ಣಿನಲ್ಲಿ ಚಿನ್ನದ ಅಂಶವಿರುವುದನ್ನು ಪೈಸೆಲ್ ಕಂಡುಹಿಡಿದಿದ್ದಾರೆ. ಡಸ್ಸಾರ್ ಬಯಲಿನಲ್ಲಿ ಭೂಕಂಪದಿಂದ ಭೂಪಲ್ಲಟ ಆದ ಕಡೆ ಚಿನ್ನದ ಅಂಶವಿರುವುದನ್ನು ಇವರು ಗಮನಿಸಿದ್ದಾರೆ. ಎಲ್ಲಕ್ಕಿಂತ ಮುಖ್ಯವಾಗಿ ಡಸ್ಸಾರ್ ಬಯಲಿನಲ್ಲಿ ವಾಸಿಸುವ ಪ್ರಾಚೀನ ಬುಡಕಟ್ಟು ಜನಾಂಗವಾದ 'ಮಿನಾರೋ'ಗಳು ಪರಂಪರಾನುಗತವಾಗಿ ಈ ಮಣ್ಣಿನಿಂದ ಚಿನ್ನವನ್ನು ಸಂಸ್ಕರಿಸುವುದನ್ನು ಪೈಸೆಲ್ ಕಂಡುಹಿಡಿದಿದ್ದಾರೆ. ಈ ಮಾರ್ಮಟ್ ಎಂಬ ನೆಲದ ಅಳಿಲುಗಳೇ ಹೆರೋಡೋಟಸ್ ಉಲ್ಲೇಖಿತ ಇರುವೆ ಸಿಂಹಗಳಿರಬಹುದೆಂದು ಪೈಸೆಲ್ ಅಭಿಪ್ರಾಯಪಟ್ಟಿದ್ದಾರೆ. ಈಗ ಮತ್ತೊಂದು ಪ್ರಶ್ನೆ ಉದ್ಭವಿಸುತ್ತದೆ. ಮಾರ್ಮಟ್‌ನಂತಹ ಪ್ರಾಣಿಯನ್ನು ಹೆರೋಡೋಟಸ್ ಇರುವೆ ಸಿಂಹಗಳೆಂದೇಕೆ ಕರೆದ ? ಇದಕ್ಕೂ ಉತ್ತರವಿದೆ. ಹೆರೋಡೋಟಸ್‌ನಿಗೆ ಚಿನ್ನ ಅಗೆದುಹಾಕುವ ಈ ಪ್ರಾಣಿಗಳ ಬಗೆಗೆ ತಿಳಿದದ್ದು ಪರ್ಶಿಯನ್ನರಿಂದ. ಪರ್ಶಿಯನ್ ಭಾಷೆಯಲ್ಲಿ ಮಾರ್ಮಟ್‌ಗಿರುವ ಹೆಸರಿನ ಅರ್ಥ 'ಪರ್ವತದ ಇರುವೆ'. ಬಹುಶಃ ಮಾರ್ಮಟ್‌ಗಳೂ ಇರುವೆಗಳಂತೆ ಬಿಲ ತೋಡಿ ವಾಸಿಸುವುದರಿಂದ ಪರ್ಶಿಯನ್ ಭಾಷೆಯಲ್ಲಿ ಈ ಹೆಸರು ಬಂದಿರಬೇಕು.

ಎ.ಸುಬ್ರಮಣ್ಯ
ಭಾರತೀಯ ಜೀವವಿಮಾ ನಿಗಮ, ಅರಸೀಕೆರೆ - ೫೭೩ ೧೦೩, ಹಾಸನ ಜಿಲ್ಲೆ

ರೈತರ ಪರಿಶ್ರಮ ಮತ್ತು ನಿಸ್ವಾರ್ಥ ಸೇವೆಯಿಂದ ಭಾರತವು ಹಸಿವಿನಿಂದ ಪಾರಾಗಿ ಆಹಾರ ಧಾನ್ಯಗಳ ಉತ್ಪಾದನೆಯಲ್ಲಿ ಸ್ವಾವಲಂಬಿಯಾಗಿರುವದು ಹೆಮ್ಮೆಯ ಸಂಗತಿಯಾಗಿದೆ. ರೈತರ ಬೀಡಾಗಿರುವ ಈ ದೇಶದಲ್ಲಿ ಒಕ್ಕಲುತನಕ್ಕೆ ಪ್ರಾಧಾನ್ಯತೆ ಮತ್ತು ಪ್ರಾಶಸ್ತ್ಯ ಕೊಡುವದೊಂದೇ ಸಮಗ್ರ ಅಭಿವೃದ್ಧಿಯ ಕೇಂದ್ರಬಿಂದುವಾಗಿದೆ. ಕೃಷಿ ವಲಯವನ್ನು ಮೂಲ ಮಾಡಿಕೊಂಡು ನಮ್ಮ ಇತರ ವಲಯಗಳನ್ನೂ ಬೆಳೆಸುವ ಅಗತ್ಯವಿದೆ. ಕೃಷಿಗೆ ಪೂರಕವಾಗಿರುವ ಔದ್ಯೋಗಿಕ ಮತ್ತು ವಾಣಿಜ್ಯ ಕ್ಷೇತ್ರಗಳನ್ನು ಸುಸಜ್ಜಿತಗೊಳಿಸಬೇಕಿದೆ. ಕೃಷಿಯನ್ನೇ ದೃಷ್ಟಿಯಲ್ಲಿಟ್ಟುಕೊಂಡು ನಮ್ಮ ಯೋಜನೆ, ಪ್ರಯೋಜನೆಗಳು ರೂಪಗೊಳ್ಳಬೇಕಿದೆ.



ಕೃಷಿ ಉತ್ಪನ್ನಗಳ ಮಾರುಕಟ್ಟೆ ನಮ್ಮ ದೇಶದಲ್ಲಿ ಸಮರ್ಪಕವಾಗಿ ಕಾರ್ಯ ನಿರ್ವಹಿಸದ ಕಾರಣ ರೈತರ ಬಾಳು ಗೋಳಾಗುತ್ತಿದೆ. ರೈತರಿಗೆ ಸಾಲ ನೀಡಿಕೆ ಸಕಾಲಿಕವಾಗಿ ಮತ್ತು ದುಸ್ತರ ಪರಿಸ್ಥಿತಿಯಿಂದ ಹೊರಬರಬೇಕಾದ ಸಮಯದಲ್ಲಿ ನಿರ್ವಹಣೆಯಾಗದ ಕಾರಣ ರೈತರು ಬಂಡವಾಳಶಾಹಿಗಳ ಕಪಿಮುಷ್ಟಿಯಿಂದ ಪಾರಾಗದ ಸ್ಥಿತಿ ಇದೆ. ಲೇವಾದೇವಿ ವ್ಯವಹಾರ ಮತ್ತು ಕುಡಿತ ರೈತರ ಬಾಳಿಗೆ ಸಾಕಷ್ಟು ಆತಂಕವನ್ನುಂಟು ಮಾಡಿವೆ. ರೈತರಿಗಾಗಿಯೇ ಕಾರ್ಯಗತವಾಗುತ್ತಿರುವ ಕಾರ್ಯಕ್ರಮ ಮತ್ತು ಯೋಜನೆಗಳು ಅರ್ಹರಿಗೆ ತಲುಪದೇ ಹೋಗಿವೆ. ಗ್ರಾಮ ಸಭೆಗಳಲ್ಲಿ ರೈತರ ಧ್ವನಿಗೆ ಮಾನ್ಯತೆ ದೊರೆಯಬೇಕಿದೆ. ರೈತರೊಂದಿಗೆ ಸರಿಯಾಗಿ ನಡೆದುಕೊಳ್ಳುವ ವ್ಯವಧಾನ ನಮ್ಮ ಎಲ್ಲ ಇತರ ವಲಯಗಳಲ್ಲಿ ಒಡಮೂಡುವ ಅಗತ್ಯ ಇಂದಿನದಾಗಿದೆ. ''ಬಿಸಿಲಿನ ದಗೆಯಲ್ಲಿ ಹಸಿದ ಹೊಟ್ಟೆಯಿಂದ ಅರೆಬೆತ್ತಲಾಗಿ ತನ್ನ ಚಿಕ್ಕ ನೆಲವನ್ನು ನೇಗಿಲಿನಿಂದ ಉಳುವ ರೈತನನ್ನು ಕಲ್ಪಿಸಿಕೊಂಡ... ನಿಮ್ಮ ಯಾವತ್ತು ಕೆಲಸವನ್ನು ಅವರ ಹಿತಾಸಕ್ತಿಗಾಗಿ ಕೈಕೊಳ್ಳಿ'' ಎಂದು ರಾಷ್ಟ್ರಪಿತ ಮಹಾತ್ಮಾ ಗಾಂಧೀಜಿ ಹೇಳಿದ್ದು ಇವತ್ತೂ ಪ್ರಸ್ತುತವಾಗಿದೆ. ರೈತರು ದೇಶದ ಜೀವನಾಡಿಗಳೆಂದು ಅರಿತು ಆರ್ಥಿಕ, ಸಾಮಾಜಿಕ, ಧಾರ್ಮಿಕ, ವೈಜ್ಞಾನಿಕ, ವೈದ್ಯಕೀಯ ವಲಯಗಳಲ್ಲಿ ಆಮೂಲಾಗ್ರವಾದ ಬದಲಾವಣೆ ತಂದುಕೊಳ್ಳಬೇಕಿದೆ. ಸೇವಾ ಸವಲತ್ತು, ಸಂವಿಧಾನ ನೀಡಿರುವ ಅಧಿಕಾರಗಳಲ್ಲಿ ರೈತರು ಸಮಪಾಲು ಪಡೆಯುವಂತಹ ಪರಿಸರ ನಿರ್ಮಾಣವಾಗಬೇಕಿದೆ. ಇಂದು ಪ್ರತಿಯೊಂದೂ 'ಹೈಟೆಕ್' ಎನ್ನಿಸಿಕೊಂಡು ರೈತರು, ಕೃಷಿ ಕಾರ್ಮಿಕರು, ಸೇವಾ ಸವಲತ್ತುಗಳಿಂದ ದೂರ ಇರುವಂತಹ ವ್ಯವಸ್ಥೆ ನಿರ್ಮಾಣಗೊಳ್ಳುತ್ತಿದೆ. ಇದಲ್ಲದೆ ಸಂಸ್ಕರಣೆ, ವಿಂಗಡಣೆಯ ಹೆಸರಿನಲ್ಲಿ ರೈತರು ಬೆಳೆದ ಬೆಳೆಗೆ ಸಿಗಬೇಕಾದ ದರ ಸಿಗದಂತೆಯೂ ಮಾಡಲಾಗುತ್ತಿದೆ. ದೇಶದ ಸುಮಾರು ಆರು ಲಕ್ಷ ಹಳ್ಳಿಗಳಲ್ಲಿ ೧೦೫ ದಶಲಕ್ಷ ರೈತ ಕುಟುಂಬಗಳು ಕೃಷಿ ಆಧಾರಿತ ಬದುಕನ್ನು ಸಾಗಿಸುತ್ತಿವೆ. ಇವರೆಲ್ಲರೂ ನಾನಾ ಧರ್ಮಕ್ಕೆ ಸೇರಿದವರಾಗಿದ್ದಾರೆ. ಇವರೆಲ್ಲರ ಹಿತರಕ್ಷಣೆ ಮಾಡಿದರೆ ಸಮಾನತೆಯ ಪರಿಕಲ್ಪನೆ ಸಾಕಾರಗೊಳ್ಳುವಲ್ಲಿ ಸಹಕಾರಿಯಾಗುತ್ತದೆ, ಈಗ ಭಾರತದ ತುಂಬ ಹರಡಿರುವ ಜಾತಿವಾದ, ಜಾತಿ ರಾಜಕಾರಣಕ್ಕೂ ಕಡಿವಾಣ ಹಾಕಿದಂತೆಯೂ ಆಗುತ್ತದೆ.

ಭಾರತದ ರೈತರು ಜಾಣರಾಗಬೇಕಿದೆ, ಸುಶಿಕ್ಷಿತರಾಗಿ ಜಪಾನಿನ ರೈತರಂತೆ ಕ್ಯಾಲೆಂಡರ್ ಇಟ್ಟುಕೊಂಡು ಕೃಷಿ ಚಟುವಟಿಕೆಗಳನ್ನು ಕೈಕೊಳ್ಳಬೇಕಿದೆ. ಯಾವಾಗ ಯಾವ ಬೆಳೆಯನ್ನು ಬೆಳೆಯಬೇಕು, ಬೆಳೆದ ಬೆಳೆಯನ್ನು ಸಂಸ್ಕರಿಸುವ ಮತ್ತು ವಿಂಗಡಣೆ ಮಾಡುವ ಪದ್ಧತಿಯನ್ನು ಅಳವಡಿಸಿಕೊಳ್ಳಬೇಕು, ಎಂಬುದರತ್ತ ರೈತರು ಗಮನಹರಿಸಬೇಕಿದೆ. ಪರಿಸರಸ್ನೇಹಿ ಕೃಷಿ ಪದ್ಧತಿಯನ್ನು ಅನುಸರಿಸುವ ಮೂಲಕ ರೈತರು ತಮ್ಮ ಆರೋಗ್ಯದೊಂದಿಗೆ ಭೂಮಿಯ ಆರೋಗ್ಯವನ್ನು ಕಾಪಾಡಿಕೊಳ್ಳಬೇಕು. ದುಂದುವೆಚ್ಚವನ್ನು ಮಾಡದಿರಬೇಕು.

# ಕೃಷಿ ವಲಯದ ವಿಸ್ತರಣೆಯಿಂದ 'ಗ್ರಾಮೀಣಾಭಿವೃದ್ಧಿ'



ಗ್ರಾಮೀಣ ಅಭಿವೃದ್ಧಿಯಲ್ಲಿ ಕೃಷಿ ವಲಯದ ಪಾತ್ರ ಪ್ರಮುಖವೆಂಬುದರಲ್ಲಿ ಎರಡು ಮಾತಿಲ್ಲ. ರೈತರು ಇಂದು ತಮ್ಮ ಮೂಲ ಕೃಷಿಯೊಂದಿಗೆ ಜೇನುಸಾಕಣೆ, ಪಶುಪಾಲನೆ, ಹಾಲು ಸಂಸ್ಕರಣೆ, ಕೃಷಿ ಉತ್ಪನ್ನಗಳ ವಿಂಗಡಣೆ, ಸಂಸ್ಕರಣೆಗೊಳಿಸಿದ ಕೃಷಿ ಉತ್ಪನ್ನ ಮಾರಾಟ, ಕೃಷಿಕರ ಸಂತೆ ಮುಂತಾದ ಹತ್ತು ಹಲವು ವಿಧಾಯಕ ಚಟುವಟಿಕೆಗಳಲ್ಲಿ ನಿರತರಾಗುವ, ಪರಿಣತರಾಗುವ ಅಗತ್ಯವಿದೆ. ಕೃಷಿ ಇಂದೊಂದು ವೈವಿಧ್ಯಮಯ ಉದ್ಯೋಗವಾಗಿದೆ. ಈ ಕೃಷಿಯನ್ನು ಲಾಭದಾಯಕ ಉದ್ಯೋಗವನ್ನಾಗಿಸುವ ನಿಟ್ಟಿನಲ್ಲಿ ನಮ್ಮೆಲ್ಲರ ಸಹಕಾರ ರೈತರಿಗೆ ಸಿಗಬೇಕು. ಕೃಷಿ ಉತ್ತಮ ಉದ್ಯೋಗವೆಂಬ ಪ್ರತೀತಿಯು ಇನ್ನಷ್ಟು ನಿಚ್ಚಳವಾಗಲು ಸಹಕಾರಿಯಾಗುವ ಕೃಷಿಯನ್ನು ರೂಪಿಸಬೇಕು. ಕೃಷಿ ಕೇವಲ ಗ್ರಾಮೀಣ ಅಭಿವೃದ್ಧಿಯ ತಳಪಾಯ ಅಷ್ಟೇ ಅಲ್ಲ, ಸಮಗ್ರ ಜನಾಂಗದ ಅಭಿವೃದ್ಧಿಯ ವಾಹಕವೆಂಬುದು ವಾಸ್ತವತೆಯೇ ಆಗಿದೆ.

ಡಾ|| ಸ. ರಾ. ಸುಳಕೂಡೆ

ನಮ್ಮ ದೇಶದಲ್ಲಿ ಕೃಷಿ ಉತ್ಪನ್ನಗಳ ಬೆಲೆಯನ್ನು ರೈತರು ನಿಗದಿಮಾಡುವಂತಹ ಸೂಕ್ತ ವ್ಯವಸ್ಥೆಯೊಂದು ನಿರ್ಮಾಣವಾಗಬೇಕಿದೆ. ರೈತರ ಉತ್ಪನ್ನಗಳಿಗೆ ಬೆಲೆ ನಿಗದಿಮಾಡುವ ಯಾವುದೇ ವೈಜ್ಞಾನಿಕ ವಿಧಾನ ಇನ್ನೂ ಒಡಮೂಡದ ಕಾರಣ ರೈತರು ಪ್ರತಿಸಲವೂ ಮೋಸ ಹೋಗುತ್ತಿದ್ದಾರೆ, ತಮ್ಮ ದುಡಿಮೆಗೆ ತಕ್ಕ ಪ್ರತಿಫಲ ಸಿಗದಂತಹ ಮತ್ತು ಕೃಷಿಗೆ ಹಾಕಿದ ಬಂಡವಾಳ ಬರದಂತಹ ಕಷ್ಟ ಪರಿಸ್ಥಿತಿಗೆ ಸಿಲುಕುತ್ತಿದ್ದಾರೆ. ಕೃಷಿಯನ್ನು ಇನ್ನಷ್ಟು ವಿಸ್ತರಿಸಿಕೊಳ್ಳಬೇಕೆಂದು ಬೆಳೆದ ಉಳ್ಳೇಗಡ್ಡಿ, ತೊಗರೆ, ಟೊಮೊಟೊ, ಕಬ್ಬು, ಸೊಯಾಬೀನ್ ಮುಂತಾದ ಬೆಳೆಗಳ ಬೆಲೆ ಕುಸಿತವು ರೈತರ ಬಾಳಿನಲ್ಲಿ ದೊಡ್ಡ ದುರಂತ ತಂದಿದೆ. ಕಬ್ಬುಬೆಳೆಯ ಬೆಲೆ ಯಾವ ಪ್ರದೇಶದಲ್ಲೂ ಬೆಳೆ ಆಧಾರಿತ ಮತ್ತು ದುಡಿಮೆ ಆಧಾರಿತವಾಗದಿರುವುದು ಮಾರುಕಟ್ಟೆಯ ಹಿಡಿತವನ್ನು ಸೂಚಿಸುತ್ತದೆ. ರಾಸಾಯನಿಕ ಗೊಬ್ಬರ, ಸುಧಾರಿತ ಬೀಜ ಮತ್ತು ಕ್ರಿಮಿನಾಶಕಗಳ ದರ ನಿಗದಿಯಲ್ಲಿ ಇರುವ ಬಿಗಿತನವು ಕೃಷಿ ಉತ್ಪನ್ನಗಳ ಮಾರಾಟ ಬೆಲೆ ನಿಗದಿಯಲ್ಲಿ ಏಕೆ ಇನ್ನೂ ಸುನಿಶ್ಚಿತಗೊಂಡಿಲ್ಲ ಎಂಬುದು ಚರ್ಚೆಯ ಸಂಗತಿಯಾಗಿದೆ. ಕೃಷಿ ವಿಸ್ತರಣೆಯೇ ಭಾರತದ ಉಸಿರಾಗಿರುವುದೆಂದು ಪದೇ ಪದೇ ಹೇಳಿದರೂ ಬೆಳೆಗಳಿಗೆ ಸೂಕ್ತ ಬೆಲೆ ನಿರ್ಧಾರ ಮಾಡಲಾಗದ ಈ ತೊಡಕಿನ ನಿವಾರಣೆಯಾಗಬೇಕಿದೆ. ಕೃಷಿ ವಿಸ್ತರಣೆಯ ಬಗ್ಗೆ ಡಾ|| ಆರ್. ದ್ವಾರಕೀನಾಥ ಹೇಳಿರುವ ಮುನ್ನೋಟದ ನಾಲ್ಕು ಅಂಶಗಳು ಇಂತಿವೆ :

೧. ನಮ್ಮ ಉತ್ಪಾದನಾ ಸಾಮರ್ಥ್ಯವನ್ನು ಇನ್ನೂ ಅಧಿಕಗೊಳಿಸಬೇಕಿದೆ. ಏಕೆಂದರೆ ನಮ್ಮ ಜನಸಂಖ್ಯೆ ಇನ್ನೂ ಬೆಳೆಯುತ್ತಿದೆ. ಮುಂದಿನ ಎರಡು ಮೂರು ದಶಕಗಳಲ್ಲಿ ಮತ್ತೊಮ್ಮೆ ಆಹಾರದ ಕೊರತೆಯು ಕಾಣಬಹುದೆಂಬ ಭೀತಿಯೂ ಇದೆ. ಇದಕ್ಕಾಗಿ, ನಾವು ನಮ್ಮ ಕೃಷಿಯಲ್ಲಿ ಉತ್ಪಾದನಾ ಸಾಮರ್ಥ್ಯವನ್ನು ಇನ್ನೂ ಹೆಚ್ಚು ಮಾಡಬೇಕಾಗುತ್ತದೆ.

೨. ಹೊಲ ಗದ್ದೆಗಳಲ್ಲಿರುವ ನೈಸರ್ಗಿಕ ಸಂಪನ್ಮೂಲಗಳನ್ನು ನಾವು ಬಹು ಎಚ್ಚರದಿಂದ ಸಂರಕ್ಷಿಸಿಕೊಳ್ಳುವುದಲ್ಲದೆ ಅವುಗಳ ಉತ್ಪಾದನಾ ಶಕ್ತಿಯನ್ನು ಹೆಚ್ಚಿಸಿಕೊಳ್ಳಬೇಕಾಗುತ್ತದೆ. ಹಸಿರು ಕ್ರಾಂತಿಯ ಕಾಲದಲ್ಲಿ ಮತ್ತು ಆನಂತರದಲ್ಲಿಯೂ ಕೃಷಿ ಅಭಿವೃದ್ಧಿಯಲ್ಲಿ ಬಹು ಪ್ರಮುಖವಾದ ಈ ವಿಚಾರಕ್ಕೆ ನಾವು ಗಮನವನ್ನೇ ಕೊಡಲಿಲ್ಲ. ಇದರಿಂದಾಗಿ ನಮ್ಮ ಮಣ್ಣಿನ ಸವಕಳಿಯು ಹೆಚ್ಚಾಗಿ ಭೂ ಜಲವು ಕಡಿಮೆಯಾಗಿ, ಭೂಮಿಯ ಸಾರ ಸಂಪತ್ತು ಕ್ಷೀಣವಾಗಿದೆ. ಆದುದರಿಂದ ಹಿಡುವಳಿಗಳಲ್ಲಿ ಉತ್ಪಾದನಾ ಸಾಮರ್ಥ್ಯ ಕುಗ್ಗುತ್ತಿದೆ. ಈ ಹಿನ್ನೆಲೆಯಲ್ಲಿ ಕೃಷಿ ಭೂಮಿಯು ನೈಸರ್ಗಿಕ ಸಂಪತ್ತು ಎಂದರೆ ಮಣ್ಣು, ನೀರು ಮತ್ತು ಜೀವ ವೈವಿಧ್ಯತೆಯ ಸಂವರ್ಧನೆಗಾಗಿ ನಾವು ಹೆಚ್ಚಿನ ಗಮನ ಕೊಡಗಬೇಕಾಗುತ್ತದೆ.

೩. ಉಷ್ಣವಲಯದ ಭಾಗವಾಗಿರುವ ನಮ್ಮಲ್ಲಿ ಕೃಷಿಯು ಸಮೃದ್ಧಿಯಾಗಿರಬೇಕಾದರೆ ಪರಿಸರದ ಪೋಷಣೆಯು ಬಹುಮುಖ್ಯವಾಗಿರುತ್ತದೆ. ಆದರೆ, ಈ ೪-೫ ದಶಕಗಳಲ್ಲಿ ಕೃಷಿಪೀಠರ ಭೂಮಿಯಲ್ಲಿ ನೈಸರ್ಗಿಕವಾಗಿದ್ದ ಗಿಡಗೆಂಟೆಗಳನ್ನು ನಾವು ನಿರ್ಮೂಲ ಮಾಡಿರುವುದರಿಂದ ಕೃಷಿಯ ಪರಿಸರವೇ ಹದಗೆಟ್ಟಿದೆ. ಕೃಷಿಯ ಪರಿಸರವು ಸಮರ್ಪಕವಾಗಿದ್ದಲ್ಲಿ ಕೃಷಿ ಉದ್ದಿಮೆಗೆ ಹಲವು ಅನುಕೂಲಗಳು ಆಗುತ್ತವೆ. ಕೃಷಿಗೆ ಬೇಕಾದ ಸಸ್ಯಾಧಾರ ಗೊಬ್ಬರವು ವಿಪುಲವಾಗಿ ದೊರಕುತ್ತದೆ, ಮಳೆಯ ನೀರಿನ ಸಂರಕ್ಷಣೆಯು ಉತ್ತಮವಾಗಿದ್ದು, ಮೇಲ್ಮೈ ನೀರು ಹಾಗೂ ಭೂಜಲವು ಅಧಿಕವಾಗಲು ಅನುಕೂಲವಾಗುತ್ತದೆ, ಬೆಳೆಗೆ ವಾತಾವರಣವು ಪೂರಕವಾಗುತ್ತದೆ. ಕೀಟ, ಪಕ್ಷಿ ಮತ್ತು ಇತರೆ ಜೈವಿಕ ಸಂಪರ್ಕವು ಪರಿಸರ ಹಾಗೂ ಬೆಳೆಗಳ ಮಧ್ಯೆ ಉತ್ತಮಗೊಂಡು ಬೆಳೆಗಳಿಗೆ ಅನುಕೂಲವಾಗುತ್ತದೆ.

೪. ಕೌಟುಂಬಿಕ ಆಧಾರವಾಗಿದ್ದ ಕೃಷಿಯು ಇಂದಿನ ಆಹಾರವನ್ನು ಒದಗಿಸುವದರ ಜೊತೆಗೆ ರೈತರಿಗೆ ವರಮಾನವನ್ನೂ ಒದಗಿಸಬೇಕಾಗುತ್ತದೆ. ಇದಕ್ಕಾಗಿ ರೈತರು ಇಂದಿನ ದಿನಗಳಲ್ಲಿ ಧಾನ್ಯಗಳನ್ನು ಮಾತ್ರ ಬೆಳೆಯದೆ, ವಾಣಿಜ್ಯ ಬೆಳೆಗಳನ್ನೂ ಬೆಳೆಯತೊಡಗಿದ್ದಾರೆ. ಆದರೆ, ಕೃಷಿಯು ಹೆಚ್ಚು ಹೆಚ್ಚಾಗಿ ಮಾರುಕಟ್ಟೆಯ ಕಡೆಗೆ ಮುಂದುವರಿದಾಗ ಮಾರುಕಟ್ಟೆಯ ಸ್ವರೂಪವನ್ನು ಆಳವಾಗಿ ಅರಿಯದ ರೈತರು ಅನೇಕ ವೇಳೆ ದುಃಸ್ಥಿತಿಗೆ ಒಳಗಾಗುತ್ತಾರೆ. ಆದುದರಿಂದ ಕೃಷಿಗೂ ಮಾರುಕಟ್ಟೆಗೂ ಒಂದು ಸಾಮರಸ್ಯವು ಬೆಳೆಯಬೇಕಾದರೆ ಕೃಷಿ ವ್ಯಾಪಾರ ನಿರ್ವಹಣೆಯ ಸಾಮರ್ಥ್ಯವನ್ನು ರೈತರಲ್ಲಿ ಬೆಳೆಸಬೇಕಾಗುತ್ತದೆ. ಇದೆಲ್ಲದುದರ ಅರ್ಥವೇನೆಂದರೆ, ಕೃಷಿ ವಿಸ್ತರಣಾ ಕಾರ್ಯವು ಇದುವರೆಗೆ ನಿರತವಾಗಿದ್ದ ಬೆಳೆಗಳನ್ನು ಮಾಡುವ ತಂತ್ರಜ್ಞಾನವನ್ನು ಒದಗಿಸುವ ಕಾರ್ಯ ಒಂದಕ್ಕೇ ಸೀಮಿತವಾಗದೆ ನೈಸರ್ಗಿಕ ಸಂಪನ್ಮೂಲ ಸಂವರ್ಧನೆಗೆ, ಕೃಷಿ ಪರಿಸರದ ಅಭಿವೃದ್ಧಿಗೆ ಮತ್ತು ಮಾರುಕಟ್ಟೆ ಜೊತೆ ವ್ಯವಹರಿಸಲು ರೈತ ಸಾಮರ್ಥ್ಯದ ಬಗ್ಗೆ ಹೆಚ್ಚು ಗಮನವನ್ನು ಹರಿಸಬೇಕಾಗುತ್ತದೆ.

ನಾನು ಬರೆಯಲು ಕುಂತಿರುವೆ
ಒಂದು ಕವನ
ಅದರ ವಿಷಯ ವಸ್ತು ಹುಡಗಿ ಯವ್ವನ
ಹುಡುಗಿ ಇರುತ್ತಿದ್ದಳು ಬರಿ ಮೌನ
ಇದರಿಂದ ಸಾಗಲಿಲ್ಲ ಮುಂದೆ
ನನ್ನ ಕವನ



ನಾಗರಾಜ ಆರ್. ಎಸ್.

೧೯೯೦ರಲ್ಲಿ ಭಾರತ ಸರಕಾರವು ನೇಮಿಸಿದ ಉನ್ನತಾಧಿಕಾರ ಸಮಿತಿಯು ತನ್ನ ವರದಿಯಲ್ಲಿ ಹೀಗೆ ಹೇಳಿದೆ : ''ಬಡತನ, ನಿರುದ್ಯೋಗ ಮತ್ತು ಅಸಮಾನತೆಗಳನ್ನು ಭಾರತದಲ್ಲಿ ಕಡಿಮೆಮಾಡಬೇಕಾದರೆ ಶೀಘ್ರವಾದ, ಖಚಿತವಾದ ಮತ್ತು ಬಹು ಪರಿಣಾಮಕಾರಿಯಾದ ಮಾರ್ಗವೆಂದರೆ, ಭಾರತದ ಕೃಷಿಯಲ್ಲಿನ ಪಡೆಯಲಾಗದಿರುವ ವಿಸ್ತಾರವಾದ ಸಾಮರ್ಥ್ಯವನ್ನು ಉಪಯೋಗಿಸುವುದು. ಮುಂದಿನ ಹದಿನೈದು ವರ್ಷದೊಳಗೆ ನಮ್ಮ ಕೃಷಿ ಉತ್ಪಾದನೆಯನ್ನು ದ್ವಿಗುಣಗೊಳಿಸಬೇಕು. ಈ ಗುರಿಯು ಸಕಲರ ಹಿತಚಿಂತನೆಯ ಗುರಿಯೇ ಆಗಿದೆ. ಜಗತ್ತಿನ ಬಹುತೇಕ ರಾಷ್ಟ್ರಗಳು ಆಹಾರ ಧಾನ್ಯಗಳ ಕೊರತೆಯಿಂದ ನಲುಗಿಹೋಗಿವೆ. ಈ ಸ್ಥಿತಿಯು ನಮಗೆ ಬಾರದೇ ಹೋಗಬೇಕೆಂದಾದರೆ ಕೃಷಿ ವಲಯದ ವಿಸ್ತರಣೆಯನ್ನು ಸದೃಢ ಮತ್ತು ಕೃಷಿ ಉತ್ಪನ್ನ ಬೆಳೆಯುವ ವೆಚ್ಚವನ್ನು ಗಮನದಲ್ಲಿಟ್ಟುಕೊಂಡು ಬೆಲೆ ನಿಗದಿಗೊಳಿಸುವ ಅಗತ್ಯವಿ...

ಭಾರತದ ರೈತ ಅತ್ಯಂತ ಸಂಯಮ ಮ... ಅಲ್ಪದರಲ್ಲಿಯೇ ತೃಪ್ತಿಪಟ್ಟುಕೊಳ್ಳುವ ಮನೋಧ... ಉಳ್ಳವನಾಗಿದ್ದಾನೆ, ತ್ಯಾಗ ಮತ್ತು ಸೇವೆಗಳಿಗೆ ಸ... ಸ್ಪಂದಿಸುವವನಾಗಿದ್ದಾನೆ. ಅವನಲ್ಲಿ ಮುಗ್ಧತೆ ಇ... ಜೊತೆಗೆ ಸಹಾಯ ಹಸ್ತ ಚಾಚುವ ಸುಬುದ್ಧಿ ಇದೆ. ಇ... ವಿಶಾಲ ಮನೋಭಾವದ ರೈತರಿಗೆ ಮೋಸ ವಂ... ಮಾಡಿ ಅವರ ಬಾಳನ್ನು ದುಃಖಕ್ಕೆ ಗುರಿಮಾಡುವ ... ಚಟುವಟಿಕೆಗಳನ್ನು ನಿಯಂತ್ರಣಕ್ಕೆ ತರುವುದು ತುರ್ತಿ... ಕೆಲಸವಾಗಿದೆ. ಇದು ಸುಸ್ಥಿರ ಕೃಷಿಗೆ ದಾರಿಮಾಡಿಕೊಡು... ಸುಲಭ ಮಾರ್ಗವಾಗಿದೆ.

ಭಾರತದ ಭವ್ಯ ಭವಿಷ್ಯತ್ತು ಕೃಷಿ ಕ್ಷೇತ್ರದಲ್ಲಿ... ಪ್ರಗತಿಯನ್ನೇ ಅವಲಂಬಿಸಿದೆ. ಕೃಷಿಕರನ್ನು ನಿರುದ್ಯೋ... ಗಳನ್ನಾಗಿ ಮಾಡುವುದೆಂದರೆ ಬದುಕನ್ನೇ ನಿರಾಕರಿಸು... ದೆಂದು ಹೇಳಬಹುದಾಗಿದೆ. ಭಾರತದ ಬದುಕು ಸುಖಮ... ವಾಗಲು, ಸಂತೃಪ್ತವಾಗಲು ಕೃಷಿ ಚಟುವಟಿಕೆಗಳು ಅತ್ಯಂ... ಹರ್ಷದಾಯಕ, ಫಲದಾಯಕ, ಸ್ಫೂರ್ತಿದಾಯ... ವಾಗುವುದು ಅನಿವಾರ್ಯ. ಈ ನಿಟ್ಟಿನಲ್ಲಿ ನಮ್ಮ ವ್ಯವಹಾ... ಮತ್ತು ವಿಜ್ಞಾನ, ಉದಾರೀಕರಣ ಮತ್ತು ಜಾಗತಿಕರಣ... ಆರ್ಥಿಕ ಮತ್ತು ಸಾಮಾಜೀಕರಣ, ರಾಜಕಾರಣ ಮತ... ಧಾರ್ಮಿಕತೆಗಳು ರೈತರ ಬಾಳಿಗೆ ಪೂರಕವಾಗುವಂತಾ... ಬೇಕು. ರೈತರ ಬಾಳಿಗೆ ನಾವು ಕೊಡುವ ಗಮನವು ಸಮ... ಅಭಿವೃದ್ಧಿಗೆ ಭದ್ರ ಬುನಾದಿ ಹಾಕುವ ಕ್ರಮವೇ ಆಗಿದೆ.

ಇಂದು ಗ್ರಾಮೀಣಾಭಿವೃದ್ಧಿಗೆ ಹೆಚ್ಚು ಗಮ... ನೀಡಲಾಗುತ್ತಿದೆ. ರಸ್ತೆ, ಕುಡಿಯುವ ನೀರು, ಉದ್ಯೋ... ಸೃಷ್ಟಿ, ನಿರುದ್ಯೋಗ ನಿವಾರಣೆ, ಮಹಿಳಾ ಸಬಲೀಕರಣ... ಮುಂತಾದ ಆದ್ಯತೆ ವಲಯಗಳ ಭರಾಟೆ ನಡೆದಿದೆ... ಸ್ವಚ್ಛತೆ ಮತ್ತು ನಿರ್ಮಲೀಕರಣಕ್ಕೂ, ಆರೋಗ್ಯ ಸೇವೆಗ... ವಿಸ್ತರಣಕ್ಕೂ ಮಹತ್ವ ನೀಡಲಾಗಿದೆ. ಈ ಎ... ಚಟುವಟಿಕೆಗಳು ರೈತರ ಮನೋಬಲವನ್ನು ಹೆಚ್ಚಿಸುವಷ್ಟು... ಪ್ರಾಮಾಣಿಕವಾಗಿ ನಿರ್ವಹಣೆಗೊಳ್ಳಬೇಕಿದೆ.

ಗ್ರಾಮೀಣ ಅಭಿವೃದ್ಧಿಯಲ್ಲಿ ಕೃಷಿ ವಲಯದ ಪಾತ್ರ... ಪ್ರಮುಖವೆಂಬುದರಲ್ಲಿ ಎರಡು ಮಾತಿಲ್ಲ. ರೈತರು ಇಂದು... ತಮ್ಮ ಮೂಲ ಕೃಷಿಯೊಂದಿಗೆ ಜೇನುಸಾಕಣೆ, ಪಶುಪಾಲನೆ... ಹಾಲು ಸಂಸ್ಕರಣೆ, ಕೃಷಿ ಉತ್ಪನ್ನಗಳ ವಿಂಗಡಣೆ, ಸಂಸ್ಕರಣ... ಗೊಳಿಸಿದ ಕೃಷಿ ಉತ್ಪನ್ನ ಮಾರಾಟ, ಕೃಷಿಕರ ಸಂತೆ... ಮುಂತಾದ ಹತ್ತು ಹಲವು ವಿಧಾಯಕ ಚಟುವಟಿಕೆಗಳಲ್ಲಿ... ನಿರತರಾಗುವ, ಪರಿಣತರಾಗುವ ಅಗತ್ಯವಿದೆ.

ಕೃಷಿ ಇಂದೊಂದು ವೈವಿಧ್ಯಮಯ... ಉದ್ಯೋಗವಾಗಿದೆ. ಈ ಕೃಷಿಯನ್ನು ಲಾಭದಾಯಕ... ಉದ್ಯೋಗವನ್ನಾಗಿಸುವ ನಿಟ್ಟಿನಲ್ಲಿ ನಮ್ಮೆಲ್ಲರ ಸಹಕಾ... ರೈತರಿಗೆ ಸಿಗಬೇಕು. ಕೃಷಿ ಉತ್ತಮ ಉದ್ಯೋಗವೆಂಬ... ಪ್ರತೀತಿಯು ಇನ್ನಷ್ಟು ನಿಚ್ಚಳವಾಗಲು ಸಹಕಾರಿಯಾಗು... ಕೃಷಿಯನ್ನು ರೂಪಿಸಬೇಕು. ಕೃಷಿ ಕೇವಲ ಗ್ರಾಮೀಣ... ಅಭಿವೃದ್ಧಿಯ ತಳಪಾಯ ಅಷ್ಟೇ ಅಲ್ಲ, ಸಮಗ್ರ ಜನಾಂಗದ... ಅಭಿವೃದ್ಧಿಯ ವಾಹಕವೆಂಬುದು ವಾಸ್ತವತೆಯೇ ಆಗಿದೆ.

**ಡಾ|| ಸ. ರಾ. ಸುಳಕೂಡೆ**
ತಾಲೂಕು ಯೋಜನಾಧಿಕಾರಿ, ತಾಲೂಕು ಪಂಚಾಯತ್
ಗೋಕಾಕ - ೫೯೧ ೩೦೭



ಚಿತ್ರ: ಎಸ್. ಶ್ರೀನಿವಾಸುಲು

ಡಿ. ಆರ್. ಚಂದ್ರ ಮೊಗಡಿ

# ಭಾರತದ ಪ್ರಾಚೀನಕಲೆ ಸಾಂಜಿ

ಮಾನವನ ಎಲ್ಲ ಕಲೆಗಳಿಗೂ ಅವನ ಸೌಂದರ್ಯಪ್ರಜ್ಞೆಯಷ್ಟೆ ಮೂಲವಾದ ಇತಿಹಾಸವಿದೆ. ಅವನನ್ನು ಸದಾ ಕಾಪಾಡುವ ದೈವವನ್ನು ಭಕ್ತಿಯಿಂದ ಆರಾಧಿಸುವ, ಆ ದೈವಕ್ಕೆ ನಮಿಸುವ ಎಲ್ಲ ಪರಿಗಳೂ ಸೌಂದರ್ಯದ ಭಾಗವೇ ಆಗಿ ಉಳಿದಿವೆ, ಬೆಳೆಯುತ್ತಿವೆ. ಭಾರತದ ಚಿತ್ರಕಲೆ, ಶಿಲ್ಪ, ಸಂಗೀತ, ಸಾಹಿತ್ಯ, ನಾಟ್ಯ ಇಂತಹ ಸಾಂಸ್ಕೃತಿಕ ಸೆಲೆಗಳಿಗೆ ಒಂದು ರೀತಿ ಮೂಲ, ಒಂದು ರೀತಿ ಪೂರಕವಾದ್ದು ಭಾರತದ ಪ್ರಾಚೀನ ಸಾಂಜಿಕಲೆ.

ನಮ್ಮನ್ನು ಕಾಪಾಡುತ್ತಿದೆ ಎನ್ನುವ ದೈವವನ್ನು ಭಕ್ತಿಯಿಂದ ಪೂಜಿಸುವಲ್ಲಿ ಮೊದಲು ಮಾನವ ರೂಪವಿಲ್ಲದೆ ಕಲ್ಲು, ಮಣ್ಣು, ಮರ ಮುಂತಾದವುಗಳಲ್ಲಿ ಸೃಷ್ಟಿಸಿಕೊಳ್ಳುತ್ತಾ ಅಥವಾ ಅವುಗಳಲ್ಲಿ ಸೌಂದರ್ಯವನ್ನು ಕಂಡು ಆನಂದಿಸುತ್ತಿದ್ದುದನ್ನು ಪ್ರಾಚೀನ ಮಾನವನಿಂದ ಈ ದಿನದವರೆಗೂ ಕಾಣಬಹುದು. ನಾವು ಆರಾಧಿಸುವ ದೈವವನ್ನು ನಿಯತವಾಗಿ ದಿನ, ವಾರ, ಮಾಸ, ವರ್ಷಗಳಲ್ಲಿ ಹಬ್ಬಹರಿದಿನಗಳನ್ನು ಆಚರಿಸಿ ನಾವು ಸಾಮೂಹಿಕ ಸಂತೋಷದಲ್ಲಿ ತೊಡಗುವುದು ಆದಿಯಿಂದಲೂ ಬಂದ ಪರಿ. ಇದರಲ್ಲಿ ಅಲಂಕಾರ ವೈಭವ ತೀರಾ ಮುಖ್ಯವಾದ್ದು. ಸೌಂದರ್ಯ ಸ್ಪರ್ಶವಿಲ್ಲದ ಯಾವುದೇ ಆಚರಣೆ ಶುಷ್ಕ ಆವರಣವನ್ನು ನಿರ್ಮಿಸುತ್ತದೆ. ಈ ಪರಿಕಲ್ಪನೆ ಆದಿಮಾನವರಿಗೂ ಇದ್ದುದರಿಂದ ತಮ್ಮ ದೈವವನ್ನು ರಂಗೋಲಿ ಪುಡಿ, ಸುಣ್ಣ, ಕೆಮ್ಮಣ್ಣು, ಗೇರು ರಸಗಳಲ್ಲದೆ ಬಣ್ಣ ಮಾಸದ ಮೂಲಿಕೆ ಎಲೆ ಹೂವು ಚಕ್ಕೆಗಳಿಂದ ತಯಾರಿಸಿಕೊಂಡ ಬಣ್ಣಗಳಲ್ಲದೆ ತಮ್ಮ ಸುತ್ತಲಿನ ಚಿತ್ರವಿಚಿತ್ರ ಹೂಗಳಿಂದ ಅಲಂಕರಿಸಿ ಆನಂದಿಸುತ್ತಿದ್ದುದು ಅಂದು ಮಾತ್ರವಲ್ಲ, ಇಂದೂ ವಿವಿಧ ಬಗೆಗಳಲ್ಲಿ ಅಲಂಕರಿಸುತ್ತಾರೆ.

ನಮ್ಮ ಮಹತ್ತು ಬೃಹತ್ತು ಅನ್ನುವ ಎಲ್ಲಾ ಕಲೆಗಳ ಸೃಷ್ಟಿಯ ಹಿಂದೆ ಮಾನವನ ಪೂರ್ವ ಪ್ರಯತ್ನಗಳನ್ನು ಕಾಣುತ್ತೇವೆ. ತೆಳು ಮೃದು ಪತ್ರ ಚರ್ಮಗಳನ್ನು ತಮಗೆ ಬೇಕಾದ ಹಾಗೆ ಮಡಿಸಿ ಅವುಗಳನ್ನು ಕಲಾತ್ಮಕವಾಗಿ ಕತ್ತರಿಸಿ ಮಡಿಕೆ ಬಿಡಿಸಿದರೆ ಸುಂದರ ಚಿತ್ರಗಳು ಕಾಣುತ್ತವೆ. ಅದು ಶಿಲ್ಪದ ಪೂರ್ವಮಾದರಿಗಳಲ್ಲಿ ಒಂದು. ಅದನ್ನು ಅಚ್ಚೆ ಮಾಡಿಕೊಂಡ ಕಲ್ಲಾ ಶಿಲೆಯ ಮೇಲೆ ಅಂಟಿಸಿ ಅದನ್ನು ಗುರುತು ಮಾಡಿಕೊಂಡು ನಂತರ ಶಿಲೆಯಲ್ಲಿ ಕಲೆಯನ್ನು ಅರಳಿಸುತ್ತಿದ್ದುದು ಅದರ ಮುಂದಿನ ಹಾವರಿ. ದೇವಾಲಯದ ಆಧಾರಸ್ತಂಭಗಳು, ಅವುಗಳ ಮೇಲೆ ಕೆತ್ತಿರುವ ನಾಗಬಂಧ, ಚಿತ್ತಾರವಾಗಿ ಅರಳಿದ ಹೂಗಳು, ನವರಂಗದ ಮೇಲೆ ಅರಳಿದ ಚಿತ್ರವಿಚಿತ್ರ ಬೃಹತ್ ಗಾತ್ರದ ಹೂವಿನ, ಇದನ್ನು ಸಿಂಗರಿಸಿರುವ ಪಟ್ಟಿಕೆಗಳೆಲ್ಲಾ ಚೂರೂ ವ್ಯತ್ಯಾಸವಾಗದ ಹಾಗೆ ಶಿಲೆಯಲ್ಲಿ ಬಿಡಿಸಿದ ಕಲೆಯ ಸೌಂದರ್ಯದ ಹಿಂದಿನ ಸೂಕ್ಷ್ಮ ಕೈಗಳ ಮಾದರಿ ಯೋಚನೆಗೆ ಹಚ್ಚುತ್ತವೆ. ಕತ್ತರಿ ಅಥವಾ ಚಾಣದಿಂದ ಕಲಾತ್ಮಕ ಕತ್ತರಿಕೆ, ಮಡಿಸುವಿಕೆ ಇವು ಮಿಲಿಯೂ ವ್ಯತ್ಯಾಸ ಕಾಣದ ಹಾಗೆ ಶಿಲ್ಪಕೆತ್ತನೆಗೆ ಬಳಸಿಕೊಂಡಿರುವ ಇದು ಕಿಟಕಿ, ಜಾಲಂಧ್ರ ಶಿಲೆಯಲ್ಲಿ ಗುರುತುಹಚ್ಚಿ ಮಾಡಿಕೊಂಡದ್ದನ್ನು ಕಾಣಬಹುದು.

ಸೂಕ್ತವಾದ ಪ್ರಾಣಿ ಚರ್ಮವನ್ನು ಕತ್ತರಿ, ಉಳಿಯಿಂದ ದೇವತೆಗಳ ಪಾತ್ರಕ್ಕೆ ಯೋಗ್ಯವಾಗಿ ಭಾರತದ ಪೌರಾಣಿಕ ಪ್ರಸಂಗಗಳನ್ನು 'ಬೊಂಬೆ ರಾಮರು' ಅನ್ನುವ ಒಂದು ವೃತ್ತಿ ರಂಗಭೂಮಿಯ ಕಲಾವಿದರು ಚರ್ಮದಲ್ಲಿ ತಯಾರಾದ ಪಾತ್ರಗಳಿಗೆ ಬಣ್ಣ ಹಚ್ಚಿ ಸಂಗೀತ, ಕುಣಿತ, ಹಾಡು ಮತ್ತು ಸೂಕ್ತ ಮಾತುಗಾರಿಕೆಗಳಿಂದ ರಸವತ್ತಾಗಿ ಮಾಡಿ ಜನರನ್ನು ರಂಜಿಸುತ್ತಿದ್ದ ಭಾರತದ ನಾಟಕೀಯ ವೃತ್ತಿ ರಂಗಕಲೆಯನ್ನು ಇಲ್ಲಿ ನೆನೆಯಬೇಕು.

ಉತ್ತರ ಪ್ರದೇಶದಲ್ಲಿ ರಂಗೋಲೆಯನ್ನು ಸಾಂಜಿ ಅನ್ನುತ್ತಾರೆ. ಸಾಂಜಿ ಅನ್ನುವುದರ ಮೂಲ ಅರ್ಥ ಅಲಂಕಾರ, ಸಿಂಗಾರ. ಇದೇ ವಿವರಣೆಯನ್ನು ಎಲ್ಲಾ ಭಾರತೀಯ ಭಾಷೆಗಳೂ ಕೊಡುತ್ತವೆ. ದೇವತೆಗಳ ತಾಯಿ ಅನ್ನುವ ಮತ್ತೊಂದು ಹೆಸರೂ ಸ್ಫುರಿಸುತ್ತದೆ. ದೇವತೆಗಳ ಹಾಗೂ ದೇವಕನ್ಯೆಯರ ಸೌಂದರ್ಯವನ್ನು ವಿವರಿಸುವುದಕ್ಕಾಗೇ ಇದು ಸೃಷ್ಟಿಯಾಗಿದೆ. ಇದು ದೇವಸ್ಥಾನ ಕಲೆ ಅನ್ನುವ ಮತ್ತೊಂದು ವಿವರವೂ ಸಿಗುತ್ತದೆ.

ಮಥುರೆ ಸಾಂಜಿಯ ತವರು. ಶ್ರೀಕೃಷ್ಣನ ಜನ್ಮಸ್ಥಳವೆಂದು ಭಾರತೀಯರು ಪೂಜಿಸುವ ಸ್ಥಳದಲ್ಲಿ ಸಾಂಜಿ ಕಲೆಯನ್ನು ಕೃಷ್ಣ ಪರಮಾತ್ಮನ ಲೀಲೆ, ಪವಾಡ, ಗೀತೋಪದೇಶ, ಹೆಚ್ಚಾಗಿ ರಾಧಾ ಮಾಧವರ ರಾಸಲೀಲೆ ಮುಂತಾದವುಗಳನ್ನು ತಮ್ಮ ಕಲ್ಪನೆಗೆ ಸಿಕ್ಕಿದಂತೆ ಚಿತ್ರಿಸುವ ನೂರಾರು ಕುಟುಂಬಗಳಿವೆ. ಈ ಕಲೆಗೆ ರಾಜ್ಯ, ರಾಷ್ಟ್ರಮಟ್ಟದ ಪ್ರಶಸ್ತಿಗಳನ್ನು ಪಡೆದ ಕಲಾವಿದರಿದ್ದಾರೆ.

ಅಶೋಕ ಚಕ್ರವರ್ತಿಯ ಕಾಲದಲ್ಲಿ ಅವನು ಬೌದ್ಧ ಧರ್ಮದ ಪ್ರಚಾರಕ್ಕಾಗಿ ಪ್ರಪಂಚದ ವಿವಿಧ ದೇಶಗಳಿಗೆ ಕಳುಹಿಸಿದ ಬೌದ್ಧ ಭಿಕ್ಷುಗಳು ಆಯುಧವಿಲ್ಲದೆ ತಮಗೆ ಎದುರಾಗುವ ವಿರೋಧ(ಧಿ)ಗಳನ್ನು ನಿಗ್ರಹಿಸಿಕೊಳ್ಳಲು ನಮ್ಮ ಮೂಲದ ಇವತ್ತು ಪ್ರಪಂಚ ಪ್ರಖ್ಯಾತಿ ಹೊಂದಿರುವ ಸಮರ ಕಲೆಗಳು, ತಮ್ಮಲ್ಲಿ ಅಂತರ್ಗತವಾಗಿದ್ದ ವೈದ್ಯಪದ್ಧತಿಗಳು ಹಾಗೂ ತಮಗೆ ಗೊತ್ತಿದ್ದ ಅಲಂಕಾರಿಕ ಕಲೆಯಾದ ಸಾಂಜಿ ಇವು ಪ್ರಪಂಚದ ಮೂಲೆ ಮೂಲೆಗಳಲ್ಲಿ ಅವರಿಗೆ ಅರಿವಿಲ್ಲದೆ ಪ್ರಚಾರವಾದವು. ಜೊತೆಗೆ ಇದು ತಮ್ಮಲ್ಲೇ ಹುಟ್ಟಿದ್ದೇನೋ ಅನ್ನುವಂತೆ ಆಯಾ ದೇಶದ ಹೆಸರುಗಳಲ್ಲೇ ಪ್ರಚಾರವಾದವು. ಹೀಗಾಗಿ ಸಾಂಜಿ ಪ್ರಪಂಚದ ವಿವಿಧ ಹೆಸರುಗಳಲ್ಲಿ ವಾಣಿಜ್ಯರೂಪ ತಳೆದು ಅಪೂರ್ವ ಕಲೆಯಾಗಿ ಪ್ರಚಾರದಲ್ಲಿದೆ.





ಚಿತ್ರ : ಎಸ್. ಎಫ್. ಹುಸೇನಿ

ಕಾಗದದ ಆವಿಷ್ಕಾರವಾದ ನಂತರ ಸಾಹಿತ್ಯ ಮತ್ತು ಚಿತ್ರಕಲೆಯಲ್ಲಿ ಒಂದು ಹೊಸ ಕ್ರಾಂತಿಯೇ ನಡೆಯಿತು. ವಿವಿಧ ರೀತಿಯ ಕಾಗದ ತಯಾರಿಕೆ ಅದರ ಮಡಿಕೆಯ ಮೇಲೆ ಕತ್ತರಿ ಆಡಿಸುತ್ತಾ ಒಳ್ಳೆಯ ಚಿತ್ರಗಳನ್ನು ಕತ್ತರಿಸಿ ನೆಲದ ಮೇಲೆ ಹರಡಿ ಅವುಗಳ ಮೇಲೆ ರಂಗೋಲಿ ಪುಡಿ, ಹೂಗಳನ್ನು ತುಂಬಿ ಕಾಗದ ತೆಗೆದಾಗ ಬಗೆಬಗೆಯ ಅಲಂಕಾರಿಕ ಚಿತ್ರಗಳು ಮೂಡುತ್ತಿದ್ದುದು ಗೊತ್ತಾಯಿತು. ನಂತರ ತಮಗೆ ಬೇಕಾದ ಹಾಗೆ ಕಾಗದದ ಅಚ್ಚುಗಳನ್ನು ತಯಾರಿಸಿಕೊಂಡು ಅದನ್ನು ಒಂದು ಪರಿಪೂರ್ಣವಾದ ಕಲೆಯಾಗಿಸುವಷ್ಟು ಪರಿಣತಿಯನ್ನು ನಮ್ಮ ಹಿಂದಿನವರು ಪಡೆದಿದ್ದರು. ಹೀಗಾಗಿ ಇದೊಂದು ಪ್ರತ್ಯೇಕ ಕಲೆಯಾಗಿ ಬೆಳೆಯಿತು.



ಚಿತ್ರ: ಡಿ. ಆರ್. ಚಂದ್ರ ಮಾಗಡಿ

ಮದುವೆಯ ಹರಿಣೆ ಮಡಕೆಗಳ ಶಾಸ್ತ್ರವಾಗಿ ಸುಣ್ಣ ಕೆಮ್ಮಣ್ಣುಗಳಲ್ಲಿ ಕಲಾತ್ಮಕ ಚಿತ್ರ ಬಿಡಿಸಲು ಕಾಗದ ಕತ್ತರಿಕೆಯಲ್ಲಿ ಬಳಸುವ ಚಿತ್ರಗಳು, ಕಾಗದದ ಅಚ್ಚುಗಳಲ್ಲಿ ಮಾಡಿಕೊಂಡ ಚಿತ್ರಗಳು ಗೋಡೆ, ನೆಲಗಳನ್ನು ಅಲಂಕರಿಸಿರುವುದನ್ನು ನಮ್ಮ ಜಾನಪದರಲ್ಲೇ ಕಾಣಬಹುದು. ಇದಕ್ಕೆ ಗೇರು ಬಣ್ಣವನ್ನು ಬಳಸಿ ಬೇಸಾಯ, ಪಶುಪಕ್ಷಿ, ಕೀಟ ಹೀಗೆ ವಿವಿಧ ಚಿತ್ರಗಳನ್ನು ಬರೆಯುತ್ತಿದ್ದರು. ಇದು ಒಂದು ಒತ್ತುಕಲೆಯಾಗಿ ಇಡೀ ಗ್ರಾಮದಲ್ಲಿ ಚಿತ್ರಿತವಾಗುತ್ತಿದ್ದುದನ್ನು ಕಾಣಬಹುದು. ಹೆಣ್ಣುಮಕ್ಕಳಿಗೆ ತವರು ಮನೆಯವರು ಕೊಡುವ ಬಾಗಿನವನ್ನು ಬಣ್ಣದ ಕಾಗದದಲ್ಲಿ, ಚಿತ್ರಿಸಿರುವ ಚಿತ್ತಾರದಲ್ಲಿ ಅಲಂಕರಿಸಿಕೊಡುವುದು, ಮದುವೆಯಲ್ಲಿ ಮನೆಬಾಗಿಲಿನಿಂದ ಮಂಟಪದವರೆಗೆ ವಿವಿಧ ಬಣ್ಣದ ಚಿತ್ರಗಳಿಂದ ಸಿಂಗರಿಸಿ ಪ್ರಸ್ತದ ಮನೆಯನ್ನೂ ಅಲಂಕರಿಸಲು ಗುತ್ತಿಗೆ ಹಿಡಿಯುವ ಕಾಗದ ಕಲಾವಿದರು ಇಂದೂ ಇದ್ದಾರೆ. ಈ ಸಂಸ್ಕೃತಿಯನ್ನು ಕರ್ನಾಟಕದ ಮದುವೆ, ಹಬ್ಬಗಳ ಸಂದರ್ಭದಲ್ಲಿ ಇಂದೂ ಕಾಣುತ್ತೇವೆ.

ಸಾಂಜಿಯಲ್ಲಿ ವಿವಿಧ ಪ್ರಯೋಗಗಳನ್ನು ಮಾಡಿ ಭಾರತೀಯ ಕಲೆಯನ್ನು ಇಂದು ಅಂತರರಾಷ್ಟ್ರೀಯ ಮಟ್ಟಕ್ಕೆ ಒಯ್ದ ಕಲಾಕಾರ ಪ್ರಭಾಲ್ ಪ್ರಮಾಣಿಕ್‌ರ ಕಲಾ ಪ್ರಾತ್ಯಕ್ಷಿಕೆಯನ್ನು ಬೆಳಗಿನಿಂದ ಸಂಜೆಯವರೆಗೆ ನೋಡಿದ್ದನ್ನು ಯಾವತ್ತೂ ಮರೆಯಲಾರೆ.

ಬೆಂಗಳೂರಿನ ಒಂದು ಶಾಲೆಯಲ್ಲಿ ಇಪ್ಪತ್ತೈದು ವರ್ಷಗಳ ಹಿಂದೆ ಬೇಸಿಗೆ ಶಿಬಿರದಲ್ಲಿ ನನ್ನ ಒಂದು ಕಾಗದ ಕಲೆಯ ಪ್ರದರ್ಶನ ಹಾಗೂ ಪ್ರಾತ್ಯಕ್ಷಿಕೆಯನ್ನು ಉದ್ಘಾಟಿಸಲು ಬಂದಿದ್ದ ಪ್ರಸಿದ್ಧ ಚಿತ್ರ ಕಲಾವಿದ ಆರ್. ಎಂ. ಹಡಪದ್ ಅವರು ಮಾತನಾಡುತ್ತಾ ''ನಾನು ಈ ಕಾಗದ ಕಲೆಯನ್ನು ಮೊದಲು ನೋಡಿದ್ದು ತಬಲ ತಿಮ್ಮಪ್ಪಯ್ಯನವರ ರಚನೆಗಳಲ್ಲಿ, ಅನಂತರ ನೋಡುತ್ತಿರುವುದು ನಿಮ್ಮದೇ. ಈ ಕಲೆಯನ್ನು ಚನ್ನಾಗಿ ವೃದ್ಧಿಸಿಕೊಳ್ಳಿ'' ಅಂದರು. ಈ ಹಿಂದೆ ಓದು ಗುರುತಿಗೆಂದು ಸುಂದರವಾಗಿ ಮಾಡಿ ನಾನು ಓದುವ ಪುಸ್ತಕಗಳಲ್ಲಿ ಇಡುತ್ತಿದ್ದದ್ದೂ ಒಂದು ಕಲೆ ಅನಿಸಿತು.

ಈ ಕಲೆಯ ಮೂಲ ನೆಲೆ ಅರಸುತ್ತಾ ಇಡೀ ಭಾರತವನ್ನು ಸುತ್ತಾಡಿದ ಕೋಲಾರದ ವಿ. ಎಸ್. ಎಸ್. ಶಾಸ್ತ್ರಿ, ತೊಂಭತ್ತು ವರ್ಷಗಳಾದರೂ ಇಂದಿಗೂ ಕಾಗದ ಕತ್ತರಿಗಳ ಒಡನಾಟದಿಂದ ಉತ್ತಮ ಚಿತ್ರ ತೆಗೆಯುತ್ತಿರುವ ಎಸ್. ಶ್ರೀನಿವಾಸುಲು, ಚಿಕ್ಕಪಂಯಪ್ಪನಲ್ಲಿ ಚಿತ್ರಕಲೆ ಮತ್ತು ಕಾಗದ ಕಲೆಯಲ್ಲಿ ಪರಿಣತಿ ಹೊಂದಿರುವ ಎಸ್. ಎಫ್. ಹುಸೇನಿ ಮುಂತಾದವರು ಕರ್ನಾಟಕದಲ್ಲಿ ಸಾಂಜಿ ಕಲೆಯ ಕೆಲವು ಪ್ರಮುಖರು. ಇವರಲ್ಲದೆ ಮಾಹಿತಿಗೆ ಸಿಕ್ಕದ ಹತ್ತಾರು ಪರಿಣತರು ಇರಬಹುದು. ಅವರೆಲ್ಲಾ ಒಂದು ಮೇಳ ಮಾಡಿದ್ರೇ ಆದರೆ ಈ ಕಲೆಯ ಉಳಿವಿಗೆ ಮಹತ್ವದ ಕೊಡುಗೆ ಕೊಟ್ಟಂತಾಗುತ್ತದೆ. ರಾಜ್ಯ, ರಾಷ್ಟ್ರೀಯ, ಅಂತರರಾಷ್ಟ್ರೀಯ ಮಟ್ಟದಲ್ಲಿ ಪ್ರದರ್ಶನ, ಪ್ರಾತ್ಯಕ್ಷಿಕೆ ವಿಚಾರಸಂಕಿರಣಗಳನ್ನು ಏರ್ಪಡಿಸುವುದರಿಂದ ಈ ಕಲೆಯ ಮಹತ್ವ ಗೊತ್ತಾಗುತ್ತದೆ.

ಮಥುರೆಯಲ್ಲಿ ಪಾರಂಪರಿಕ ಸ್ಥಿತಿ ಚೂರೂ ಅಕ್ಕಪಕ್ಕ ಸರಿಯದೆ ಶುದ್ಧ ಸಾಂಜಿಯನ್ನೇ ಮಾಡುತ್ತಿರುವ ಕಲಾವಿದರು ಇವತ್ತೂ ಪ್ರಪಂಚದ ಅತ್ಯುತ್ತಮ ಬೇಡಿಕೆ ಇರುವ ಕಲಾವಿದರು.

ಸಾಂಜಿ ಎಲ್ಲ ಜಾನಪದ ಪ್ರದರ್ಶನ ಕಲೆಗಳ ಹಾಗೆ ಕಾಲಕ್ಕೆ ತಕ್ಕಂತೆ ಮತ್ತು ತನ್ನ ಆಂತರಿಕ ಸಾಮರ್ಥ್ಯದಿಂದ ವಿವಿಧ ರೂಪ ತಳೆದಿದೆ, ತಳೆಯುತ್ತಿದೆ. ಆರಂಭದಲ್ಲಿ ಲಭ್ಯ ಒರಟು ಸಾಮಗ್ರಿಗಳಿಗೆ ಅನುಗುಣವಾಗಿ ಚಿತ್ತಾರಗಳು ರೂಪುಗೊಳ್ಳುತ್ತಿದ್ದರೆ ಇದು ಇವತ್ತಿನ ಬಗೆಬಗೆಯ ಬಣ್ಣದ ಕಾಗದ, ವಿವಿಧ ವಿನ್ಯಾಸಗಳಿಗೆ ಅನುಕೂಲವಾಗುವ ಕತ್ತರಿ, ಬ್ಲೇಡು, ಅಂತರರಾಷ್ಟ್ರೀಯ ಕಲಾ ಸಂಬಂಧಗಳು ಮುಂತಾದವುಗಳಿಂದ ವಾಣಿಜ್ಯರೂಪ ತಳೆದು ಚಿತ್ರ, ಅಕ್ಷರ, ಏಕರೂಪದ ಪ್ರಚಾರ ಸಾಮಗ್ರಿಗಳು ಇವು ಒಂದು ವಿಧವಾದರೆ ಗೃಹಾಲಂಕಾರವಾಗಿ ಗೋಡೆ, ಬಾಗಿಲು, ಕಿಟಕಿಗಳ ಪರದೆಗಳಲ್ಲಿ ತಮಗೆ ಇಷ್ಟವಾದ ಸೃಷ್ಟಿ ದೇವತೆ, ಅಕ್ಷರ ವಿನ್ಯಾಸಗಳು ದಿನದಿನಕ್ಕೆ ಆಶ್ಚರ್ಯವಾಗುವಂತೆ ನಾ
ಉಪಯೋಗಿಸುವ ಎಲ್ಲಾ ಜಾಗಗಳಲ್ಲಿ ಕಲಾತ್ಮಕವಾಗಿ ಬಳಕೆಯಾಗುತ್ತಿವೆ. ಸಾಂಜಿಯನ
ಸಮಕಾಲೀನ ಕಲೆಗೆ ಬಾಗಿಸಿಕೊಂಡ ಕಲಾವಿದರು ಆಶ್ಚರ್ಯ ಮೂಡಿಸುತ್ತಿದ್ದಾರೆ.


ಡಿ. ಆರ್. ಚಂದ್ರ ಮಾಗಡಿ
ಹೊಂಬಾಳಮ್ಮನ ಪೇಟೆ, ಮಾಗಡಿ, ರಾಮನಗರ ಜಿಲ್ಲೆ - ೫೬೨ ೧೨೦

मुहम्मद दाराशिकोह - विरचित

समुद्र संगम

संपादक तथा व्याख्याकार:
आचार्य बाबूलाल शुक्ल शास्त्री
उज्जयनी (म.प्र.)
भारतीय विद्या प्रकाशन
दिल्ली - वाराणसी
1995

# ಸೂಫಿಸಂತ ದಾರಾಶಿಖೋನ – ಸಮುದ್ರ ಸಂಗಮ

## (ಹಿಂದೂ-ಮುಸ್ಲಿಮರ ಹೃದಯ ಸಂಗಮ)

## (ಮಜಮಾ-ಉಲ್-ಬಹೆರೈನ್)

ಮೊಗಲರ ವಂಶ ಚರಿತ್ರೆಯಲ್ಲಿ ದಾರಾಶಿಖೋನ ಚರಿತ್ರೆ ವಿಭಿನ್ನ ಹಾಗೂ ವೈಶಿಷ್ಟ್ಯಪೂರ್ಣವಾದುದು. ದಾರಾಶಿಖೋ ಅಕ್ಬರ ಚಕ್ರವರ್ತಿಯ ಮರಿಮಗ, ಶಹಾಜಹಾನನ ಪುತ್ರ. ಇವನ ಜನನ ೧೬೧೫ರಲ್ಲಿ. ಶಹಾಜಹಾನನಿಗೆ ೪ ಹೆಣ್ಣುಮಕ್ಕಳ ನಂತರ ಅಜ್ಮೀರ್‌ನ ಸುಪ್ರಸಿದ್ಧ ಸಂತ ಮೊಹಿನುದ್ದೀನ್ ಚಿಶ್ತಿಯ ದರ್ಗಕ್ಕೆ ಪೂಜೆಸಲ್ಲಿಸಿದ ಪರಿಣಾಮವಾಗಿ ಜನಿಸಿದನೆಂಬುದು ಶಹಾಜಹಾನನ ನಂಬಿಕೆ. ದಾರಾಗೆ ಬಾಲ್ಯದಲ್ಲಿ ಉತ್ತಮ ಶಿಕ್ಷಣ, ಯುದ್ಧಕಲೆಯ ತರಬೇತಿ ದೊರೆಯುತ್ತವೆ. ಲಾಹೋರಿನ ಖಾದ್ರಿ ಪಂಥದ ಸೂಫಿ ಹಜ಼ರತ್ ಮಿಯಾಂಮೀರ್ ದಾರಾಶಿಖೋನ ಮೇಲೆ ವಿಶೇಷ ಪ್ರಭಾವ ಬೀರಿದ ಅಧ್ಯಾತ್ಮ ಗುರು. ಅವರು ಸರ್ವಧರ್ಮ ಸಮಭಾವದ ವಕ್ತಾರರಾಗಿದ್ದರು. ಅಲ್ಲದೆ ಇನ್ನೂ ಹಲವಾರು ಮುಸ್ಲಿಂ ಸೂಫಿ ಸಂತರು ಹಾಗೂ ಬಾಬಾ ಲಾಲ್‌ದಾಸ್ ಬೈರಾಗಿ, ಜಗನ್ನಾಥ ಮಿಶ್ರ ಮೊದಲಾದ ಹಿಂದೂ ಧಾರ್ಮಿಕ ಸಂತರ ಸಹವಾಸ, ಮಾರ್ಗದರ್ಶನದಿಂದ ದಾರಾಶಿಖೋ ಮುಸ್ಲಿಂ ಧರ್ಮದ ಅನುಯಾಯಿಯಾಗಿದ್ದರೂ, ಭಾರತೀಯ ಧಾರ್ಮಿಕ ಗ್ರಂಥಗಳನ್ನು ಆಸಕ್ತಿಯಿಂದ ಅಭ್ಯಾಸ ಮಾಡಿದ. ಚಿಕ್ಕವಯಸ್ಸಿನಲ್ಲಿಯೇ ಜ್ಞಾನಪಿಪಾಸುವಾಗಿ, 'ಪವಿತ್ರ ಕುರಾನ್' ಹಾಗೂ ಫಾರಸಿ ಭಾಷೆಯ ಕಾವ್ಯಗಳ ಅಧ್ಯಯನ ನಡೆಸಿದ. ಹಿಂದೂ ಪಂಡಿತರ ಸಹವಾಸದಲ್ಲಿದ್ದು, ಸಂಸ್ಕೃತದಲ್ಲಿ ಪಾರಂಗತನಾದ, ಸಾಧು-ಸಂತರ ಸಹವಾಸದಿಂದಾಗಿ ಅಕ್ಬರನ ಸರ್ವಧರ್ಮ ಸಹಿಷ್ಣುತೆಯ ಗುಣಗಳು ಇವನಲ್ಲಿ ಬೆಳೆದವು. ದಾರಾಶಿಖೋನ ಸಂಸ್ಕೃತ ಹಾಗೂ ಪರ್ಷಿಯಾ ಭಾಷೆಯ ಮೇಲಿನ ಪ್ರಭುತ್ವ ಹಾಗೂ ಬನಾರಸ್‌ನಲ್ಲಿ ಉದ್ದಾಮ ಸಂಸ್ಕೃತ ಪಂಡಿತರ ಸಹವಾಸದಿಂದ ಭಗವದ್ಗೀತೆ ಮತ್ತು ಯೋಗವಾಸಿಷ್ಠವನ್ನು ಪರ್ಷಿಯನ್ ಭಾಷೆಗೆ ಅನುವಾದಿಸಿದ; ಸುಮಾರು ೫೦ ಉಪನಿಷತ್ತುಗಳನ್ನು 'ಸಿರ್ ಈ ಅಕ್ಬರ್' ಎಂಬ ಹೆಸರಿನಲ್ಲಿ ಫಾರ್ಸಿ ಭಾಷೆಗೆ ಅನುವಾದಿಸಿದ.

ಸಂಸ್ಕೃತದಲ್ಲಿ ಪ್ರಕಾಂಡ ಪಾಂಡಿತ್ಯ ಹೊಂದಿದ್ದ ದಾರಾಶಿಖೋ ಸಂಸ್ಕೃತದಲ್ಲಿ 'ಸಮುದ್ರ ಸಂಗಮ' ಕೃತಿಯನ್ನು ರಚಿಸಿದ. ಈ ಕೃತಿ ಸಂಸ್ಕೃತ ಭಾಷೆಯಲ್ಲಿ ಅನನ್ಯ ಕೃತಿಯಾಗಿದೆ. ಭಾರತೀಯ ತತ್ತ್ವಶಾಸ್ತ್ರ ಹಾಗೂ ಇಸ್ಲಾಂ ಧರ್ಮದ ತತ್ತ್ವಗಳ ತೌಲನಿಕ ಅಧ್ಯಯನದೊಂದಿಗೆ ಹಿಂದೂ-ಮುಸ್ಲಿಂ ಧರ್ಮಗಳ ಸಮಭಾವದ ಪ್ರತಿಪಾದನೆ ಈ ಕೃತಿಯಲ್ಲಿದೆ. ಮಧ್ಯಯುಗದ ಭಾರತದಲ್ಲಿ ಹಿಂದೂ-ಮುಸ್ಲಿಂ ಭಾವೈಕ್ಯತೆಯ ಸಂಸ್ಕೃತಿಯನ್ನು ಈ ಕೃತಿಯ ಮೂಲಕ ಎತ್ತಿ ತೋರಿಸಿದ್ದಾನೆ.

ಹಿಂದೂ-ಮುಸ್ಲಿಂ ಸಂಸ್ಕೃತಿಯ ವೈವಿಧ್ಯತೆಗಳ ನಡುವಿನ ಸಾಮ್ಯತೆ ಇರುವ ಮೌಲ್ಯಗಳು ಈ ಕೃತಿಯಲ್ಲಿ ಮೂಡಿಬಂದಿವೆ. ಇವನ 'ತರೀಕತ್ ಉಲ್ ಹಕೀಕತ್', 'ರಿಸಾಲಾ-ಉಲ್-ಹಕ್‌ನಾಮಾ' ಇತ್ಯಾದಿ ಎಲ್ಲ ಕೃತಿಗಳಲ್ಲಿ ಪ್ರೇಮ, ಭಕ್ತಿ, ವೈರಾಗ್ಯ ಹಾಗೂ ಸತ್ಯದ ಅನ್ವೇಷಣೆ ಇದೆ ಎಂಬುದು ವಿದ್ವಾಂಸರ ಅಭಿಪ್ರಾಯವಾಗಿದೆ.

ದಾರಾಶಿಖೋನ ಆಧ್ಯಾತ್ಮಿಕ ಗ್ರಂಥಗಳಲ್ಲಿ ಅತಿ ಹೆಚ್ಚು ಮೆಚ್ಚುಗೆ ಪಡೆದಿರುವ ಕೃತಿ 'ಮಜ್ಮಾ-ಉಲ್-ಬಹೆರೈನ್' ಅಥವಾ 'ಸಮುದ್ರ ಸಂಗಮ'. ಈ ಗ್ರಂಥದಲ್ಲಿ ಹಿಂದೂ ಮತ್ತು ಮುಸ್ಲಿಂ ಧಾರ್ಮಿಕ ಹಾಗೂ ಆಧ್ಯಾತ್ಮಿಕ ವಿಚಾರಗಳ ಸಾಮ್ಯತೆಯನ್ನು ಗುರುತಿಸಲಾಗಿದೆ. ಎರಡು ಧರ್ಮಗಳ ಸತ್ಯದ ಅನ್ವೇಷಣೆ ಈ ಕೃತಿಯಲ್ಲಿದೆ. ಎರಡು ಧರ್ಮಗಳಲ್ಲಿ ಸಮನ್ವಯವನ್ನು ಕಾಣುವ ದಾರಾಶಿಖೋನ ಪ್ರಯತ್ನ ಮಧ್ಯಕಾಲೀನ ಭಾರತದ ಇತಿಹಾಸದ ಬಹುದೊಡ್ಡ ಕೊಡುಗೆ. ಹಿಂದೂಗಳು ಮಾಡದೇ ಇದ್ದ ಕೆಲಸವನ್ನು ದಾರಾ ಮಾಡಿದ; ಅವನ ಮೇರು ಕೃತಿ ಈ ಸಮುದ್ರ ಸಂಗಮ. ಭಾರತೀಯ ತತ್ತ್ವದಲ್ಲಿ ಇಸ್ಲಾಂಅನ್ನು ಗುರುತಿಸಿ, ಇಸ್ಲಾಂನಲ್ಲೂ ಭಾರತೀಯ ತತ್ತ್ವವನ್ನು ಗುರುತಿಸಿ, ಭಾರತೀಯ ಋಗ್ವೇದ ದರ್ಶನದ 'ಏಕಂ ಸತ್ ವಿಪ್ರಾ ಬಹುಧಾ ವದಂತಿ' ಎನ್ನುವ ಏಕದೇವೋಪಾಸನೆಯನ್ನು ಆರಿಸಿಕೊಳ್ಳುತ್ತಾನೆ ಮತ್ತು ಭಾರತೀಯರ ಪರಿಕಲ್ಪನೆಯಲ್ಲಿ ನಿರ್ಗಣವಾದವನ್ನು ಮೆಚ್ಚುತ್ತಾನೆ. ದೇವರನ್ನು ಸಾಕಾರ ರೂಪದಲ್ಲಿ ಪೂಜಿಸುವುದನ್ನು ವಿರೋಧಿಸುತ್ತಾನೆ. ಆದರೂ, ಬ್ರಹ್ಮವಿದ್ಯೆ-ಅದ್ವೈತ-ಇಸ್ಲಾಂಗಳ ನಡುವೆ ದಾರಾ ಕಂಡ ಸಮೀಕರಣ ಇತ್ತ ಪಂಡಿತರಿಗೂ ಅತ್ತ-ಉಲ್ಲೇಮಾಗಳಿಗೂ ಇಷ್ಟವಾಗಲಿಲ್ಲ ಎಂದು ತೋರುತ್ತದೆ. ಇಂತಹ ಅನುಭಾವಿ, ಸೂಫಿ ಸಂತನ ಜೀವನ ದುರಂತದಲ್ಲಿ ಕೊನೆಗೊಂಡಿತು. ಆತನಿಗಿಂತ ಮೂರು ವರ್ಷ ಕಿರಿಯನಾದ ಮತಾಂಧ ಔರಂಗಜೇಬನಿಗೆ ದಾರಾನ ಸಮನ್ವಯ ತತ್ವ ಕಂಡರೆ ಆಗುತ್ತಿರಲಿಲ್ಲ. ಚಕ್ರವರ್ತಿಯ ಸ್ಥಾನಕ್ಕೆ ತಂತ್ರ ರಚಿಸಿದ. ಧರ್ಮದ್ರೋಹಿ ಎಂದು ದೂರಿ ೧೬೫೮ ಸೆಪ್ಟೆಂಬರ್ ೧ರಂದು ಅವನನ್ನು ನಿರ್ದಯವಾಗಿ ಕೊಲೆ ಮಾಡಿಸಿದ.

**ಷಣ್ಮುಖಯ್ಯ ಅಕ್ಕೂರ ಮಠ**

ಹೀಗೆ ದಾರಾಶಿಖೋನ ಭೌತಿಕ ಕಾಯ ದುರಂತಮಯವಾಗಿ ಮರೆಯಾದರೂ, ಅವನ ಅಮರ ಕೃತಿಗಳಿಂದ ಅವನು ಸದಾ ನಮ್ಮ ನೆನಪಿನಲ್ಲಿ ಉಳಿದಿದ್ದಾನೆ. ಆತನ ವಿಚಾರಗಳು ಇಂದಿಗೂ ಪ್ರಸ್ತುತವಾಗಿವೆ.

ಭಾರತೀಯ ಉಪನಿಷದ್ದರ್ಶನ ಹಾಗೂ ಕುರಾನಿನ ಮೂಲ ದರ್ಶನ ಒಂದೇ ಎಂದು ಪ್ರತಿಪಾದಿಸಿದ ಅನುಭಾವಿ, ಎರಡು ಮಹಾ ಧರ್ಮಗಳಲ್ಲಿ ಸಮನ್ವಯವನ್ನು ಆಧಾರಬದ್ಧವಾಗಿ ಪ್ರತಿಪಾದಿಸಿದ ಈ ದಾರ್ಶನಿಕ. ಅದೇ ಅವನ ದುರಂತಮಯ ಸಾವಿಗೆ ಕಾರಣವಾಯಿತು. ''ದಾರಾ ದಾರ್ಶನಿಕ ಪರಿಕಲ್ಪನೆಗಳ ವ್ಯೂಹದಲ್ಲಿ ಸಿಕ್ಕು ಹತನಾದ ಅಭಿಮನ್ಯು'' ಎಂಬ ವಿಮರ್ಶಕರ ಮಾತು ವಾಸ್ತವಿಕವಾಗಿದೆ.

### ಸಮುದ್ರ ಸಂಗಮ : ಒಂದು ನೋಟ

ದಾರ್ಶನಿಕ ದಾರಾಶಿಖೋನ ಈ ಕೃತಿ ಸಂಸ್ಕೃತ ವಾಙ್ಮಯದಲ್ಲಿ ವಿಶಿಷ್ಟವಾದ್ದು. ಇದಕ್ಕೊಂದು ಐತಿಹಾಸಿಕ ಮಹತ್ವವಿದೆ. ಈ ಕೃತಿಯನ್ನು ಕುರಿತು ಗಂಭೀರವಾದ ಚರ್ಚೆ ನಡೆಯುತ್ತಿದೆ.

ಈ ಕೃತಿಯಲ್ಲಿ ೨೨ ಅಧ್ಯಾಯಗಳಿವೆ, ದರ್ಶನ ಶಾಸ್ತ್ರದಲ್ಲಿ ಚರ್ಚೆಗೆ ಒಳಗಾದ ವಿಚಾರಗಳಿವೆ. ಇದು ಹಿಂದೂ ಮತ್ತು ಮುಸ್ಲಿಂ ಧರ್ಮಗಳೆಂಬ ಸಮುದ್ರ ಸಂಗಮ ಅಷ್ಟೇ ಅಲ್ಲ, ಹಿಂದೂ-ಮುಸ್ಲಿಂ ಹೃದಯಗಳ ಸಂಗಮ, ಭಾವನಾತ್ಮಕ ಏಕತೆಯ ಪ್ರತೀಕ. ಈ ಗ್ರಂಥಕ್ಕೆ ಸಮುದ್ರ ಸಂಗಮವೆಂಬ ಹೆಸರು ಔಚಿತ್ಯಪೂರ್ಣವಾಗಿದೆ.

೧. ಮೊದಲನೆಯ ಭಾಗದಲ್ಲಿ ಸಂಗಮದ ಉದ್ದೇಶವನ್ನು ಈ ರೀತಿ ವಿವರಿಸಲಾಗಿದೆ: ಸತ್ಯದ ವ್ಯಾಖ್ಯೆಯನ್ನು ಮಾಡುವ ಯಾವುದೇ ದೇಶದ ನಾಸ್ತಿಕನಾಗಲಿ ಅವನನ್ನು ತಿಳಿಯಬಯಸುತ್ತೇನೆ. ಅವನ ವಿಚಾರ ಕೇಳುತ್ತೇನೆ. ಅದನ್ನು ಕುರಿತು ವಿಚಾರ ಮಾಡುತ್ತೇನೆ ಎಂದು ಹೇಳುವ ಮೂಲಕ ಸತ್ಯಶೋಧನೆಯ ಹಂಬಲವನ್ನು ವ್ಯಕ್ತಪಡಿಸುತ್ತಾನೆ.

ಗ್ರಂಥದ ಆದಿಯಲ್ಲಿ ಉಪಕ್ರಮ ಹೀಗಿದೆ :

*ಸರ್ವತ್ರ ಪ್ರಕಟಃ ಸಃ ಸರ್ವಾವಭಾಸಃ ಸಃ ಆದಿಃ*
*ಸೋಂತಸ್ತದತಿರಿಕ್ತಂ ವಸ್ತು ಅನ್ಯಾನ್ನಾಸ್ತೀತಿ*

ಎಲ್ಲೆಲ್ಲೂ ಇರುವ, ಎಲ್ಲೆಲ್ಲೂ ಪ್ರಕಾಶಿಸುವ, ಆದಿ, ಅನಂತನಾದ ಸೃಷ್ಟಿಕರ್ತ, ಇವನ ವಿನಾ ಯಾರೂ ಇಲ್ಲ ಎನ್ನುವ ಅರ್ಥದಲ್ಲಿ ಸೃಷ್ಟಿಕರ್ತನನ್ನು ಪ್ರಾರ್ಥಿಸುತ್ತಾನೆ.

೨. ಎರಡನೆಯ ಭಾಗದಲ್ಲಿ: ಭೌತ ತತ್ತ್ವಗಳ ವಿಚಾರವಿದೆ. ಭಾರತೀಯ ಪಂಚಭೂತಗಳ ಕಲ್ಪನೆಗೆ 'ಅನಾಸೀತ್' ಎನ್ನುತ್ತಾನೆ. ಚಿದಾಕಾಶವನ್ನು ನಿತ್ಯ ಹಾಗೂ ಆ ಜಿಸ್ಮ ಎನ್ನಲಾಗಿದೆ. ಚಿದಾಕಾಶದಲ್ಲಿ ಇಶ್ಕ್ ಎಂಬ ಪದಾರ್ಥ ಹುಟ್ಟಿತು. ಅದುವೇ ವೈದಿಕ ಋಷಿಗಳು ಕರೆಯುವ ಮಾಯೆ ಎಂದು ವ್ಯಾಖ್ಯಾನಿಸುತ್ತಾನೆ.

೩. ಮೂರನೆಯ ಭಾಗದಲ್ಲಿ: ಪಂಚೇಂದ್ರಿಯಗಳ ವಿಚಾರವಿದೆ. ಶಾಮ್ (ಘ್ರಾಣ), ಧಾಯಿಕ್ (ರಸನಾ), ಬಾಸಿರ್ (ಚಕ್ಷು), ಸಾಮಿಯ (ಶ್ರವಣ), ಲಾಯಿಸ್ (ತ್ವಕ್), ಹೀಗೆ ಹಿಂದೂಧರ್ಮದ ಪಂಚೇಂದ್ರಿಯಗಳ ವಿಚಾರ ಇಸ್ಲಾಂಧರ್ಮದಲ್ಲಿ ಇದೆ ಎನ್ನುತ್ತಾನೆ.

೪. ನಾಲ್ಕನೆಯ ಭಾಗದಲ್ಲಿ: ಧಾರ್ಮಿಕ ಅನುಷ್ಠಾನದ ವಿಶೇಷವಾಗಿ ಧ್ಯಾನದ ವಿಚಾರವಿದೆ. ಏಕದೇವೋಪಾಸಕರ ಪ್ರಕಾರ ಹಲವು ಧಾರ್ಮಿಕ ವಿಧಿ-ವಿಧಾನಗಳಿದ್ದರೂ 'ಅಜಪಾ' ಅನುಷ್ಠಾನ ಉತ್ತಮ. ಶ್ವಾಸವು ಒಳಗೆ ಹೋಗುವಾಗ 'ಹೂ' ಎಂದೂ, ಹೊರಗೆ ಬರುವಾಗ ಅಲ್ಲಾಹ್ ಎಂದೂ ಆಗುತ್ತದೆ. ಪ್ರತಿಯೊಂದು ಜೀವಿಯೂ ತನಗರಿವಿಲ್ಲದೆ ಈ ಪದಗಳನ್ನು ಉಚ್ಚರಿಸುತ್ತಾನೆ ಎಂದು ಪ್ರಾಣಾಯಾಮದ ವಿವರಣೆ ಇದೆ.

೫. ಐದನೆಯ ಭಾಗದಲ್ಲಿ: ಪರಮಾತ್ಮನ ಗುಣಗಳ ವಿವೇಚನೆ ಇದೆ. ಹಿಂದೂಗಳ ಬ್ರಹ್ಮ-ವಿಷ್ಣು-ಮಹೇಶ್ವರರ ಕಲ್ಪನೆಯಂತೆ ಇಸ್ಲಾಂನಲ್ಲೂ ಜೆಬಿರಾಯ್-ಮಿಕಾಯಿಲ್ ಹಾಗೂ ಇಸ್ರಾಫಿಲ್ ಇದ್ದಾರೆ. ಹಾಗೆಯೇ ಸತ್ವ-ರಜ-ತಮೋಗುಣಗಳ ಸೃಷ್ಟಿ, ಕಾಲಗತಿ ಸ್ಥಿತಿಯ ಕಲ್ಪನೆಗಳ ವಿವರಣೆ ಇದೆ.

೬. ಆರನೆಯ ಭಾಗದಲ್ಲಿ: ಆತ್ಮದ ಬಗ್ಗೆ ವಿವರಣೆ ಇದೆ. ಭಾರತೀಯ ಅಧ್ಯಾತ್ಮದಲ್ಲಿ ಆತ್ಮ-ಪರಮಾತ್ಮರ ಕಲ್ಪನೆ ಇದೆ. (ಅಬುಲ್-ಅರ್‌ವಾಹ್) ನೀರು ಅಲೆಗಳ ಸಂಬಂಧದಂತೆ-ದೇಹ- ಆತ್ಮಗಳ ಸಂಬಂಧವಿದೆ ಎನ್ನುವ ವಿಚಾರವಿದೆ.

೭. ಏಳನೆಯ ಭಾಗದಲ್ಲಿ: ಪ್ರಾಣತತ್ವದ ಬಗ್ಗೆ ವಿವೇಚನೆ ಇದೆ. ಮನುಷ್ಯನ ದೇಹದೊಳಗೆ ವಾಯು ಚಲಿಸುವಾಗ ಅದು ಐದು ಸ್ಥಲಗಳಲ್ಲಿ ನಿಲ್ಲುತ್ತದೆ. ಅದಕ್ಕೆ ಐದು ಹೆಸರುಗಳಿವೆ - ಪ್ರಾಣ, ಅಪಾನ, ಸಮಾನ, ಉದಾನ ಮತ್ತು ವ್ಯಾನ ಎನ್ನುವ ವಿಷಯದ ವಿವರಣೆ ಇದೆ.

೮. ಎಂಟನೆಯ ಭಾಗದಲ್ಲಿ: ನಾಲ್ಕು ಜಗತ್ತುಗಳ ವ್ಯಾಖ್ಯಾನ ಇದೆ. ಸೂಫಿಗಳ ಪ್ರಕಾರ ಜಗತ್ತುಗಳ ಸಂಖ್ಯೆ :

೧. ನಾಸೂತ - ಮನುಷ್ಯ ಜಗತ್ತು
೨. ಮಲಕೂತ - ಅದೃಶ್ಯ ಜಗತ್ತು
೩. ಜಬರೂತ್ - ಅತ್ಯುನ್ನತ ಜಗತ್ತು
೪. ಲಾಹೂತ್ - ದೈವಿಕ ಜಗತ್ತು

- ಎನ್ನುವ ಜಗತ್ತುಗಳ ವಿವರಣೆ ಇದೆ.

೯. ಒಂಬತ್ತನೆಯ ಭಾಗದಲ್ಲಿ: ಶಬ್ದದ ವ್ಯಾಖ್ಯಾನ - ಭಾರತೀಯ ಏಕವಾದಿಗಳ ಪ್ರಕಾರ 'ನಾದ' ಎಂದು ಕರೆಯುವ ಶಬ್ದ- ಮೊದಲು 'ಅನಾಹತ'. ಈ ಶಬ್ದವನ್ನು 'ಆವಾಜ್- ಇ-ಮೂತಲಕ್' ಪರಮಾತ್ಮನ ಶಬ್ದ ಎಂದು ಇಸ್ಲಾಂ ಧರ್ಮದಲ್ಲಿ ಕರೆಯುತ್ತಾರೆ ಎನ್ನುವ ವಿಶ್ಲೇಷಣೆ ಇದೆ.

೧೦. ಹತ್ತನೆಯ ಭಾಗದಲ್ಲಿ: ಬೆಳಕಿನ ಬಗ್ಗೆ ವ್ಯಾಖ್ಯಾನವಿದೆ. ನೂರ್ ಅಲ್ಲಾ ಯಾರನ್ನು ಮೆಚ್ಚುವನೋ ಅವನನ್ನು ಬೆಳಕಿನೆಡೆಗೆ ನಡೆಸುತ್ತಾನೆ (ತಮಸೋ ಮಾ ಜ್ಯೋತಿರ್ಗಮಯ). ಕೇವಲ ಪರಬ್ರಹ್ಮನ ಅಲ್ಲಾನ ಪ್ರಕಾಶ ಅದೇ ಶುದ್ಧ ಚೈತನ್ಯ ಸ್ವರೂಪ, ಅದ್ವೈತ ಎನ್ನುವ ವಿಷಯವಿದೆ.

೧೧. ಹನ್ನೊಂದನೆಯ ಭಾಗದಲ್ಲಿ: ಭಾರತೀಯರ ಏಕದೇವೋಪಾಸನೆ, ದೈವದರ್ಶನ, ಹಿ... ರೂಪರಹಿತ ನಿರಾಕಾರ ಸರ್ವವ್ಯಾಪಿ ಎನ್ನುವುದನ್ನು ... ಪಂಥದ ಉಲೇಮಗಳು ಸ್ಪಷ್ಟವಾಗಿ ಹೇಳಿದ್ದಾರೆ ಎ... ವಿಷಯವಿದೆ.

೧೨. ಹನ್ನೆರಡನೆಯ ಭಾಗದಲ್ಲಿ: ಇಸ್ಮ ಅ... ದೇವರ ಹೆಸರುಗಳು ಅನಂತ ಇದ್ದರೂ ಭಾರತೀ... ನಿರಂಜನ ನಿರಾಕಾರ ಎಂದು ಕರೆದರೆ ಮುಸಲ್ಮಾ... (ಅಲೀಮ್) ಅರಿವು 'ಅಲಹಕ್' ನಿತ್ಯ ಎನ್ನುತ್ತಾ... ಪರಿಪೂರ್ಣ (ಮಜಹರ್-ಇ-ಅತಮ್) ಅಲ್ಲಾಹನ... ಹಿಂದೂಗಳು ಓಂ ಎನ್ನುತ್ತಾರೆ ಎನ್ನುವ ವಿಚಾರವಿದೆ.

೧೩. ಹದಿಮೂರನೆಯ ಭಾಗದಲ್ಲಿ: ಸಗುಣ-ನಿರ್ಗು... ಹಾಗೂ ಸಗುಣ-ನಿರ್ಗುಣಯುಕ್ತ ಮೂರನೆಯ ಸ್ಥಿತಿ... ವಿವೇಚನೆ ಇದೆ. ಆತ ಒಬ್ಬನೇ. ಆತನ ಹಿಂದೆ-ಮುಂ... ಯಾರೂ ಇಲ್ಲ ಎನ್ನುವ ವಿಷಯವಿದೆ.

೧೪. ಹದಿನಾಲ್ಕನೆಯ ಭಾಗದಲ್ಲಿ: ದಿಕ್ಕುಗ... ಪರಿಕಲ್ಪನೆ ಇದೆ. ಬ್ರಹ್ಮಾಂಡದ ಕಲ್ಪನೆ ಭಗವಂ... ದುಂಡಾದ ಒಂದು ಗೋಲಾಕಾರದಲ್ಲಿ ವ್ಯಾಪಿಸಿರುವುದ... ಸೂಚಿಸುವ ಶಬ್ದ. ಭಾರತೀಯ ಏಕತಾವಾದಿಗಳು ಇದ... ಬ್ರಹ್ಮಾಂಡವೆಂದು ಹೆಸರು ನೀಡಿದ್ದಾರೆ ಎನ್ನು... ಸಮೀಕರಣವಿದೆ.

೧೫. ಹದಿನೈದನೆಯ ಭಾಗದಲ್ಲಿ: ದಿಕ್ಕುಗ... ವಿಚಾರವಿದೆ, ಮುಸಲ್ಮಾನ ಏಕದೇವವಾದಿಗ... ಪೂರ್ವ-ಪಶ್ಚಿಮ-ಉತ್ತರ-ದಕ್ಷಿಣ ಮೇಲ್ಭಾಗ-ಕೆಳಭಾ... ಇವು ಪ್ರತ್ಯೇಕ ದಿಕ್ಕುಗಳು. ಭಾರತೀಯರ ಪ್ರಕಾ... ದಶದಿಕ್ಕುಗಳು ದಶದಿಶಾ ಎಂದು ಕರೆಯುತ್ತಾರೆ ಎನ್ನು... ವಿಶ್ಲೇಷಣೆ ಇದೆ.

೧೬. ಹದಿನಾರನೆಯ ಭಾಗದಲ್ಲಿ: ಆಕಾಶದ ಬ... ವ್ಯಾಖ್ಯಾನವಿದೆ. ಭಾರತೀಯರ ಪ್ರಕಾರ ಆಕಾಶಗಳ ಸಂ... ೮. ಶನಿ-ಗುರು-ಕುಜ-ಸೂರ್ಯ-ಶುಕ್ರ-ಬುಧ ಮ...

(೫೪ನೇ ಪುಟಕ್ಕೆ)

## ಕತ್ತಲೆಯನೋಡಿಸುವುದಿಲ್ಲ

**ಕಾ**ರ್ಗತ್ತಲೆಯ ಇರುಳಲ್ಲಿ ನಕ್ಷತ್ರಗಳು ಕೋಟಿ ಕೋಟಿ
ಆಗಸದ ತುಂಬ ಅಸಹಾಯಕ; ಕತ್ತಲೆಯನೋಡಿಸುವುದಿಲ್ಲ

ಕಾರ್ತಿಕ ಅಮಾವಾಸ್ಯೆ ದೀಪದುತ್ಸವಗಳು ಲಕ್ಷ ಲಕ್ಷ
ಹಾದಿಯಲ್ಲಿ ಬೇ-ಸತ್ತು; ಬೀದಿ ಬೆಳಗುವುದಿಲ್ಲ

ಕರ್ತಾರನ ಕಮ್ಮಟದಲ್ಲಿ ಕಾವಿಧಾರಿಗಳು ಸಾವಿರಾರು
ಭ್ರಮೆಗೊಂಡ ಬಡವಿಯ ಭಯವನೋಡಿಸುವುದಿಲ್ಲ

ಸ್ವರ್ಗ ಮರ್ತ್ಯ ಪಾತಾಳ ದೇವಗಣ ಮುಕ್ಕೋಟಿ !
ಭಿತ್ತಿ ಚಿತ್ರಗಳು ಊರ ತುಂಬ; ಸಾವು ತಡೆಯುವುದಿಲ್ಲ

ಕರ್ಮಭೂಮಿಯ ಮೇಲೆ ಧರ್ಮಗಳು ಅಗಣಿತ
ಮೈಚರ್ಮ ನಂಬಿದವು; ಕುಲ-ಭೇದವನಳಿಸುವುದಿಲ್ಲ

ಕಾರ್ಗತ್ತಲೆಯ ಇರುಳಲ್ಲಿ ನಕ್ಷತ್ರಗಳು ಕೋಟಿ ಕೋಟಿ
ಆಗಸದ ತುಂಬ ಅಸಹಾಯಕ; ಕತ್ತಲೆಯನೋಡಿಸುವುದಿಲ್ಲ



ಮಹಾಂತಪ್ಪ ನಂದೂರ
ಮನೆ ಸಂಖ್ಯೆ : ೧೧, ಬಸವ ಆಸರೆ, ರಣಕಪುರ ಲೇಔಟ್, ಶಾಂತಿನಗರ
ಬೆಂಗೇರಿ ಬಡಾವಣೆ, ಹುಬ್ಬಳ್ಳಿ - ೫೮೦ ೦೨೩.

# ಹೈದ್ರಾಬಾದ್ ಕರ್ನಾಟಕ ಹೋರಾಟಗಾರರಿಗೆ ಆಶ್ರಯ ನೀಡಿದ ತಾಣ 'ಕಾಲಕಾಲೇಶ್ವರ ಕ್ಷೇತ್ರ'

ಡಾ|| ಮಲ್ಲಿಕಾರ್ಜುನ ಕುಂಬಾರ

'ಕಾಲಕಾಲೇಶ್ವರ' ಎಂದ ಕೂಡಲೇ ಅದೊಂದು ದಕ್ಷಿಣ ಕಾಶಿ ಎಂಬ ಖ್ಯಾತಿಯ ಪುಣ್ಯಕ್ಷೇತ್ರವೆಂದು ಎಲ್ಲರಿಗೂ ಗೊತ್ತು. ಆದರೆ ಸ್ವಾತಂತ್ರ್ಯ ಹೋರಾಟಗಾರರಿಗೆ ಈ ಪುಣ್ಯಕ್ಷೇತ್ರ ಆಶ್ರಯತಾಣವಾಗಿತ್ತೆಂದು ನೆನೆದರೆ, ಈ ಕ್ಷೇತ್ರದ ಬಗ್ಗೆ ಇನ್ನಷ್ಟು ಗೌರವ ಭಾವನೆ ಉಂಟಾಗುತ್ತದೆ. ಕಾಲಕಾಲೇಶ್ವರ ಕ್ಷೇತ್ರ ಕೇವಲ ನಂಬಿದ ಭಕ್ತರ ರಕ್ಷಕನಾಗದೆ ಹೈದ್ರಾಬಾದ ನಿಜಾಮನಿಂದ ನೊಂದ ಜನತೆಯನ್ನು ತನ್ನ ಒಡಲಲ್ಲಿಟ್ಟುಕೊಂಡು ಪೊರೆದಿದೆ. ಈ ಕ್ಷೇತ್ರ ಹೈದ್ರಾಬಾದ್ ಕರ್ನಾಟಕ ಪ್ರದೇಶಕ್ಕೆ ಸೇರಿರದಿದ್ದರೂ, ಹೋರಾಟಗಾರರಿಗೆ ಮಾತ್ರ ಸುರಕ್ಷಿತವಾದುದಾಗಿತ್ತು. ಈ ಹೋರಾಟಗಾರರ ಪ್ರಮುಖನಾದ ಭೀಮಜ್ಜನೆಂಬವನು ಇಲ್ಲಿ ನೆಲೆಸಿ, ಹೋರಾಟಗಾರರ ಗುರು-ಮಾರ್ಗದರ್ಶಕನಾಗಿ ಗವಿಯೊಂದರಲ್ಲಿ ನೆಲಸಿದ ಕಾರಣದಿಂದ ಈ ಸ್ಥಳ 'ಭೀಮಜ್ಜನ ಗವಿ' ಎಂದು ಹೆಸರು ಗಳಿಸಿ ಇಂದಿಗೂ ಖ್ಯಾತನಾಮವಾಗಿ ಉಳಿದಿದೆ.

ಗದಗ ಜಿಲ್ಲೆಯ ಗಜೇಂದ್ರಗಡ ಪಕ್ಕದ ಸ್ವಲ್ಪ ದೂರದಲ್ಲಿನ ಗುಡ್ಡದ ತಪ್ಪಲಿನಲ್ಲಿನ ಗಗನಾವತಿ ಗವಿಯಿಂದ ನಿಸರ್ಗ ನಿರ್ಮಿತವಾಗಿದೆ ಈ ಕಾಲಕಾಲೇಶ್ವರ ಕ್ಷೇತ್ರ. ಈ ಗುಡ್ಡ ರಮ್ಯ ಪರಿಸರದ ತಾಣವಾಗಿದೆ. ಅಲ್ಲಲ್ಲಿ ಕಡಿದಾದ ಸ್ಥಳಗಳಲ್ಲಿ ನಿಸರ್ಗ ನಿರ್ಮಿತವಾದ ಗುಹೆಗಳಿವೆ. ಯುದ್ಧ ವಾರ್ತೆ ರಮ್ಯವಾಗಿರುತ್ತದೆ ಎನ್ನುವ ನುಡಿಗಟ್ಟಿನಂತೆ ಹೈದ್ರಾಬಾದ್ ನಿಜಾಮರ ಆಳ್ವಿಕೆಯಲ್ಲಿದ್ದ ಕನ್ನಡ ಪ್ರದೇಶಗಳ ಜನರು ನಡೆಸಿದ ಹೋರಾಟ, ರಾಜ್ಯಶಾಹಿ ವಿರುದ್ಧದ ಪ್ರತಿಭಟನೆ, ಸಾಹಿತ್ಯ, ಧರ್ಮಗಳೇ ಅಲ್ಲದೆ ಒಟ್ಟಾರೆ ಸಂಸ್ಕೃತಿಯ ಮೇಲೆ ಜರುಗಿದ ಆಕ್ರಮಣದ ವಿರುದ್ಧ ಬಂಡೆದ್ದ ಬಗೆ, ಇಡೀ ಜನತೆ 'ರಜಾಕಾರ' ಎನ್ನುವ ಮತಾಂಧ ಸಂಘಟನೆಯನ್ನು ಬಗ್ಗುಬಡಿದು ನಡೆಸಿದ ಯುದ್ಧ, ಎಲ್ಲವೂ ರಕ್ತದಲ್ಲಿ ಅದ್ದಿ ಬರೆದ ಕೆಚ್ಚೆದೆಯ ಸಾಹಸಗಳ ವೀರಗಾಥೆ.

೧೯೪೭ ಆಗಸ್ಟ್ ೧೫ಕ್ಕೆ ಭಾರತಕ್ಕೆ ಸ್ವಾತಂತ್ರ್ಯ ಲಭಿಸಿತಾದರೂ ಈ ನಾಡಿನ ಹೈದ್ರಾಬಾದ್ ಪ್ರಾಂತವು ಮಾತ್ರ ಸ್ವತಂತ್ರವಾಗಿರಲಿಲ್ಲ. ಪಠಾಣ ಸೈನ್ಯದ ಮೂಲಕ ಕಾಸಿಂ ರಜ್ವಿ ಜನತೆಯ ಸ್ವಾತಂತ್ರ್ಯವನ್ನು ಹತ್ತಿಕ್ಕಿ, ತನ್ನದೇ ಆದ ಸ್ವತಂತ್ರ ರಾಜ್ಯ ಸ್ಥಾಪನೆಗೆ ಯತ್ನಿಸಿದ. ಈ ಸ್ಫೋಟಕ ಪರಿಸ್ಥಿತಿಯಲ್ಲಿ ಜನರ ಅಸಹಕಾರ ಆಂದೋಲನವು ಭೂಗತ ಚಟುವಟಿಕೆಯ ರೂಪ ತಾಳಿತು. ರಜಾಕಾರರ ಹಾವಳಿಗೆ ಹೆದರಿದ ಜನರು ಊರುಬಿಟ್ಟರು. ಹೈದ್ರಾಬಾದ್ ಕರ್ನಾಟಕ ಪ್ರದೇಶದ ಹೋರಾಟಗಾರರು ಅಲ್ಲಲ್ಲಿ ಭೂಗತರಾಗಿ ಜೀವನದ ಹಂಗು ತೊರೆದು ನಾಡ ರಕ್ಷಣೆಗಾಗಿ ಕಂಕಣಬದ್ಧರಾದರು. ಹೈದ್ರಾಬಾದ್ ಪ್ರಾಂತಕ್ಕೆ ಸೇರಿದ ಸಮೀಪದ ಸ್ಥಳಗಳಲ್ಲಿ ಈ ಹೋರಾಟಗಾರರು ಶಿಬಿರ ತೆರೆದು ಜನತೆಯಲ್ಲಿ ದೇಶಭಕ್ತಿ ತುಂಬಿದರು. ಈ ದೇಶಭಕ್ತರ ಪ್ರತಿಫಲದಿಂದ, ಅವರ ತ್ಯಾಗ ಬಲಿದಾನಗಳಿಂದ ಈ ಹೈದ್ರಾಬಾದ್ ಪ್ರದೇಶಕ್ಕೆ ೧೯೪೮ ಸೆಪ್ಟೆಂಬರ್ ೧೭ಕ್ಕೆ ಸ್ವಾತಂತ್ರ್ಯ ಸಿಕ್ಕು, ಅದು ಸ್ವತಂತ್ರ ಭಾರತದಲ್ಲಿ ವಿಲೀನಗೊಂಡದ್ದು ಈಗ ಇತಿಹಾಸ.

ಈ ಹೋರಾಟದ ಸಂದರ್ಭದಲ್ಲಿ ಗಡಿ ಭಾಗದಲ್ಲಿ ಸ್ವಾತಂತ್ರ್ಯ ಪಡೆದ ಪ್ರದೇಶಗಳಲ್ಲಿ ಈ ಪ್ರಾಂತದ ಜನರು ಅಲ್ಲಲ್ಲಿ ಶಿಬಿರಗಳನ್ನು ತೆರೆದರು. ಈ ಭಾಗದಲ್ಲಿ ಪ್ರಪ್ರಥಮವಾಗಿ ಸ್ಥಾಪನೆಯಾದ ಗಜೇಂದ್ರಗಡ ಶಿಬಿರದ ಜವಾಬ್ದಾರಿಯನ್ನು ಜಗನ್ನಾಥರಾವ್ ಕಾರಟಗಿ ಮತ್ತು ರಂಗಪ್ಪ ದೇಸಾಯಿಯವರಿಗೆ ವಹಿಸಲಾಗಿತ್ತು. ಆಗ ಪುಂಡಲೀಕಪ್ಪ, ವಿಜಯರಾವ್ ದೇಸಾಯಿ, ಬಿ. ವಿ. ದೇಸಾಯಿ, ಸವದಿ ಗುರಾಚಾರ್ ಇವರುಗಳು ಕಾರ್ಯಕರ್ತರಾಗಿದ್ದರು. ಈ ಶಿಬಿರಕ್ಕೆ ಆಗ ತಮ್ಮ ಜೀವನವನ್ನೆ ತ್ಯಾಗಮಾಡಿ ಸನ್ಯಾಸಿ ಜೀವನದ ಉಪಾಸಕರಾದ ಮುರಡಿ ಭೀಮಜ್ಜ ಪುಂಡಲೀಕಪ್ಪನನ್ನು ಶಿಬಿರಾಧಿಪತಿಯನ್ನಾಗಿ ಮಾಡಿದರು. ಇವರಿಗೆ ಮಾರ್ಗದರ್ಶಕರಾದ ಭೀಮಜ್ಜನು ಕಾಲಕಾಲೇಶ್ವರ ಗವಿಯಲ್ಲಿ ಅನುಷ್ಠಾನಮಾಡುತ್ತಾ ಶಿಬಿರಕ್ಕೆ ಧರ್ಮದರ್ಶಿಗಳು ಹಾಗೂ ಶಿಬಿರಾಧಿಪತಿಗಳಿಗೆ ದಿಕ್ಸೂಚಿಯಾಗಿದ್ದರು. ಕಾಲಕಾಲೇಶ್ವರ ಕ್ಷೇತ್ರದ ಪೂರ್ವದಿಕ್ಕಿನಲ್ಲಿ ಕಡಿದಾದ ಸ್ಥಳದಲ್ಲಿ ಯಾರಿಗೂ ಸರಳವಾಗಿ ಹೋಗಲು ಬಾರದ ಸ್ಥಳದಲ್ಲಿ ಗವಿಯೊಂದಿದೆ. ಅದು ತುಂಬಾ ದುರ್ಗಮವಾದ ಸ್ಥಳ. ಪ್ರಶಾಂತವಾದ, ಪ್ರಶಸ್ತವಾದ ಈ ಗವಿಯಲ್ಲಿ ನೀರಿನ ತಾಣವೊಂದಿದೆ. ಹೊರಗಿನಿಂದ ನೋಡಿದರೆ ಈ ಗವಿಯು ತಕ್ಷಣ ಕಾಣದು. ಭೀಮಜ್ಜನು ಹೈದ್ರಾಬಾದ್ ಕರ್ನಾಟಕ ಪ್ರದೇಶಕ್ಕೆ ಸ್ವಾತಂತ್ರ್ಯ ಸಿಗುವವರೆಗೆ ಈ ಸ್ಥಳದಲ್ಲಿ ನೆಲೆನಿಂತಿದ್ದರು. ಇಲ್ಲಿ ಆತ ವಾಸಿಸಲು ಕಾರಣವೇನೆಂದರೆ ಈ ಸ್ಥಳಕ್ಕೆ ರಜಾಕಾರರು ಬರಲಾರರೆಂದು ನಿರೀಕ್ಷಿಸಲಾಗಿತ್ತು. ಅಲ್ಲದೆ ಈ ಭಾಗದಲ್ಲಿ ಆಗಲೇ ಸ್ವಾತಂತ್ರ್ಯದ ಕಹಳೆ ಮೊಳಗಿದ, ಮತ್ತು ಸುರಕ್ಷಿತ ಸ್ಥಳ ಎಂಬ ಕಾರಣದಿಂದಾಗಿ ಈ ಸ್ಥಳದಲ್ಲಿ ಮುರಡಿ ಭೀಮಜ್ಜನು ವಾಸವಾಗಿದ್ದನು.

**ಯಾರು ಈ ಭೀಮಜ್ಜ?** ಅಂತಃಕರಣ, ಅರಳುವ ಮನಸ್ಸು, ಮಾಗುವ ಹೃದಯ ತುಂಬಿನಿಲ್ಲುವ ದೇಶಭಕ್ತಿಗೆ ಈ ಮುರಡಿ ಭೀಮಜ್ಜನವರದು ಮತ್ತೊಂದು ಹೆಸರು. ಅವರು ಹೋರಾಟಗಾರರ ಪ್ರೇರಕ



ಶಕ್ತಿಯಾಗಿದ್ದರು. ಸಮರ್ಥ ರಾಮದಾಸರು, ಶಿವಾಜಿ, ಭಗತ್ ಸಿಂಗರಂತೆ, ಈ ಭಾಗದಲ್ಲಿ ನಡೆದ ನಿಜಾಮನ ವಿರುದ್ಧ ಜರುಗಿದ ಮುಕ್ತಿಯ ಆಂದೋಲನಕ್ಕೆ ಇವರೇ ಗುರುಗಳಾಗಿದ್ದರು.

ಈ ಭೀಮಜ್ಜನವರು ಹೈದ್ರಾಬಾದ್ ಪ್ರಾಂತಕ್ಕೆ ಸೇರಿದ ಕೊಪ್ಪಳ ಪಕ್ಕದ ತಳಕಲ್ಲ ಗ್ರಾಮದ ರಾಮಚಂದ್ರ ದೇಸಾಯಿಯವರ ಪುತ್ರ. ೧೭-೭-೧೯೧೫ರಲ್ಲಿ ಜನಿಸಿದ ಇವರನ್ನು ಓದಲು ಹೈದ್ರಾಬಾದಿಗೆ ಕಳಿಸಿದರೆ, ವಂದೇ ಮಾತರಂ ಚಳುವಳಿಗೆ ಧುಮುಕಿ, ೧೯೪೨ರಲ್ಲಿ ಹಿಂಡಲಗಾ ಜೇಲು ಸೇರಿ, ಅಲ್ಲಿ ನಾಲ್ಕು ತಿಂಗಳು ಕಳೆದರು. ಮನೆಗೆ ಮರಳಿದರೂ ಪಿತ್ರಾರ್ಜಿತ ಆಸ್ತಿಯನ್ನು ತ್ಯಾಗಮಾಡಿ, ಋಷಿಜೀವನಕ್ಕಾಗಿ ಆಶ್ರಮ ಕಟ್ಟಿ ಅನ್ನ, ನೀರಿನ ಬಗ್ಗೆ ಸಂಯಮ ತೋರಿದರು. ಅವರ ಮಾತು ಮೌನವಾಯಿತು. ಆಗ ಅಮೃತ ಬಳ್ಳಿ ರಸ ಕುಡಿಯುತ್ತ ಹಾವನ್ನು ಸಂಗಾತಿಯನ್ನಾಗಿ ಮಾಡಿಕೊಂಡಿದ್ದರು. ದಲಿತಪ್ರೇಮ, ಸ್ವಾತಂತ್ರ್ಯದ ಸಖ್ಯ ಹಾಗೂ ಅಸ್ಪೃಶ್ಯತೆ ನಿವಾರಣೆಗಾಗಿ ಟೊಂಕ ಕಟ್ಟಿ ನಿಂತರು. ಇವರ ಗುರುಗಳಾದ ವೆಂಕೋಬರಾಯರು ಸನ್ಯಾಸ ಜೀವನವನ್ನು ಸ್ವೀಕರಿಸಿ, ಕಪ್ಪತ ಗುಡ್ಡದಲ್ಲಿ ಪವಾಡ ಸದೃಶ ರೀತಿಯಲ್ಲಿ ಬದುಕಿದ್ದರು. ಇಂತಹ ಮಹನೀಯರ ಶಿಷ್ಯರಾದ ಭೀಮಜ್ಜನು ಗಜೇಂದ್ರಗಡ, ಮಾಲಗತ್ತಿ, ಹನಮನಾಳ ಮತ್ತು ಇಲಕಲ್ಲ ಶಿಬಿರಗಳಿಗೆ ಗುರುಗಳಾಗಿದ್ದರು. ಈ ಸನ್ಯಾಸಿ ಹೃದಯದಲ್ಲಿ ಸ್ವಾತಂತ್ರ್ಯದ ಕಿಚ್ಚು ಹತ್ತಿ ಅದು ಹೈದ್ರಾಬಾದ್ ನಿಜಾಮನ ಅಧಿಕಾರ ದಾಹವನ್ನು ದಗ್ಧ ಮಾಡಿತು. ಇವರ ಪಟ್ಟ ಶಿಷ್ಯ ಪುಂಡಲೀಕಪ್ಪನವರಿಗೆ ಗಜೇಂದ್ರಗಡ ಶಿಬಿರದ ಪಟ್ಟ ಕಟ್ಟಿ ಅವರ ಬೆನ್ನ ಹಿಂದಿನ ಬೆಳಕಾಗಿದ್ದರು. ಇವರ ಬದುಕು ಗಜೇಂದ್ರಗಡ, ಕುಷ್ಟಗಿ, ಯಲಬುರ್ಗಿ ಪ್ರದೇಶಗಳಲ್ಲೇ ಕಳೆಯಿತು. ಸ್ವಾತಂತ್ರ್ಯ ಹೋರಾಟಗಾರರಿಗೆ ಮಾರ್ಗದರ್ಶನ ನೀಡಲು ಈ ಋಷಿಜೀವಿಗೆ ಪ್ರಶಸ್ತ ಸ್ಥಳ ಬೇಕಾಗಿತ್ತು. ಆಗ ಕಾಲಕಾಲೇಶ್ವರ ಕ್ಷೇತ್ರದ ಗವಿ ಅವರನ್ನು ಕೈಬೀಸಿ ಕರೆಯಿತು. ಅವರು ಇಲ್ಲಿನ ಹೈದ್ರಾಬಾದ್ ಕರ್ನಾಟಕ ಹೋರಾಟಗಾರರಿಗೆ ದಿಕ್ಸೂಚಿಯಾಗಿದ್ದರು. ಕೆಲವು ದಿನಗಳ ಕಾಲ ಈ ಗವಿ ಅವರಿಗೆ ಆಶ್ರಯ ನೀಡಿದ ಕಾರಣ ಅದನ್ನು ಇಂದಿಗೂ ಭೀಮಜ್ಜನ ಗವಿ ಎಂದೇ ಕರೆಯುತ್ತಾರೆ. ಮುಂದೆ ಅವರು ಕಂಡ ಕನಸು ನನಸಾಗಿ ಹೈದ್ರಾಬಾದನ್ನು ನಿಜಾಮನ ಕಪಿಮುಷ್ಟಿಯಿಂದ ಬಿಡಿಸಿ, ಸ್ವತಂತ್ರ ಭಾರತಕ್ಕೆ ಅದು ಸೇರಿದಾಗ, ಅವರಿಗಾದ ಸಂತಸ ಅಸದಳ. ೨೭-೭-೧೯೫೬ರಲ್ಲಿ ಇವರು ನಿಧನರಾದಾಗ ಈ ಭಾಗವೇ ದುಃಖದ ಕಡಲಿನಲ್ಲಿ ಮುಳುಗಿತ್ತು.

ಭಕ್ತಿ ತಾಣವಾದ ಕಾಲಕಾಲೇಶ್ವರ ಕ್ಷೇತ್ರ ಇಂತಹ ಪುಣ್ಯಜೀವಿಗಳಿಗೆ ಆಶ್ರಯತಾಣವಾಗಿತ್ತೆಂದು ನೆನೆದರೆ ನಿಜಕ್ಕೂ ಸಂತಸ ಉಕ್ಕುತ್ತದೆ. ಆದರೆ ಈ ವಿಷಯ ಬಹಳಷ್ಟು ಜನರಿಗೆ ಗೊತ್ತೇ ಇಲ್ಲ. ಈ ಭೀಮಜ್ಜ ಇದ್ದ ತಾಣ ಈಗ ಕೇವಲ ಕುರುಹಾಗಿ ಉಳಿದಿದೆ. ನಿಜಾಮನ ಸೈನಿಕರಿಗೆ ಕಾಣದಂತೆ ಕಟ್ಟಿದ ಗೋಡೆಗಳು ಇಂದು ಕುಸಿದಿವೆ. ಈಗ ಈ ಗವಿ ಬಾವುಲಿಗಳ ತಾಣವಾಗಿದೆ. ಗವಿಯಲ್ಲಿರುವ ನೀರಿನ ತಾಣಗಳು ಮಲಿನಗೊಂಡಿವೆ. ಅಂದು ಸ್ವಾತಂತ್ರ್ಯ ವೀರ ಸನ್ಯಾಸಿಗೆ ತನ್ನ ಮಡಿಲು ನೀಡಿದ ಈ ತಾಣ ಇಂದು ದುರವಸ್ಥೆಗೆ ಈಡಾಗಿದೆ. ಅದರ ಬಗ್ಗೆ ಕಾಳಜಿಯಾದರೂ ನಮಗೆ ಹೇಗೆ ಉಂಟಾದೀತು? ಏಕೆಂದರೆ ನಾವು ಸ್ವಾತಂತ್ರ್ಯಕ್ಕಾಗಿ ಹೋರಾಡಿದವರಲ್ಲವಲ್ಲ!

ಡಾ॥ ಮಲ್ಲಿಕಾರ್ಜುನ ಕುಂಬಾರ
'ವಚನ', ರಾಜೂರ - ೫೮೨ ೨೩೦, ರೋಣ ತಾಲ್ಲೂಕು, ಗದಗ ಜಿಲ್ಲೆ

*(೫೨ನೇ ಪುಟದಿಂದ)* **ಸೂಫಿಸಂತ ದಾರಾಶಿಖೋನ - ಸಮುದ್ರ ಸಂಗಮ**

ಚಂದ್ರ ಈ ಏಳು ಗ್ರಹಗಳು ನಿಂತಿರುವ ಸ್ಥಳಗಳು ಆಕಾಶವನ್ನು ೮ನೇ ಖಗೋಳ ಎಂದು ಕರೆಯುತ್ತಾರೆ. ಮಹಮ್ಮದೀಯರು ತಮ್ಮ ಪರಿಭಾಷೆಯಲ್ಲಿ ಕುರ್ಶಿ ಎನ್ನುತ್ತಾರೆ ಎನ್ನುವ ವಿವರಣೆ ಇದೆ.

೧೭. ಹದಿನೇಳನೆಯ ಭಾಗದಲ್ಲಿ: ಭೂಮಿಯ ಬಗ್ಗೆ ವ್ಯಾಖ್ಯಾನವಿದೆ. ಭಾರತೀಯರಲ್ಲಿ ಭೂಮಿಗೆ ಏಳು ಪದರುಗಳಿವೆ ಎನ್ನುವ ಕಲ್ಪನೆ ಇದೆ. ಅವು ಅತಲ, ವಿತಲ, ಸುತಲ, ತಲಾತಲ, ಮಹಾತಲ, ರಸಾತಲ ಮತ್ತು ಪಾತಾಲ ಎಂದೂ, ಮುಸಲ್ಮಾನರ ಪ್ರಕಾರ ಕೂಡ ಭೂಮಿಗೆ ಏಳು ಪದರುಗಳಿವೆ, ಏಳು ಭೂಮಿಗಳನ್ನು ಸೃಷ್ಟಿಸಿದವನು ಅಲ್ಲಾಹ್ ಎನ್ನುವ ವಿಷಯವಿದೆ.

೧೮. ಹದಿನೆಂಟನೆಯ ಭಾಗದಲ್ಲಿ: ಮೃತ್ಯುಲೋಕ, ಪ್ರೇತಲೋಕಗಳ (ಬರಜಸ್) ವಿಚಾರವಿದೆ. ಭಾರತೀಯರು ಖಗೋಳವನ್ನು ಏಳು ಭಾಗಗಳಾಗಿ ವಿಂಗಡಿಸುತ್ತಾರೆ. ಅವರು ಅದಕ್ಕೆ ಸಪ್ತದ್ವೀಪ ಎನ್ನುತ್ತಾರೆ. ಏಳು ಪರ್ವತಗಳು ಗೋಲವನ್ನು ಸುತ್ತುವರಿದಿವೆ. 'ಕುರಾನಿ'ನಲ್ಲಿ ಪರ್ವತಗಳು ಭೂಮಿಯ ಮೇಲೆ ಚಾಚಿಕೊಂಡಿವೆ ಎನ್ನುವ ವಿಶ್ಲೇಷಣೆ ಇದೆ. ಸಪ್ತ ಸಮುದ್ರದ ವಿಚಾರ ಕುರಾನಿನಲ್ಲಿ ಹೀಗಿದೆ : ''ಭೂಮಿಯ ಪ್ರತಿಯೊಂದು ಮರವೂ ಲೇಖನಿಯಾಗಿ ಸಮುದ್ರವು ಮಸಿಯ ಕುಡಿಕೆಯಾಗಿ ಅದನ್ನು ಸಮೃದ್ಧಗೊಳಿಸಲು ಏಳು ಸಮುದ್ರಗಳು ಸೇರಿದರೂ ಅಲ್ಲಾಹನ ನುಡಿಗಳು ಮುಗಿಯಲಾರವು ಎನ್ನುವ ಸುಂದರ ದೃಷ್ಟಾಂತದ ವಿವರಣೆ ಇದೆ.

೧೯. ಹತ್ತೊಂಬತ್ತನೆಯ ಭಾಗದಲ್ಲಿ: ಜನನ, ಮರಣಗಳ ವಿಚಾರ (ಬರ್-ಜಖ್) ಪ್ರವಾದಿ ಮಹಮ್ಮದರ ಪ್ರಕಾರ ಯಾರೇ ಸಾಯಲಿ, ಅವರಿಗೆ ಪುನರ್ಜನ್ಮವಿದೆ. ಸಾವಿನ ನಂತರ ಜೀವ ಮುಕ್ತನ ದೇಹವನ್ನು ಪ್ರವೇಶಿಸುತ್ತದೆ. ಒಳ್ಳೆಯ ನಡತೆಯಿಂದ ಒಳ್ಳೆಯ, ಕೆಟ್ಟನಡತೆಯಿಂದ ಕೆಟ್ಟ ಸ್ವರೂಪ ಪಡೆದುಕೊಳ್ಳುವ ಶರೀರ ಸತ್ತ ನಂತರ ಅಲ್ಲಾನ ಪ್ರಶ್ನೋತ್ತರಗಳ ನಂತರ ಸ್ವರ್ಗಕ್ಕೆ ಪಾತ್ರರಾದವರನ್ನು ಸ್ವರ್ಗಕ್ಕೆ, ನರಕಕ್ಕೆ ಪಾತ್ರರಾದವರನ್ನು ನರಕಕ್ಕೆ ಕರೆದೊಯ್ಯಲಾಗುತ್ತದೆ.

ಭಾರತೀಯರಲ್ಲೂ ಪುನರ್ಜನ್ಮದ ಕಲ್ಪನೆ ಇದೆ. ಸ್ವರ್ಗ-ವೈಕುಂಠಗಳ ಕಲ್ಪನೆ ಇದೆ. ಏಕದೇವೋಪಾಸಕರ ಅಭಿಪ್ರಾಯದಲ್ಲಿ ಅದು 'ಮುಕ್ತಿಯ ತಾಣ' ಎನ್ನುವ ವಿಚಾರಗಳ ವಿಸ್ತಾರವಾದ ವಿಶ್ಲೇಷಣೆ ಇದೆ.

೨೦. ಇಪ್ಪತ್ತನೆಯ ಭಾಗದಲ್ಲಿ: ಮುಕ್ತಿಯ ವಿಚಾರವಿದೆ. ಮಹಾಪುರುಷನನ್ನು ಕುರಿತಾದ ವರ್ಣನೆ ಇದೆ. ಇದು ಪುರುಷ ಸೂಕ್ತದ ವಿರಾಟ್ ಸ್ವರೂಪವನ್ನು ನೆನಪಿಗೆ ತರುತ್ತದೆ. ಜೀವನ್ಮುಕ್ತನ ಲಕ್ಷಣ ಹೀಗಿದೆ :

*ಯದ್ಯೈವೇಕೋ ಮಹಾಪುರುಷಃ*
*ಶುದ್ಧಾಂತಃಕರಣ ಜ್ಞಾನವಾನ್ ಸತ್ಯ ಸ್ವರೂಪಂ।*
*ಸರ್ವ ಬ್ರಹ್ಮಾಂಡಸ್ಯಾತ್ಮಾ ಸರ್ವ ಬ್ರಹ್ಮಾಂಡಂ*
*ಸತ್ಯ ಸ್ವರೂಪಸ್ಯ ಶರೀರಂ...*
*ಸಃ ಜೀವನ್ಮುಕ್ತಃ*

ಎಲ್ಲ ಬಗೆಯ ಬಂಧನಗಳಿಂದ ಬಿಡುಗಡೆ ಹೊಂದಿ ಭಗವಂತನಲ್ಲಿ (ಅಲ್ಲಾಹನು) ಸೇರುವುದು ಮುಕ್ತಿ ಎನ್ನುವ ವಿಚಾರ - ವಿವೇಚನೆ ಇದೆ.

೨೧. ಇಪ್ಪತ್ತೊಂದನೆಯ ಭಾಗದಲ್ಲಿ: ಬ್ರಹ್ಮನ ಅಹೋರಾತ್ರಿ (ಕಾಲ) ಹಾಗೂ ಗುಪ್ತ ವಿಚಾರದ ಚರ್ಚೆ ಇದೆ. ಭಾರತೀಯರ ಪ್ರಕಾರ ಹಗಲು ರಾತ್ರಿಗಳು ಬರುತ್ತವೆ, ಹೋಗುತ್ತವೆ. ಇದು ಅಂತ್ಯವಿಲ್ಲದ ಪ್ರಕ್ರಿಯೆ. ಕುರಾನಿನಲ್ಲೂ ಜಗತ್ತು ಆದಿ-ಅಂತ್ಯಯಿಲ್ಲದ್ದು. ಆದಿಯಲ್ಲಿ (ಅಲ್ಲಾಹ) ನಿನ್ನನ್ನು ಕರೆದು ತಂದ, ಹಾಗೆಯೇ ನೀನು ಹಿಂತಿರುಗುವೆ ಎನ್ನುವ ವಿಚಾರವಿದೆ.

ಹೀಗೆ ದಾರಾಶಿಖೋ ಭಾರತೀಯ ಉಪನಿಷದ್ದರ್ಶನ ಹಾಗೂ ಕುರಾನಿನ ಮೂಲದರ್ಶನ ಒಂದೇ ಎಂದು ಪ್ರತಿಪಾದಿಸಿದ ಅನುಭಾವಿ; ಎರಡೂ ಧರ್ಮಗಳಲ್ಲಿ ಸಮನ್ವಯವನ್ನು ಆಧಾರಬದ್ಧವಾಗಿ ಪ್ರತಿಪಾದಿಸಿದ್ದಾನೆ. ಹಿಂದೂ-ಮುಸ್ಲಿಂ ತತ್ವಗಳಲ್ಲಿಯ ಸಾಮ್ಯತೆಯನ್ನು ಪ್ರಾಂಜಲ ಮನಸ್ಸಿನಿಂದ ಪ್ರಾಮಾಣಿಕವಾಗಿ ಸಮೀಕರಿಸಿದ್ದಾನೆ.

ಗ್ರಂಥದ ಕೊನೆಯಲ್ಲಿ ದಾರಾಶಿಖೋ ಹೇಳುವ ಮಾತುಗಳು ಗಮನಾರ್ಹವಾದವುಗಳು:

ಹೇ! ಸುಹೃತ್ತಮ ಅಸ್ಮಿನ್ ನಿರೂಪಣೇಯತ್ ಲಿಖಿತಂ ಸೂಕ್ಷ್ಮ ದೃಷ್ಟ್ಯಾ ನಿಶ್ಚಿತಂ ತತ್‌ಸ್ವಾನುಭವಾನುಸಾರಿ... ಕುತ್ರಾಪಿ ಗ್ರಂಥ ನ ದೃಷ್ಟೋ ನ ವಾ ಶ್ರುತಃ ಕುತಶ್ಚಿತ್ ॥

ನನ್ನ ಸನ್ಮಿತ್ರನೆ, ಇಲ್ಲಿ ನಾನು ಬರೆದಿರುವ ವಿಚಾರವು, ನನ್ನ ಸೂಕ್ಷ್ಮ ದೃಷ್ಟಿಯಿಂದ ಆಳವಾದ ಚಿಂತನೆಯಿಂದ ನಿರ್ಣಯಿಸಿ ನಿರೂಪಿಸಿದ್ದೇನೆ. ಅನುಭವದ ಆಧಾರದ ಮೇಲೆ ಇದೆ. ಇದು ಯಾವುದೇ ಗ್ರಂಥಗಳಲ್ಲಿಲ್ಲ, ಎಲ್ಲಿಯೂ ಕೇಳಿ ಬರುವುದಿಲ್ಲ, ಎಂದು ಮತ್ತೆ ಹೇಳುತ್ತಾನೆ.

ಆರಾಧನಾ ಪರಮೇಶ್ವರಸ್ಯ ವಿಜ್ಞಾಪನಾ ಯಾ ಕೃತಾ ತಯಾ ಸಮುದ್ರ ಸಂಗಮ ಸಮಾಪ್ತೌ ಸಾಮರ್ಥ್ಯಂ ಪ್ರಾಪ್ತಂ। ಇತಿ ಮಹಮ್ಮದ್ ದಾರಾಶಿಖೋ ಪ್ರಣೀತಃ ಸಮುದ್ರ ಸಂಗಮ ನಾಮ ಗ್ರಂಥಃ ಪರಿಪೂರ್ಣತಾಮಗಾತ್।

ಪರಮಾತ್ಮನಿಗೆ ನಾನು ಸಲ್ಲಿಸಿದ ವಿಜ್ಞಾಪನೆಯ ಮತ್ತು ಆರಾಧನೆಯ ಫಲವಾಗಿ ಸಮುದ್ರ ಸಂಗಮವೆಂಬ ಈ ಕೃತಿಯನ್ನು ಪೂರ್ಣಗೊಳಿಸಲು ನನಗೆ ಶಕ್ತಿ ದೊರೆಯಿತು. ವೀತರಾಗ ದಾರಾಶಿಖೋನ ೪೨ನೆಯ ಪ್ರಾಯದಲ್ಲಿ ಹಿಜರಿ ೧೦೬೫ರಲ್ಲಿ ಈ ಗ್ರಂಥ ಪೂರ್ಣವಾಯಿತು ಎಂದು ಹೇಳುತ್ತಾನೆ.

ಷಣ್ಮುಖಯ್ಯ ಅಕ್ಕೂರ ಮಠ
ನಂ. ೬೭, 'ದೇವಗಂಗೋತ್ರಿ', ಶಂಕರಮಠ ರಸ್ತೆ, ಬೆಂಗಳೂರು - ೫೬೦ ೦೦೪

# ಸಾಮಾಜಿಕ ಪರಿವರ್ತನೆಯ ಹರಿಕಾರ




ಅವರು ಮಾಡಿದ ಕೆಲವು ಸುಧಾರಣೆಗಳೆಂದರೆ – ಪೇಶ್ವೆಗಳ ಕಾಲದ, ಪರಂಪರಾನುಗತವಾಗಿ ಬಂದಿದ್ದ – ಬ್ರಾಹ್ಮಣರಿಗೆ ದಕ್ಷಿಣೆ ನೀಡುವ ಪದ್ಧತಿ ವಿರೋಧಿಸಿ ಮರಾಠಿ ಭಾಷೆಯಲ್ಲಿನ ಉತ್ತಮ ಗ್ರಂಥಗಳಿಗೆ 'ದಕ್ಷಿಣೆ' ನೀಡಬೇಕೆಂಬುದನ್ನು ಜಾರಿಗೆ ತಂದರು. ಅಂದಿನ ಆಡಳಿತ ಅದನ್ನು ಸಮರ್ಥಿಸಿತು. ೧೮೬೩ರಲ್ಲಿ ವಿಧವೆಯರು ಪಡೆದ ಮಕ್ಕಳಿಗೆ ಅನಾಥಾಲಯವನ್ನು ಸ್ಥಾಪಿಸಿದರು. ವಿಧವಾ ಪುನರ್ವಿವಾಹವನ್ನು ಪ್ರೋತ್ಸಾಹಿಸಿ, ಸತಿ ಪದ್ಧತಿಯನ್ನು ವಿರೋಧಿಸಿದರು. ಬ್ರಾಹ್ಮಣ ವಿಧವೆಯರ ಕೇಶ ಮುಂಡನ ಪದ್ಧತಿಯನ್ನು ತಡೆಗಟ್ಟಿದರು. ಕೇಶ ಮುಂಡನ ಮಾಡುತ್ತಿದ್ದ ನಾಪಿತರನ್ನು ಸಂಘಟಿಸಿದರು. ತಮ್ಮ ಮನೆಯ ನೀರನ್ನು ಅಸ್ಪೃಶ್ಯರೆಲ್ಲರೂ ಉಪಯೋಗಿಸಲು ಅನುಮತಿ ಕೊಟ್ಟರು.

ಮಹಾತ್ಮಾ ಗಾಂಧಿ, ಡಾ|| ಅಂಬೇಡ್ಕರ್ ತಮ್ಮ ವಿಚಾರಗಳನ್ನು ಹರಡುವ ಮುಂಚಿನ ಕಾಲದಲ್ಲಿ ಸತ್ಯ-ಅಸತ್ಯ, ನ್ಯಾಯ-ಅನ್ಯಾಯಗಳನ್ನು ಪರಿಶೀಲಿಸಿ ನಿಷ್ಪಕ್ಷಪಾತವಾಗಿ ಹೇಳುವ ನೈತಿಕ ಸ್ಥೈರ್ಯವುಳ್ಳ ನಾಯಕರ ಕೊರತೆ ಇದ್ದಿತು. ಅಂಥ ಕೊರತೆಯನ್ನು ಅಂದಿನ ಪರಿಸ್ಥಿತಿಯಲ್ಲಿ ನೀಗಿಸಿದ ವ್ಯಕ್ತಿ ಮಹಾತ್ಮಾ ಜ್ಯೋತಿರಾವ್ ಫುಲೆ. ಡಾ|| ಅಂಬೇಡ್ಕರ್ ಮೂವರು ಗುರುಗಳನ್ನು ಗುರುತಿಸಿದ್ದರು. ಅವರೆಂದರೆ ಬುದ್ಧ, ಕಬೀರ ಮತ್ತು ಮಹಾತ್ಮಾ ಫುಲೆ.

ಜ್ಯೋತಿರಾವ್ ಅಥವಾ ಜ್ಯೋತಿಬಾ ಹುಟ್ಟಿದ್ದು ೧೮೨೭ರಲ್ಲಿ ಹಿಂದುಳಿದ ಮಾಳಿ ಜಾತಿಯ, ಪುಣೆಯ ಸಮೀಪದ ಒಂದು ಹಳ್ಳಿಯಲ್ಲಿದ್ದ ತರಕಾರಿಯನ್ನು ಬೆಳೆದು ಮಾರಾಟ ಮಾಡುತ್ತಿದ್ದ ಕುಟುಂಬವೊಂದರಲ್ಲಿ, ತಂದೆಯ ಹೆಸರು ಗೋವಿಂದ, ತಾಯಿಯ ಹೆಸರು ಚಿಮಣಾಬಾಯಿ. ತಾಯಿಯನ್ನು ಕಳೆದುಕೊಂಡ ಜ್ಯೋತಿರಾವ್ ತಂದೆಯ ಆಶ್ರಯದಲ್ಲಿ ಬೆಳೆದರು. ಜ್ಯೋತಿಬಾ ಏಳನೇ ವರ್ಷಕ್ಕೆ ಶಾಲೆಗೆ ಸೇರಿದರು. ಮೇಲ್ಜಾತಿಯವರಿಗೆ ಮಾತ್ರ ಪ್ರವೇಶವಿದ್ದ ಶಾಲೆಗೆ ಈ ಬಾಲಕನಿಗೆ ಪ್ರವೇಶ ದೊರಕಿದ್ದು ಸುಲಭದ ಮಾತಲ್ಲ. ಆದರೂ ಶಾಲೆಯಲ್ಲಿ ಅನೇಕ ಅವಮಾನ, ಹಿಂಸೆಗಳನ್ನು ಅನುಭವಿಸಿದ್ದಾಯಿತು. ಮೊದಲು ಮರಾಠಿ ಶಾಲೆ, ನಂತರ ಸ್ಕಾಟಿಷ್ ಮಿಷನ್ ಸ್ಕೂಲ್ ಸೇರಿದರು. ಆ ಶಾಲೆಯಲ್ಲಿ ಶ್ರೀಮಂತ ವರ್ಗದವರ ಭೋಗ ಜೀವನ, ದುಂದುವೆಚ್ಚ ಕಂಡು ಮನನೊಂದರು. ತಂದೆ ಮಗನ ಮನಃಸ್ಥಿತಿಯನ್ನು ಅರಿತು ಶಾಲೆ ಬಿಡಿಸಿ, ಒಕ್ಕಲುತನಕ್ಕೆ ಹಚ್ಚಿ, ಹದಿಮೂರನೆಯ ವಯಸ್ಸಿನಲ್ಲಿ, ಎಂಟು ವರ್ಷದ ಸಾವಿತ್ರಿಬಾಯಿ ಅವರೊಡನೆ ಮದುವೆ ಮಾಡಿದರು.

ಶಾಲೆಯ ಶಿಕ್ಷಕರಾದ ಗಫಾರ್ ಬೇಗ್ ಮತ್ತು ಲಿಜಿಟ್ ಸಾಹೇಬರ ಪ್ರಯತ್ನದಿಂದ ಪುನಃ ಶಾಲೆ ಸೇರಿ ಆಂಗ್ಲ ಶಿಕ್ಷಣ ಹೊಂದಿದರು. ಕೆಳಜಾತಿಯವನೊಬ್ಬ ಆಂಗ್ಲ ಭಾಷೆ ಕಲಿಯುವುದು ಮಹಾ ಪಾಪ ಎನ್ನುವ ಕಾಲ ಅದು.

**ಪ್ರೊ|| ಯು. ಎಸ್. ಸಂಗನಾಳಮಠ**

ಕ್ರೈಸ್ತ ಮಿಷನರಿಗಳು ನಡೆಸುತ್ತಿದ್ದ ಶಾಲೆಯಲ್ಲಿ ಶಿಕ್ಷಣ ಹೊಂದಿದ್ದರಿಂದ, ಕ್ರೈಸ್ತ ಪಾದ್ರಿಗಳ ನಿಸ್ಪೃಹ ಸೇವೆ, ಏಸುವಿನ ಜೀವನ ಎಲ್ಲವೂ ಮನದಲ್ಲಿ ಅಚ್ಚು ಒತ್ತಿದ್ದವು. ಒಂದು ವರ್ಷದವನಿದ್ದಾಗ ತಾಯಿಯನ್ನು ಕಳೆದುಕೊಂಡಿದ್ದರಿಂದ, ತಂದೆಯ ಸೋದರಿ ಸುಗುಣಾಬಾಯಿಯ ಆಶ್ರಯದಲ್ಲಿ ಬೆಳೆದರು. ಸುಗುಣಾಬಾಯಿ ಕ್ರೈಸ್ತ ಆಶ್ರಮದಲ್ಲಿ ಕೆಲಸ ಮಾಡುತ್ತಿದ್ದುದರಿಂದ ಕ್ರೈಸ್ತ ಆಶ್ರಮದಲ್ಲಿನ ಸೇವಾ ಮನೋಭಾವ ಅವರ ಮೇಲೆ ಪ್ರಭಾವ ಬೀರಿರಬಹುದು. ದುಃಖದಲ್ಲಿರುವವರಿಗೆ, ನಿಸ್ಸಹಾಯಕರಿಗೆ ಅನುಕಂಪ ತೋರುವ ಗುಣ ಆಗಿನಿಂದಲೇ ಬಾಲಕ ಜ್ಯೋತಿರಾವ್ ಕಲಿತರು. ಆದರೆ ಕ್ರೈಸ್ತ ಧಾರ್ಮಿಕ ಚಟುವಟಿಕೆಗಳ ಬಗ್ಗೆ, ಮತಾಂತರದ ಬಗ್ಗೆ ಜ್ಯೋತಿರಾವ್‌ಗೆ ಆಕ್ಷೇಪವಿದ್ದಿತು. ಮತಾಂತರವನ್ನು ವಿರೋಧಿಸಿದರು. ತಮಗಿಷ್ಟ ಬಂದ ಧರ್ಮವನ್ನು ಅನುಸರಿಸಲು ಪ್ರತಿಯೊಬ್ಬರಿಗೂ ಪೂರ್ಣ ಸ್ವಾತಂತ್ರ್ಯವಿದೆ ಎಂದು ನಂತರದ ದಿನಗಳಲ್ಲಿ ಪ್ರತಿಪಾದಿಸಿದ್ದುಂಟು.

೧೮ನೆಯ ಶತಮಾನದ ಪಾಶ್ಚಾತ್ಯ ವಿದ್ವಾಂಸ ಥಾಮಸ್ ಪೇನ್ ಬರೆದ 'ರೈಟ್ಸ್ ಆಫ್ ಮ್ಯಾನ್' ಎಂಬ ಪುಸ್ತಕದ ಇಂತಹ ವಿಚಾರಗಳು ಅವರ ಮೇಲೆ ಪ್ರಭಾವ ಬೀರಿದವು – ಇಡೀ ಜಗತ್ತು ನನ್ನ ದೇಶ; ಸರ್ವರ ಒಳಿತೇ ನನ್ನ ಧರ್ಮ; ಇತರರ ಧಾರ್ಮಿಕ ಸ್ವಾತಂತ್ರ್ಯಕ್ಕೆ ಧಕ್ಕೆ ಬಂದರೆ ರಕ್ಷಿಸುವುದು ಸರಕಾರದ ಕರ್ತವ್ಯ; ಪ್ರತಿ ವ್ಯಕ್ತಿ ಅಥವಾ ಸಮುದಾಯ ತಂತನ್ನ ನಂಬಿಕೆಯನುಸಾರ ದೇವನನ್ನು ಆರಾಧಿಸಬಹುದು. ಬೈಬಲ್‌ನ ಮಾನವೀಯತೆ, ಕುರಾನ್‌ನ ಶಿಸ್ತು ಸಹ ಇವರ ಮೇಲೆ ಪ್ರಭಾವ ಬೀರಿದವು.

ಜ್ಯೋತಿರಾವ್ ಅಸಂಖ್ಯಾತ 'ಅಭಂಗ'ಗಳನ್ನು ಬರೆದಿದ್ದಾರೆ. 'ಬ್ರಾಹ್ಮಣರ ಕರಾಮತ್ತು' ಎಂಬ ನಾಟಕದಲ್ಲಿ ಶೂದ್ರ-ಅತಿಶೂದ್ರರ ಬದುಕನ್ನು, 'ತೃತೀಯ ರತ್ನ' ನಾಟಕದಲ್ಲಿ ಪುರೋಹಿತಶಾಹಿಯು ಅಮಾಯಕ ಸಮುದಾಯವನ್ನು ವಂಚಿಸುವುದನ್ನು ಚಿತ್ರಿಸಿದ್ದಾರೆ. 'ಗುಲಾಮಗಿರಿ' (೧೮೭೩) ಜ್ಯೋತಿರಾವ್ ಅವರ ಪ್ರಸಿದ್ಧ ಕೃತಿ. ಅದರಲ್ಲಿ ಎಲ್ಲ ವಿಧದ ಗುಲಾಮತನಗಳನ್ನು ಚಿತ್ರಿಸಿದ್ದಾರೆ. ರೈತರ ಬದುಕಿನ ಚಿತ್ರಣದ 'ರೈತರ ಬಂಡಾಯ' ಅವರ ನಿಧನಾನಂತರ ೭೭ ವರ್ಷಗಳ ನಂತರ ಪ್ರಕಟವಾಯಿತು (೧೯೬೭). ಅವರು 'ಇಶಾರಾ' ಮತ್ತು 'ಸತ್ಯ-ಧರ್ಮ' ಎಂಬ ಎರಡು ಚಿಕ್ಕ ಕೃತಿಗಳನ್ನು ರಚಿಸಿದ್ದರು.

'ಸತ್ಸಾರ' ಎಂಬ ಪತ್ರಿಕೆಯ ಸಂಪಾದಕರಾಗಿದ್ದರು. ಈ ಪತ್ರಿಕೆಯಲ್ಲಿ, ಆರ್ಯಭಟನ ಧರ್ಮಕಲ್ಪನೆಯ ಬಗ್ಗೆ, ಬ್ರಹ್ಮೋಸಮಾಜ – ಪ್ರಾರ್ಥನಾ ಸಮಾಜಗಳ ಬಗ್ಗೆ, ಸ್ತ್ರೀ ಶಿಕ್ಷಣದ ಬಗ್ಗೆ, ಹಿಂದೂ ಧರ್ಮದ ಡಾಂಭಿಕತೆ ಬಗ್ಗೆ ಲೇಖನಗಳನ್ನು ಬರೆದರು.

ಜ್ಯೋತಿರಾವ್ ಫುಲೆ ತಮ್ಮ ಬದುಕನ್ನು ಸಮಾಜಸೇವೆಗೆ ಮುಡಿಪಾಗಿಟ್ಟರು. ತಾವು ನಂಬಿದ ಮೌಲ್ಯಗಳ ಬಗ್ಗೆ ಜನರಲ್ಲಿ ಜಾಗೃತಿ ಮೂಡಿಸಿದರು. ಶೂದ್ರರು, ಅತಿ ಶೂದ್ರರು, ಮಹಿಳೆಯರು ಕಾರ್ಮಿಕರು ಮುಂತಾದ ಶೋಷಿತ ಜನಾಂಗದವರಿಗಾಗಿ ಪ್ರತ್ಯೇಕ ಶಾಲೆ ಪ್ರಾರಂಭಿಸಿದರು. ಸಾಮಾಜಿಕ ಅನ್ಯಾಯಗಳ ವಿರುದ್ಧ ಆಂದೋಲನವನ್ನು ಆರಂಭಿಸಿದರು. ಬಾಲ್ಯ ವಿವಾಹ, ಬಹುಪತ್ನಿತ್ವ, ಕೇಶಮುಂಡನ, ಜಾತೀಯತೆ, ಅಸ್ಪೃಶ್ಯತೆಗಳ ವಿರುದ್ಧ ಸಾಮಾಜಿಕ ಆಂದೋಲನ ನಡೆಸಿದರು. ತಂದೆಯಿಂದ ವಿರೋಧ ಬಂದಾಗ ಪತ್ನಿಯೊಡನೆ ಮನೆ ತೊರೆದರು. ಪತಿಯ ಬೆಂಬಲದೊಂದಿಗೆ ಸಾವಿತ್ರಿಬಾಯಿ ಮಹಿಳೆಯರಲ್ಲಿ ಶಿಕ್ಷಣದ ಬಗ್ಗೆ ಜಾಗೃತಿ ಮೂಡಿಸಿದ ಮಹಾರಾಷ್ಟ್ರದ ಮೊದಲ ಮಹಿಳೆ ಎನ್ನಬಹುದು.

ಅವರು ಮಾಡಿದ ಕೆಲವು ಸುಧಾರಣೆಗಳೆಂದರೆ – ಪೇಶ್ವೆಗಳ ಕಾಲದ, ಪರಂಪರಾನುಗತವಾಗಿ ಬಂದಿದ್ದ – ಬ್ರಾಹ್ಮಣರಿಗೆ ದಕ್ಷಿಣೆ ನೀಡುವ ಪದ್ಧತಿ ವಿರೋಧಿಸಿ ಮರಾಠಿ ಭಾಷೆಯಲ್ಲಿನ ಉತ್ತಮ ಗ್ರಂಥಗಳಿಗೆ 'ದಕ್ಷಿಣೆ' ನೀಡಬೇಕೆಂಬುದನ್ನು ಜಾರಿಗೆ ತಂದರು. ಅಂದಿನ ಆಡಳಿತ ಅದನ್ನು ಸಮರ್ಥಿಸಿತು. ೧೮೬೩.ರಲ್ಲಿ ವಿಧವೆಯರು ಪಡೆದ ಮಕ್ಕಳಿಗೆ ಅನಾಥಾಲಯವನ್ನು ಸ್ಥಾಪಿಸಿದರು. ವಿಧವಾ ಪುನರ್ವಿವಾಹವನ್ನು ಪ್ರೋತ್ಸಾಹಿಸಿ, ಸತಿ ಪದ್ಧತಿಯನ್ನು ವಿರೋಧಿಸಿದರು. ಬ್ರಾಹ್ಮಣ ವಿಧವೆಯರ ಕೇಶ ಮುಂಡನ ಪದ್ಧತಿಯನ್ನು ತಡೆಗಟ್ಟಿದರು. ಕೇಶ ಮುಂಡನ ಮಾಡುತ್ತಿದ್ದ ನಾಪಿತರನ್ನು ಸಂಘಟಿಸಿದರು. ತಮ್ಮ ಮನೆಯ ನೀರನ್ನು ಅಸ್ಪೃಶ್ಯರೆಲ್ಲರೂ ಉಪಯೋಗಿಸಲು ಅನುಮತಿ ಕೊಟ್ಟರು.

ಅನಾಥ ಮಕ್ಕಳೊಂದಿಗೆ ನಿದ್ರಿಸುತ್ತಿದ್ದ ಜ್ಯೋತಿಬಾ ತಮ್ಮನ್ನು ಕೊಲ್ಲಲು ಬಂದ ಕೊಲೆಗಡುಕರನ್ನು ಕುರಿತು : ''ನನ್ನನ್ನು ಕೊಲ್ಲಿ, ಆದರೆ ನಿಮ್ಮ ಮಕ್ಕಳನ್ನು ಶಾಲೆಗೆ ಸೇರಿಸಿ. ಅವರಾದರೂ ತಮ್ಮ ಉಪಜೀವನಕ್ಕಾಗಿ ಯೋಗ್ಯ ದಾರಿ ಹಿಡಿಯಲಿ'' ಎಂದಿದ್ದರಂತೆ. ಮನಕರಗಿದ ಕೊಲೆಗಡುಕರು ಮಾತಿಲ್ಲದೆ ಹಿಂದಿರುಗಿದರಂತೆ.

ಜಮೀನುದಾರಿ ಪದ್ಧತಿ ವಿರುದ್ಧ ಚಳುವಳಿ ಆರಂಭಿಸಿ, 'ಉಳುವವನೇ ಹೊಲದೊಡೆಯ' ಎಂಬ ನೀತಿ ಸಾರಿದರು. ನಂತರ ಗಿರಣಿ ಕಾರ್ಮಿಕರನ್ನು ಸಂಘಟಿಸಿ ಅವರ ಹಕ್ಕುಬಾಧ್ಯತೆಗಳಿಗಾಗಿ ಹೋರಾಡಿದರು. ಭಾಲೇಕರ್ ಸಂಪಾದಕತ್ವದಲ್ಲಿ 'ದೀನಬಂಧು' ಪತ್ರಿಕೆ ಪ್ರಾರಂಭಿಸಿದರು.

ಜಾತಿಪದ್ಧತಿ ಅಸ್ಪೃಶ್ಯತೆಯ ಪ್ರಭಾವಕ್ಕೆ ಒಳಗಾದ ದಲಿತ ಜನರ ಸಮುದಾಯಕ್ಕೆ ವಿಶೇಷ ಗಮನ ನೀಡಿದರು. ಇಷ್ಟಾದರೂ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಸಮುದಾಯದವರನ್ನು ಪೂರ್ಣವಾಗಿ ದ್ವೇಷಿಸುತ್ತಿದ್ದಿಲ್ಲ. ಅವರ 'ಸತ್ಯಶೋಧಕ ಸಮಾಜದಲ್ಲಿ' ಎಲ್ಲ ಜಾತಿಗಳ ಜನರೂ ಇದ್ದರು. ಅವರ ಸಾಮಾಜಿಕ ಆಂದೋಲನಕ್ಕೆ ಎಲ್ಲ ಜಾತಿಗಳ ಜನ ಸಹಕಾರ ನೀಡಿದರು. ಮನುಷ್ಯ ಗೌರವಕ್ಕೆ ಮಸಿ ಬಳಿದ ಬ್ರಾಹ್ಮಣರಲ್ಲಿ ನಶಿಸಿಹೋಗಿದ್ದ ವಿವೇಕವನ್ನು ಮತ್ತೆ ಜಾಗೃತಿಗೊಳಿಸಿದರು.

೧೮೭೬ರಿಂದ ೧೮೮೨ರವರೆಗೆ ಪುಣೆಯ ನಗರಸಭಾ ಸದಸ್ಯರಾಗಿದ್ದಾಗ ಹೆಂಡದಂಗಡಿಗಳ ಸಂಖ್ಯೆಯನ್ನು ಹೆಚ್ಚಿಸುವುದಕ್ಕೆ ತಡೆ ಒಡ್ಡಿದರು. ಸಾಮಾಜಿಕ ನೈರ್ಮಲ್ಯಕ್ಕೆ ಅತಿ ಹೆಚ್ಚಿನ ಪ್ರಾಮುಖ್ಯತೆ ಕೊಟ್ಟರು.

ಜಹಾಗೀರದಾರರು, ಇನಾಂದಾರರು, ದೇಶಮುಖರು, ದೇಶಪಾಂಡೆಗಳು ವಸೂಲಿ ಮಾಡುತ್ತಿದ್ದ ತೆರಿಗೆಗಳಿಂದ ಜರ್ಜರಿತರಾಗಿದ್ದ ರೈತರ ಗೋಳನ್ನು ಕುರಿತು ತಮ್ಮ 'ರೈತರ ಬಂಡಾಯ' ಎಂಬ ಪುಸ್ತಕದಲ್ಲಿ ವಿವರಿಸಿದ್ದಾರೆ. ರೈತರ ಮೇಲೆ ವಿಧಿಸಿದ್ದ ತೆರಿಗೆಯನ್ನು ಖಂಡಿಸಿದರು. ನೀರಾವರಿಯ ಮಹತ್ವ ಪ್ರತಿಪಾದಿಸಿದ ಇವರು ರೈತರ ಸಾಲ ಮನ್ನಾ ಮಾಡಲು ಕೃಷಿಕರ ಬ್ಯಾಂಕ್‌ಗಳ ಸ್ಥಾಪನೆಗೆ ಒತ್ತಾಯ ಮಾಡಿದರು. ಕೃಷಿ ಬ್ಯಾಂಕ್ ತತ್ವದ ಹರಿಕಾರ ಮೇಜರ್ ನೇಡರ್ ಬರ್ನ್ ಈ ಬೇಡಿಕೆಯನ್ನು ಬೆಂಬಲಿಸಿದ. ಶ್ರಮಜೀವಿಗಳ ಆರ್ಥಿಕ ಶೋಷಣೆಯ ವಿರುದ್ಧ ಜ್ಯೋತಿಬಾ ಹೋರಾಡಿದರು.

**ಶಿಕ್ಷಣದ ಬಗ್ಗೆ ಜ್ಯೋತಿರಾವ್ ವಿಚಾರಗಳು**

''ಶಿಕ್ಷಣವು ಸರ್ವಾಂಗೀಣ ಪ್ರಗತಿಯ ಹೆಬ್ಬಾಗಿಲು. ಶಿಕ್ಷಣವು ಕೇವಲ ನೌಕರಿಗಾಗಿ ಅಲ್ಲ, ಬದಲು, ಸ್ವಾಭಿಮಾನ, ಅರಿವು, ಸ್ವಾವಲಂಬನೆಗಳನ್ನು ಪಡೆಯುವುದಕ್ಕಷ್ಟೇ ಅಲ್ಲದೆ ದೇಶದ ಪ್ರಗತಿಯಲ್ಲಿ ಸಮಪಾಲು ಪಡೆಯಲು ಸಹಕಾರಿ'' ಎಂದರು. ಶೂದ್ರ-ಅತಿಶೂದ್ರ-ಮುಸ್ಲಿಂ ಸಮುದಾಯಕ್ಕೆ ವಸತಿಶಾಲೆ ಆರಂಭಿಸಿ ವಿದ್ಯಾರ್ಥಿವೇತನ ಒದಗಿಸಿರಿ ಎಂದೂ ಪ್ರಾಥಮಿಕ ಶಿಕ್ಷಣವನ್ನು ಕಡ್ಡಾಯಗೊಳಿಸಿ ಎಂದೂ ಹಂಟರ್ ಆಯೋಗಕ್ಕೆ ಮನವಿ ಸಲ್ಲಿಸಿದರು.

ಶಾಲೆಗಳಲ್ಲಿ ಧಾರ್ಮಿಕ ಶಿಕ್ಷಣವನ್ನು ವಿರೋಧಿಸಿದರು. ಬೈಬಲ್ ಬೋಧನೆಯನ್ನು ಹಿಂದೆಗೆದುಕೊಳ್ಳುವಲ್ಲಿ ಯಶಸ್ವಿಯಾದರು. ಸ್ತ್ರೀ ಶಿಕ್ಷಣಕ್ಕಾಗಿ ತಾವೇ ಶಾಲೆಗಳನ್ನು ತೆರೆದರು. ಅಸ್ಪೃಶ್ಯ ಸಮಾಜದ ಶಿಕ್ಷಕರೇ ಅಸ್ಪೃಶ್ಯತೆ ನಿವಾರಿಸಬಲ್ಲರು ಎಂಬ ಮಾತು ಡಾ|| ಅಂಬೇಡ್ಕರರಿಂದ ನಿಜವಾಯಿತು. ಅದಕ್ಕೆ ಅಂಬೇಡ್ಕರ್ ಒಂದೆಡೆ ಈ ರೀತಿ ಹೇಳಿದ್ದಾರೆ: ''ಮಹಾತ್ಮಾ ಫುಲೆ ಅವರಿಂದ ಶಿಕ್ಷಣ ಪ್ರಸಾರ ಕಾರ್ಯದಿಂದಾಗಿ ಅಸ್ಪೃಶ್ಯರು ಮನುಷ್ಯರಾದರು.''

ಸ್ತ್ರೀಸ್ವಾತಂತ್ರ್ಯ : ಪುರಾತನ ಕಾಲದಿಂದಲೂ ಸ್ತ್ರೀಯರು ಶೋಷಣೆಗೆ ಒಳಪಟ್ಟು ಶಿಕ್ಷಣದಿಂದ ವಂಚಿತರಾಗಿದ್ದುದನ್ನು ಕಂಡು ೧೮೪೮ರಲ್ಲಿ ಮೊದಲು ಪುಣೆಯಲ್ಲಿ 'ಕನ್ಯಾಶಾಲೆ' ತೆರೆದರು. ಮಹಿಳಾ ಶಿಕ್ಷಣ ಮೂಲಕ ಸಾರ್ವಜನಿಕ ಜೀವನ ಪ್ರವೇಶಿಸಲು ಸ್ತ್ರೀಯರಿಗೆ ಅವಕಾಶ ಕಲ್ಪಿಸಿದರು. ಪತ್ನಿ ಸಾವಿತ್ರಿಬಾಯಿಯವರ ಸಹಕಾರದಿಂದಾಗಿ ಸ್ತ್ರೀ ಶಿಕ್ಷಣ ಶಾಲೆಗಳನ್ನು ತೆರೆಯ ಮುಂದಾದರು. ಮಕ್ಕಳಿಲ್ಲದ ಈ ದಂಪತಿಗಳು ಅನೇಕ ಅನಾಥ ಮಕ್ಕಳನ್ನು ಮನೆಯಲ್ಲಿ ಸಲಹಿದರು. ಸಾವಿತ್ರಿಬಾಯಿ ಉತ್ತಮ ಶಿಕ್ಷಕಿ, ಮಾತ್ರವಲ್ಲದೆ ವಾಗ್ಮಿಯೂ ಕವಯಿತ್ರಿ ಆಗಿದ್ದರು. 'ಕಾವ್ಯಫುಲೆ' ಕವನ ಸಂಕಲನ ಪ್ರಕಟಿಸಿದರು. ಬಹುಪತ್ನಿತ್ವ, ವಿಧವಾ ವಿ ಪ್ರತಿಬಂಧ, ನಿಯೋಗ ಪದ್ಧತಿ, ವೇಶ್ಯಾಪದ್ಧತಿ ಇವುಗಳ ವಿರುದ್ಧ ಜನಾಂದೋಲ ರೂಪಿಸಿದರು. ಸ್ತ್ರೀಗೆ ವೈಯಕ್ತಿಕ, ಸಾಮಾಜಿಕ ಸಮಾನತೆಗಾಗಿ ಹೋರಾಡಿದರು.

ಯಾವುದೇ ವ್ಯಕ್ತಿಯಾಗಲಿ, ವರ್ಗವಾಗಲಿ, ಸಮುದಾಯವಾಗಲಿ ಗುಲಾ ಗಿರಿಯನ್ನು ಸಹಿಸಕೂಡದು ಎಂದು ಜ್ಯೋತಿರಾವ್ ಹೇಳುತ್ತಿದ್ದರು. ವಿಚಾರಶಕ್ತಿ, ವಿವೇ ಸಮಾನತೆ, ಸ್ವಾತಂತ್ರ್ಯಗಳನ್ನು ಎತ್ತಿ ಹಿಡಿದರು.

**ಸಮಾನತೆ ಕಲ್ಪನೆ** : ''ಸೃಷ್ಟಿಯಲ್ಲಿ ಅಸಮಾನತೆ ಇದೆ ಎಂಬುದು ನಿಜ. ಸಾಮರ್ಥ್ಯ ವಿಚಾರಶಕ್ತಿ, ಶರೀರ ವಿನ್ಯಾಸ, ಸಂವೇದನೆ ಇತ್ಯಾದಿ ಮಾನದಂಡಗಳಲ್ಲಿ ಅಸಮಾನ ಇರುವುದು ನಿಜ. ಇದು ನಿಸರ್ಗನಿರ್ಮಿತಿ. ಆದರೆ ಮನುಷ್ಯ ಸೃಷ್ಟಿಸಿದ ಅಸಮಾನತೆಯನ್ನು ಸಹಿಸುವುದು ಸಾಧ್ಯವಿಲ್ಲ. ಏಕೆಂದರೆ ಈ ಅಸಮಾನತೆಯ ಹಿಂದೆ ಒಂದು ವರ್ಗದ ಸ್ವಾರ್ಥ ಅಡಗಿದೆ. ಅನ್ಯಾಯದ ಅಟ್ಟಹಾಸವಿದೆ. ಆದ್ದರಿಂದ ಅದು ಖಂಡನಾರ್ಹ'' ಎಂದು ಗುರುತಿ ಫುಲೆ ಸಮಾನತೆಯ ಭಾವನೆ ಎಲ್ಲರಲ್ಲಿ ತರಬೇಕಿದೆ ಎಂದು ಘೋಷಿಸಿದರು. ನ್ಯಾಯ ಸಮಾನತೆ, ಸ್ವಾತಂತ್ರ್ಯ, ಬಂಧುತ್ವ ನಮ್ಮ ಕನಸಿನ ಸಮಾಜದ ಬುನಾದಿ ಆಗಬೇಕೆಂದರು ಈ ದಿಶೆಯಲ್ಲಿ ಥಾಮಸ್ ಪೇನ್‌ನ ಚಿಂತನೆ ನೆರವಾಯಿತು. ಫ್ರೆಂಚ್ ರಾಜ್ಯ ಕ್ರಾಂತಿಯ ಪ್ರೇರಕ ತತ್ವ 'ಸ್ವಾತಂತ್ರ್ಯ-ಸಮಾನತೆ ಸಹೋದರತ್ವ' ಅವರಿಗೆ ಸ್ಫೂರ್ತಿ ನೀಡಿತು.

ಜ್ಯೋತಿರಾವ್ ಅವರ ಜೀವನದ ಪರಮಧ್ಯೇಯ 'ಮಾನವತೆ'. ಮನುಷ್ಯ ತ ಅವಿವೇಕದಿಂದ ಸ್ವಾರ್ಥಿಯಾಗುವುದರ ಕುರಿತು ಅವರಿಗೆ ತೀವ್ರವಾದ ಆಕ್ರೋಶವಿದ್ದಿತು ಅದಕ್ಕಾಗಿ ವರ್ಣ, ಜಾತಿ, ಮತಗಳನ್ನು ಸೃಷ್ಟಿಮಾಡಿ ಮನುಷ್ಯ ಅಸಮಾನತೆಯ ಉಂಟುಮಾಡಿದ ಎನ್ನುತ್ತಾರೆ. ಅವರು ವರ್ಣವ್ಯವಸ್ಥೆಯನ್ನು ಹುಟ್ಟಿನ ಆಧಾರದ ಮೇ ರಚಿಸಿದವರನ್ನು ಖಂಡತುಂಡವಾಗಿ ವಿರೋಧಿಸುತ್ತಾರೆ. ಬುದ್ಧಿಶಕ್ತಿ, ಸಾಮರ್ಥ್ಯ ವ್ಯಕ್ತಿ-ವ್ಯಕ್ತಿಯಲ್ಲಿ ಭಿನ್ನವಾಗಿರುವುದೇ ಹೊರತು ವರ್ಣ-ವರ್ಣಗಳಲ್ಲಿ ಭಿನ್ನವಾಗಿಲ್ಲ ಶೂದ್ರರು ಕಿಂಕರರಾಗುವುದು ಸಲ್ಲದು; ಇದು ಮಾನವತೆಗೆ ಬಗೆಯುವ ದ್ರೋಹ; ಎ ಜನಾಂಗದಲ್ಲೂ ದುರ್ವ್ಯಸನಿಗಳು, ದುರ್ನಡತೆಯವರು, ಅಯೋಗ್ಯರು ಇದ್ದಾ ಹಾಗೆಯೇ ಸಮರ್ಥರು, ಸಾತ್ವಿಕರು, ಗುಣಸಂಪನ್ನರು, ವಿವೇಕಿಗಳೂ ಇದ್ದಾರೆ ಎಂಬುದ ಅವರ ಅಭಿಪ್ರಾಯವಾಗಿತ್ತು. ಶಿಕ್ಷಣ ಹೊಂದಿದ ವರ್ಗಗಳು ಶ್ರಮಜೀವಿಗಳ ಅಶಿಕ್ಷಿತರನ್ನು ಹೀನಾಯವಾಗಿ ಕಂಡಿವೆ. ಮೇಲ್ವರ್ಗ ಮಾತ್ರ ಶಿಕ್ಷಣ ಹೊಂದಿದ್ದರಿಂ ಭಾರತ ಪ್ರಗತಿ ಸಾಧಿಸುವಲ್ಲಿ ಹಿಂದುಳಿಯಿತು ಎಂಬ ಅಭಿಪ್ರಾಯ ಹೊಂದಿದ್ದರು ಶೂದ್ರರನ್ನು ಮನುಷ್ಯರೆಂದು ಪರಿಗಣಿಸದ ಹಿಂದೂ ವ್ಯವಸ್ಥೆ ಹಸು, ಹಂದಿ, ಕೋ ನಾಯಿ ಇತ್ಯಾದಿ ಪ್ರಾಣಿಗಳನ್ನು ದೇವರ ರೂಪದಲ್ಲಿ ಪೂಜಿಸುವುದನ್ನು ಪರಿಹಾಸ್ಯ ಮಾಡಿದ್ದಾ ಜ್ಯೋತಿಬಾ. ಮನುಷ್ಯ ಗೌರವ, ಮಾನವೀಯತೆಯನ್ನು ಕ್ಕರಿಸಿ ತನ್ನದೇ ಆದ ಇನ್ನೊಂದು ಸಮುದಾಯವನ್ನು ಕೀಳಾ ಕಂಡದ್ದನ್ನು ಖಂಡಿಸಿದ್ದಾರೆ. ಸಾವಿರಾರು ವರ್ಷಗಳಿಂ ತುಳಿತಕ್ಕೆ ಸಿಕ್ಕಿಬಿದ್ದವರಿಗೆ ಅಧಿಕಾರ ದೊರೆಯುವಂ ಮಾಡುವುದೇ ನಿಜವಾದ ಧರ್ಮ; ಆ ಕಾರ್ಯ ಮಾಡಿದ ತೃ ತಮಗೆ ಇದೆ ಎಂದು ತಮ್ಮ ಅಭಿನಂದನಾ ಸಂದರ್ಭದಲ್ಲಿ ಹೇ ದೈನ್ಯತಾಭಾವವನ್ನು ವ್ಯಕ್ತಪಡಿಸಿದ್ದರು. ಜ್ಯೋತಿಬಾ ನವೆಂಬ ೨೭, ೧೮೯೦ರಂದು ನಿಧನರಾದರು.




ಅವರ ಹೋರಾಟದ ಹಾದಿಯನ್ನು ನೋಡಿ ಅಂಬೇಡ್ಕ ಜ್ಯೋತಿಬಾ ಅವರನ್ನು 'ಮಹಾತ್ಮಾ' ಎಂದು ಕರೆದರು ಸಾಮಾಜಿಕ ಚಳುವಳಿಯ ಆದ್ಯ ಪ್ರವರ್ತಕರು ಮಹಾತ ಜ್ಯೋತಿಬಾ ಫುಲೆ.

**ಪ್ರೊ|| ಯು. ಎನ್. ಸಂಗನಾಳಮಠ**
ಉಪನ್ಯಾಸಕರು-ಲೇಖಕರು, ''ಜ್ಯೋತಿರ್ಲಿಂಗ'', ಶಿವಮೊಗ್ಗ ರಸ್ತೆ
೧ನೇ ಒಳತಿರುವು, ಹೈಸ್ಕೂಲ್ ಬಡಾವಣೆ
ಹೊನ್ನಾಳಿ - ೫೭೭ ೨೧೭, ದಾವಣಗೆರೆ ಜಿಲ್ಲೆ

''ಬೆಟ್ಟದ ಮೇಲೊಂದು ಮನೆಯ ಮಾಡಿ ಮೃಗಗಳಿಗಂಜಿದರೆ ಎಂತಯ್ಯಾ'' ಎಂದಿದ್ದಾರೆ. ಬೆಟ್ಟದ ಮನೆಗೆ ಮೃಗಗಳ ಕಾಟವಿರಬಹುದು. ಕಾಡಿನ ಅಟ್ಟದ ಮೇಲೆ ಮನುಷ್ಯರಿದ್ದು, ಅವರ ವಾಸನೆ ಹಿಡಿದು ಬಂದ ಮೃಗಗಳು ಅಟ್ಟಕ್ಕೇರಲಾಗದೆ, ಅಟ್ಟದ ಕೆಳಗಿನ ನೆಲದ ಮೇಲೆಯೇ ಘರ್ಜಿಸಿಯೋ ಹೂಂಕರಿಸಿಯೋ ಕೊನೆಗೆ ಏನೂ ಪ್ರಯೋಜನವಿಲ್ಲವೆಂದು ನಿರ್ಧರಿಸಿ ಬೆಳಗಾಗುವ ವೇಳೆಗೆ ಜಾಗ ಖಾಲಿಮಾಡುತ್ತವೆ. ಇಂಥ ರೋಮಾಂಚಕಾರಿ ಕತೆಗಳು ಕಾಡಿನ ಪ್ರದೇಶಗಳಲ್ಲಿ ಈಗಲೂ ಪ್ರಚಲಿತವಿವೆ. ಏನೇ ಆದರೂ, ಬಲ್ಲವನೆ ಬಲ್ಲ ಬೆಲ್ಲದ ರುಚಿಯ ಅನ್ನುವಂತೆ ಅನುಭವಿಸಿದವನಿಗೆ ಗೊತ್ತು ಅಟ್ಟದ ಅನುಭವ.




**ಬ್ಯಾಂ**ಕ್ ಅಧಿಕಾರಿಗಳಿಗೆ ಕಂಪ್ಯೂಟರ್ ಟ್ರೈನಿಂಗ್ ನೀಡುವಾಗ ಪರಿಣತ ಉಪನ್ಯಾಸಕರು ತತ್ರಾಂಶದಿಂದ ಮಾಹಿತಿ ಪಡೆಯುವ ಬಗೆಗಿನ ಒಂದು ಪ್ರಕಾರವಾದ 'ಪರ್‌ಜಡ್ ಡ್ಯಾಟ' ಬಗ್ಗೆ ಬಹಳ ವಿವರಿಸಲು ಹೆಣಗಾಡುತ್ತಿದ್ದರು. ಆದರೂ ತರಬೇತಿಯ ಶಿಬಿರಾರ್ಥಿಗಳಿಗೆ ಅದು ಮನನವಾಗಲಿಲ್ಲ. ಅದನ್ನು ಮನದಟ್ಟಾಗಿಸಲು ಸರಿಯಾದ ಉದಾಹರಣೆ ಕೊಟ್ಟು ವಿವರಿಸಲು ಆ ಉಪನ್ಯಾಸಕರಿಗೆ ಆಗಲಿಲ್ಲ. ತಕ್ಷಣ ನಾನು ಶಿಬಿರಾರ್ಥಿಗಳ ಮಧ್ಯೆ ಎದ್ದುನಿಂತು, ಅಜ್ಜಿ ಮೊಮ್ಮಗನನ್ನು ಅಟ್ಟಕ್ಕೆ ಹತ್ತಿಸಿ ಅಲ್ಲಿ ಪೇರಿಸಿರುವ ಹಳೇ ವಸ್ತುಗಳ ಮಧ್ಯೆ ಅಗತ್ಯವಾದುವುಗಳನ್ನು, ''ಸಂದರ್ಭಕ್ಕೆ ಬೇಕಾದ ಹಳೇ ಸಾಮಾನುಗಳನ್ನು ಹುಡುಕಿಸಿ ಪಡೆದಂತೆ'' ಎಂದು ಉದಾಹರಿಸಿದೆ. ಆಗ ಎಲ್ಲರಿಗೂ ಅರ್ಥವಾಯಿತು. ಉಪನ್ಯಾಸಕರು ಅಟ್ಟದ ಉದಾಹರಣೆ ಅತ್ಯಂತ ಸೂಕ್ತವಾದುದೆಂದು, ಇನ್ನು ಮುಂದೆ ಈ ಉದಾಹರಣೆಯನ್ನೇ ನೀಡುತ್ತೇನೆಂದು ಮೆಚ್ಚುಗೆ ಸೂಚಿಸಿದರು. ಕಂಪ್ಯೂಟರ್ ಸಿಸ್ಟಂನಲ್ಲಿ ಹಳೇ ಮಾಹಿತಿಯನ್ನು ಹುಡುಕಿ ತೆಗೆಯುವುದನ್ನೇ 'ಪರ್‌ಜಡ್ ಡ್ಯಾಟ' ಎನ್ನುತ್ತಾರೆ. ಪುರಾತನವಾದ ನಮ್ಮ ಅಟ್ಟದ ಪದ್ಧತಿ ಈ ಆಧುನಿಕ ಕಂಪ್ಯೂಟರ್ ಪದ್ಧತಿಗೆ ಅಳವಡಿಕೆಯಾಗಿರುವುದು ಅಟ್ಟದ ಮಹತ್ವವನ್ನು ಸಾರುತ್ತದೆ, ಇಂದಿಗೂ ಅದರ ಪ್ರಸ್ತುತತೆಯನ್ನು ಸಾದರಪಡಿಸುತ್ತದೆ.

'ಅಟ್ಟಾನ ಬೆಟ್ಟ ಮಾಡುತ್ತಾನೆ' ಎಂಬ ನುಡಿಗಟ್ಟಿದೆ. 'ಅಟ್ಟ ಹತ್ತಲಾರದವನು ಬೆಟ್ಟ ಹತ್ತುವನೇ' ಎಂಬುದು ಇನ್ನೊಂದು. ಅದನ್ನೇ ಕೆಲವು ಕಡೆ, 'ಅಟ್ಟಕ್ಕೇರದವನು ಬೆಟ್ಟಕ್ಕೇರುವನೆ ?' ಎನ್ನುತ್ತಾರೆ. ಜಾರಿಬಿದ್ದವನನ್ನು ಕಂಡು ನಗುವವರೇ ಹೆಚ್ಚು. ಮೊದಲೇ ಅವಮಾನಿತನಾಗಿರುವವನಿಗೆ ಮತ್ತಷ್ಟು ಅವಮಾನಮಾಡಿ ಮನನೋಯಿಸಿದಂತೆ 'ಅಟ್ಟದ ಮೇಲಿಂದ ಬಿದ್ದವನಿಗೆ ಗೊದಮೊಟ್ಟೆಯಿಂದ ಹೊಡೆದರು' ಎಂಬ ಮಾತಿಗೆ, ನೊಂದವನಿಗೆ ಮತ್ತಷ್ಟು ನೋಯಿಸಿದರು ಎಂದು ಅರ್ಥವಿದೆ. ಅರಣ್ಯದ ಆಸುಪಾಸಿನಲ್ಲಿರುವವರಲ್ಲಿ 'ಮನುಷ್ಯ ಜೀವನ ಅಟ್ಟದಿಂದ ಶುರುವಾಗಿ ಚಟ್ಟದಲ್ಲಿ ಅಂತ್ಯವಾಗುವುದು' ಎಂಬ ನುಡಿಗಟ್ಟು ಮಹತ್ತಾದ ಆಧ್ಯಾತ್ಮಿಕತೆಯನ್ನು ಕಿರಿವರ್ತದಲ್ಲಿ ಸೂಚಿಸುತ್ತವೆ.

ಅಟ್ಟದ ಪರಿಕಲ್ಪನೆಯಿಂದ ಚಟ್ಟದ ಪರಿಕಲ್ಪನೆ ಬಂದಿರುವಂತಿದೆ. ಎರಡರ ಶಬ್ದೋತ್ಪತ್ತಿಯಲ್ಲಿ, ಉಚ್ಚಾರಣೆಯ ಪ್ರಾಸಬದ್ಧತೆಯಲ್ಲಿ, ಅಷ್ಟೇ ಏಕೆ, ಅವುಗಳ ರಚನಾತ್ಮಕ ದೃಷ್ಟಿಯಿಂದಲೂ ಸಾಮೀಪ್ಯತೆಯಿದೆ.

ಒಮ್ಮೆ ಗಯ್ಯಾಳಿ ತಾಯಿಯೊಬ್ಬಳಿದ್ದಳು. ಸದಾ ತನ್ನ ಮಗನನ್ನು ನಿಂದಿಸುವುದೇ ಅವಳ ಚಟವಾಗಿತ್ತು. ಅವನ ಬಗ್ಗೆ ಸಹಜ ಮಮಕಾರವಿದ್ದರೂ ಒರಟು ನಾಲಿಗೆಯಲ್ಲಿ ಮಗನನ್ನು ನಿಂದಿಸುತ್ತಾ ಇತರರಿಗೆ ದೂರು ಹೇಳುವುದೇ ಜಾಸ್ತಿ. ''ಇರುವ ಒಬ್ಬ ಮಗನಿಗೆ ಏಕೆ ಶಾಪ ಹಾಕುವೆ, ನಿನ್ನ ಆಸ್ತಿ ಅವನಿಗಲ್ಲದೆ ಇನ್ಯಾರಿಗೆ, ನೀನು ಸತ್ತಾಗ ಅಳುವುದು ಅವನಲ್ಲವೆ'' ಎಂದು ಯಾರಾದರೂ ಸಮಾಧಾನಿಸಿದರೆ, ಈಕೆ ಕೆರಳಿ ''ಆ ನನ್ಮಗ ನಾ ಸತ್ತಾಗ ಅಳೋಕೇನಾದ್ರು ಬಂದ್ರೆ ನಾನು ಚಟ್ಟದಿಂದ ಎದ್ದುಬಂದು ಮೆಟ್ಟ ತಕೊಂಡು ಹೊಡಿತೀನಿ'' ಎಂಬ ನುಡಿಗಟ್ಟನ್ನು ಕಟ್ಟಿ ಹೇಳುತ್ತಿದ್ದಳು. ಅವಳ ಮಗನ ವಾರಿಗೆಯವನಾದ ನನ್ನಲ್ಲೂ ಆ ರೀತಿ ಹೇಳಿದಾಗ, ''ನೀನು ಚಟ್ಟದಿಂದ ಎದ್ದುಬಂದು ಹೊಡೆಯಲಿ ಅಂತಾದ್ರೂ ನಿನ್ನ ಮಗ ಅಳ್ತಾನೆ. ಆ ರೀತಿ ಸತ್ತ ತನ್ನ ತಾಯಿಯನ್ನು ಬದುಕಿಸಿಕೊಳ್ಳುವ ಪುಣ್ಯಾತ್ಮನಾಗುತ್ತಾನೆ'' ಎಂದಾಗ ಆಕೆಯ ಕೋಪ ಕರಗಿ ವಾತ್ಸಲ್ಯ ಉಕ್ಕಿ ಕಣ್ಣೀರ್ಗರೆದಳು. ಇನ್ನೊಂದು ಜನಪದರ ನುಡಿಯಿದೆ; ಚಟ ಚಟ್ಟಕ್ಕೇರಬೇಕು, ಹಠ ಅಟ್ಟಕ್ಕೇರಬೇಕು. ಅದನ್ನೇ ಕೆಲವರು ಮಾರ್ಪಡಿಸಿ ''ಚಟ್ಟಕ್ಕೇರಲಿ ಚಟ, ಅಟ್ಟಕ್ಕೇರಲಿ ಕೀರ್ತಿ'' ಎನ್ನುತ್ತಾರೆ.

ಬಸವಣ್ಣನವರು ತಮ್ಮದೊಂದು ವಚನದಲ್ಲಿ ''ಹೊಗಳಿ ಹೊಗಳಿ ಎನ್ನ ಹೊನ್ನ ಶೂಲಕ್ಕೇರಿಸಿದರಯ್ಯಾ'' ಎಂದಿದ್ದಾರೆ. ಜನಪದರಲ್ಲಿ ಹೊಗಳಿ ಹೊಗಳಿ ಅಟ್ಟಕ್ಕೇರಿಸಿದರು ಎಂಬ ನುಡಿಗಟ್ಟಿದೆ. ಅಂದರೆ ಹಿರಿಯ ಅಜ್ಜಿ ಅಜ್ಜರಿಗೆ ಸ್ವತಃ ಅಟ್ಟಕ್ಕೇರಲಾಗದು. ಆಗ ತಮ್ಮ ಮೊಮ್ಮಕ್ಕಳನ್ನಾಗಲೀ ಅಥವಾ ನೆರೆಮನೆಯ ಮಕ್ಕಳನ್ನಾಗಲೀ ಪುಸಲಾಯಿಸಿ ಅವರಿಗೆ ಪುಡಿ ತಿನಿಸುಗಳ ಆಸೆ ತೋರಿಸಿ ಅವರ ಪರಾಕ್ರಮವನ್ನು ಹೊಗಳಿ ಅಟ್ಟಕ್ಕೇರಿಸುತ್ತಾರೆ. ಅವರಿಂದ ತಮಗೆ ಬೇಕಾದ ಹಳೇ ಸಾಮಾನುಗಳನ್ನು ಇಳಿಸಿಕೊಳ್ಳುತ್ತಾರೆ. ಆ ರೀತಿ ಇಳಿಸಿಕೊಂಡ ಆ ವಸ್ತುಗಳನ್ನು ಕೆಲಸವಾದ ಮೇಲೆ ವಾಪಸ್ಸು ಅಟ್ಟದ ಮೇಲಕ್ಕೆ ಏರಿಸಲು ಪುನಃ ಮಕ್ಕಳನ್ನು ಹೊಗಳಿ ಮನವೊಲಿಸಬೇಕಾಗುತ್ತದೆ. ಆ ಕಾರಣಕ್ಕೇ ಆ ಗಾದೆ ಬಂದಿರಬೇಕು. ಇಲ್ಲಿ ಒಂದು ಸ್ವಾರಸ್ಯವಿದೆ. ಇವರಿಗೆ ಕೆಲಸ ಮಾಡಿಕೊಟ್ಟ ಮಕ್ಕಳು ಅಟ್ಟದಿಂದ ಬೇಕಾದ ಸಾಮಾನುಗಳನ್ನು ಕೆಳಗಿಳಿಸಿದಾಗ ಈ ಹಿರಿಯರು ಅವರ ಮೈದಡವಿ ಶಹಭಾಷ್‌ಗಿರಿ ನೀಡಿ, ಮುದ್ದುಮಾಡಿ, ಮೈಕೈ ನೇವರಿಸಿ ತಿಂಡಿ ನೀಡಿ ಕಳಿಸುತ್ತಾರೆ. ಅವರು ಮಕ್ಕಳ ಮೈಕೈ ನೇವರಿಸುವುದು ಅವರನ್ನು ಕೊಂಡಾಡುವುದಕ್ಕಿಂತ ಅಟ್ಟದ ಮೇಲೇನಾದರೂ ಕದ್ದು ಇಟ್ಟುಕೊಂಡಿರುವರೆ ಇಲ್ಲವೆ ಎನ್ನುವುದನ್ನು ಖಾತ್ರಿ ಮಾಡಿಕೊಳ್ಳುವ ಸಲುವಾಗಿ. ಮೈದಡವಿದಂತೆ ಅವರ ಜೇಬುಗಳನ್ನು ತಡಕಾಡುವುದೂ ಆ ಕಾರಣಕ್ಕಾಗಿಯೇ.

ಈ ಅಟ್ಟ ಸಂಸ್ಕೃತಿ ಶಿಲಾಯುಗ ಪೂರ್ವದ ಆದಿಮಾನವನ ಕಾಲದಿಂದಲೂ ಬಂದಿದೆ. ಬೆಂಕಿ ಆವಿಷ್ಕಾರಕ್ಕಿಂತಲೂ ಮೊದಲು ಅಟ್ಟ ಆವಿಷ್ಕಾರವಾಯಿತು. ಕ್ರೂರ ಮೃಗಗಳು ಮತ್ತು ವಿಷಜಂತುಗಳಿಂದ ರಕ್ಷಣೆ ಪಡೆಯಲು ಮಾನವ ಮರದ ಮೇಲೆ ಅಟ್ಟ ಮಾಡಿಕೊಂಡ. ನಂತರ ಅದನ್ನು ಸುಧಾರಿಸಿ, ಮರಕ್ಕೆ ಆನಿಸಿ ಇನ್ನೊಂದೆಡೆ ನೆಲದಿಂದ ಆಧಾರ ತೆಗೆದುಕೊಂಡು ಅಟ್ಟದ ಮೇಲೆ ಜೀವಿಸುವುದನ್ನು ಕಲಿತ.

**ಡಾ|| ವೆಂಕಟಯ್ಯ ಅಪ್ಪಗೆರೆ**

ಈಗಲೂ ಅಡವಿ ಜೀವಿಗಳಲ್ಲಿ ಈ ಸಂಸ್ಕೃತಿ ಮುಂದುವರಿದಿದೆ. ಅದರಲ್ಲೂ ಮಗು ಹುಟ್ಟಿದಾಗ ಬಾಣಂತಿ ಮತ್ತು ಮಗುವಿನ ಸುರಕ್ಷತೆಗಾಗಿ ಬಾಣಂತನ ಮುಗಿಯುವವರೆಗೂ ಅಟ್ಟದ ಮೇಲೆ ಇರಿಸುತ್ತಿದ್ದರು. ಅಟ್ಟಕ್ಕೆ ಒಂದು ಏಣಿ ಹಾಕಿ, ಅದರ ಮೇಲೆ ಹತ್ತಿ ಬಾಣಂತಿಗೆ ಬೇಕಾದ ವಸ್ತುಗಳನ್ನು ಕೊಡುತ್ತಿದ್ದರು. ನಂತರದಲ್ಲಿ ಅದು ನವದಂಪತಿಗಳ ಸುಖರಾತ್ರಿಗಳಿಗೆ ಮೀಸಲಾಯಿತು. ಈಗಲೂ ಕೆಲವು ಬುಡಕಟ್ಟಿನ ಜನರು ನೆಲವಾಸಿಗಳಾಗಿದ್ದರೂ ಅವರು ಮದುವೆಯ ಮೊದಲ ರಾತ್ರಿಗಳನ್ನು ಈ ಅಟ್ಟದ ಮೇಲೆ ಕಳೆಯುವ ಸಂಪ್ರದಾಯವನ್ನು ಅವ್ಯಾಹತವಾಗಿ ನಡೆಸಿಕೊಂಡು ಬಂದಿರುತ್ತಾರೆ. ಅದನ್ನು ಅಟ್ಟದ ಪ್ರಸ್ತ ಎನ್ನುತ್ತಾರೆ. ಜೊತೆಗೆ ಹೊಲ-ಗದ್ದೆ ಕಾಯುವವರು, ತೋಟ ಗೋದಾಮುಗಳನ್ನು ನೋಡಿಕೊಳ್ಳುವವರು, ಗಡಿ ಪ್ರದೇಶದ ಉಸ್ತುವಾರಿಕೆ ಮಾಡುವವರು ಅಟ್ಟಗಳನ್ನು ನಿರ್ಮಿಸಿಕೊಳ್ಳುತ್ತಾರೆ. ಜೊತೆಗೆ, ಕೆಲವು ದಾಸ್ತಾನುಗಳನ್ನು ಹೊಲಗದ್ದೆ ತೋಟಗಳಲ್ಲಿ ಸಂಗ್ರಹಿಸಲು ಅಟ್ಟಗಳನ್ನು ಕಟ್ಟಿಕೊಳ್ಳುತ್ತಾರೆ. ಅವಶ್ಯಕತೆಗೆ ತಕ್ಕಂತೆ ಅವುಗಳ ನಿರ್ಮಾಣದಲ್ಲಿ ಬೇರೆ ಬೇರೆ ವಿನ್ಯಾಸಗಳಿರುತ್ತವೆ. ಕೆಲವು ಕಳ್ಳಕಾಕರು, ದರೋಡೆಕೋರರು, ಅಪಹರಣಕಾರರು ನಿರ್ಜನ ಪ್ರದೇಶದಲ್ಲಿ ಇಂಥ ಅಟ್ಟಗಳನ್ನು ನಿರ್ಮಿಸಿಕೊಂಡು ತಮ್ಮ ಧಂಧೆ ನಡೆಸುತ್ತಾರೆ. ಅವುಗಳಿಗೆ ಈಗಲೂ ಅಡ್ಡೆ ಎಂಬ ಹೆಸರು ಪ್ರಚಲಿತವಿದೆ. ಕೆಲವು ಶೋಕಿಲಾಲರು ತಮ್ಮ ರಸಿಕ ವ್ಯವಹಾರಗಳಿಗೂ ಮತ್ತು ಕೆಲವು ಪ್ರೇಮಿಗಳು ತಮ್ಮ ಮಧುಚಂದ್ರ, ಹುಣ್ಣಿಮೆ ರಾತ್ರಿಗಳಿಗೂ ಇವುಗಳನ್ನು ಬಳಸುತ್ತಾರೆ. ಉಮರ್ ಖಯ್ಯಾಮನ ಕಾವ್ಯದಲ್ಲೂ ಈ ಅಟ್ಟದ ಪ್ರೇಮಸಲ್ಲಾಪಗಳು ಪ್ರಸ್ತಾಪಿಸಲ್ಪಟ್ಟಿವೆ. ಅದರಂತೆ ಮನುಷ್ಯ ಸತ್ತಾಗ ಎತ್ತರದ ಬಂಡೆಯ ಮೇಲೆ ಅಟ್ಟ ಕಟ್ಟಿ ಅದರ ಮೇಲೆ ಚಟ್ಟವಿಟ್ಟು ಬರುತ್ತಿದ್ದರು, ಸತ್ತವರ ದೇಹ ಪ್ರಾಣಿಗಳಿಗಾದರೂ ಆಹಾರವಾಗಲೆಂದು. ಆ ರೀತಿ ದೇಹಕ್ಕೆ ಸದ್ಗತಿ ದೊರೆಯುತ್ತದೆ ಎಂಬ ನಂಬಿಕೆ ಅರಣ್ಯಪ್ರದೇಶದ ಸುತ್ತಮುತ್ತಲಿನ ಕೆಲವು ಬುಡಕಟ್ಟಿನ ಸಮುದಾಯದಲ್ಲಿ, ಗುಡ್ಡಗಾಡಿನ ಘಟ್ಟ ಪ್ರದೇಶಗಳಲ್ಲಿ ಇದೆ. ಕೆಲವು ಕಡೆ ಇದನ್ನು ಈಗಲೂ ಮುಂದುವರಿಸಿಕೊಂಡು ಬರುತ್ತಿದ್ದಾರೆ. ಪಶ್ಚಿಮ ಬಂಗಾಳದ ಅನೇಕ ಕಡೆ ಈ ಸಂಪ್ರದಾಯ ಈಗಲೂ ಮುಂದುವರಿದಿದೆ. ಇದೆಲ್ಲವೂ ಊರಾಚೆಗಿನ ಸಂಸ್ಕೃತಿ. ಊರಿನೊಳಗೆ ದವಸಧಾನ್ಯ ಸಂಗ್ರಹಕ್ಕೆ, ಹುಲ್ಲು ಮೆದೆ, ಬಣವಿಗಳಿಗಾಗಿ ಅಟ್ಟ ನಿರ್ಮಿಸುವುದು ಈಗಲೂ ಪ್ರಚಲಿತವಿದೆ. ಕೊಪ್ಪಳ, ರಾಯಚೂರು ಮುಂತಾದ ಉತ್ತರ ಕರ್ನಾಟಕದ ಭಾಗಗಳಲ್ಲಿ ಬಣವಿಗಳನ್ನು, ಮೆದೆಗಳನ್ನು ಬೃಹತ್ತಾದ ಗೋಪುರಗಳಂತೆ ನಿರ್ಮಿಸುತ್ತಾರೆ. ಈಜಿಪ್ಟ್‌ನ ಪಿರಮಿಡ್‌ಗಳಂತೆ, ವಾಲಿರುವ ಪೀಸಾ ಗೋಪುರದಂತೆ, ಮೀನಾಕ್ಷಿ ದೇವಾಲಯದ ಗೋಪುರದಂತೆ, ಚಂಗುಲಿಯಾಕಾರದಂತೆ ಹೀಗೆ ನಾನಾ ರೀತಿಯಲ್ಲಿ ಅತ್ಯಂತ ಕುಶಲ ಜಾಗ್ರತೆಯಿಂದ ಅವುಗಳನ್ನು ನಿರ್ಮಿಸುತ್ತಾರೆ. ಅವುಗಳ ಬೃಹತ್ತೆ ಮತ್ತು ವಿನ್ಯಾಸದ ನಿರ್ಮಾಣ ನೋಡುಗರಲ್ಲಿ ಕೌತುಕ ಹುಟ್ಟಿಸುತ್ತದೆ. ಎಂತಹ ಮಳೆ ಬಂದರೂ ಒಂದು ತೊಟ್ಟು ನೀರೂ ಒಳಹೋಗದಂತೆ, ಬಣವಿ ಅಥವಾ ಮೆದೆಯಲ್ಲಿ ಯಾವ ಭಾಗದಿಂದ ಹುಲ್ಲು ಎಳೆದುಕೊಂಡರೂ, ಎಷ್ಟೇ ಪ್ರಮಾಣದಲ್ಲಿ ಕಿತ್ತರೂ ಮೆದೆ ಅಚ್ಚಳಿಯದೆ ಉಳಿಯುತ್ತದೆ. ಅಂತಹ ಅಬಾಧಿತ ಮೆದೆ ಬಣವಿಗಳನ್ನು ಭೂಮಿಯ ಗುರುತ್ವಾಕರ್ಷಕದ ಆಧಾರಕ್ಕೆ ಅನುಸಾರವಾಗಿ ಅನಕ್ಷರಸ್ಥ ಗ್ರಾಮೀಣ ಪರಿಣತರು ನಿರ್ಮಿಸಿರುತ್ತಾರೆ. ಬೆಳದಿಂಗಳ ರಾತ್ರಿಯಲ್ಲಿ ಮೆದೆ ಬಣವಿಗಳಿಗೆ ಒರಗಿ ಕೊಂಡು ಪ್ರೇಮಿಸುವ ಪ್ರಣಯಿಗಳು, ಯಾರಾದರೂ ಬರುತ್ತಿರುವ ಸುಳಿವು ಗೊತ್ತಾದರೆ ಬಣವಿ ಕೆಳಗಿನ ಅಟ್ಟದ ಕೆಳಗೆ ಅವಿತುಕೊಂಡು ತಮ್ಮ ಪ್ರಣಯ ಕೇಳಿಯನ್ನು ಮುಂದುವರಿಸುವ ಗ್ರಾಮೀಣ ಸೊಗಡಿನ ಅನೇಕ ಪ್ರೇಮಪ್ರಸಂಗಗಳಿವೆ, ಅಸಂಖ್ಯಾತ ಸ್ವಾರಸ್ಯಕರ ಘಟನೆಗಳು ಸಂಭವಿಸಿವೆ.

ಈ ಅಟ್ಟದ ಸಾಹಿತ್ಯ ಇಡಿಯಾಗಿಲ್ಲದಿದ್ದರೂ ಬಿಡಿಯಾಗಿ ಅಲ್ಲಲ್ಲಿ ದಾಖಲಾಗಿವೆ. ಕೋಲಾರ ಜಿಲ್ಲೆ ಮುಂತಾದೆಡೆ ಒಂದಾಳೆತ್ತರದಿಂದ ಎರಡಾಳು ಎತ್ತರದವರೆಗೂ ಕಲ್ಲುಕಂಬಗಳ ಅಟ್ಟಣಿಗೆ ನಿರ್ಮಿಸಿ ಅವುಗಳ ಮೇಲೆ ಮೆದೆ ಒಟ್ಟುತ್ತಾರೆ. ಏಣಿ ಹತ್ತಿ ಹುಲ್ಲು ತೆಗೆಯಬೇಕು. ತೋಟ ತುಡಿಕೆಯಿದ್ದವರು ತೆಂಗು ಅಡಿಕೆಯ ಗರಿಗಳನ್ನು ಒಟ್ಟಲು ಅಟ್ಟಣಿಗೆ ಕಟ್ಟಿಕೊಳ್ಳುತ್ತಾರೆ.

ಅಷ್ಟೆ ಏಕೆ, ನಾವು ಚಿಕ್ಕವರಾಗಿದ್ದಾಗ ಸಿಡುಬು ಲಸಿಕೆ ಹಾಕಲು ಆಸ್ಪತ್ರೆಯ ದಾದಿಯರು ಗ್ರಾಮಗಳಿಗೆ ಬರುತ್ತಿದ್ದಾರೆ ಎಂಬ ಸುದ್ದಿ ತಿಳಿದಾಕ್ಷಣ ಯಾರಿಗೂ ಸಿಗದಂತೆ ಈ ಬಣವಿ ಮತ್ತು ಮೆದೆಯ ಅಟ್ಟದ ಕೆಳಗೆ ತೂರಿ ಅವಿತುಕೊಂಡು ಆ ಸೂಜಿ ಚುಚ್ಚಿಸಿಕೊಳ್ಳುವುದನ್ನು ತಪ್ಪಿಸಿಕೊಳ್ಳುತ್ತಿದ್ದೆವು.

ಇನ್ನು ಊರೊಳಗಿನ ಮನೆಗಳಲ್ಲಿ, ಅದರಲ್ಲೂ ಗ್ರಾಮೀಣ ಮನೆಗಳಲ್ಲಿ ಸರ್ವೇಸಾಧಾರಣ ಎಲ್ಲರ ಮನೆಯಲ್ಲಿಯೂ ಅಟ್ಟವಿರುತ್ತಿತ್ತು. ಅಟ್ಟವಿಲ್ಲದ ಮನೆಯನ್ನು ಹುಡುಕುವುದೇ ಕಷ್ಟ. ತೀರ ಬಡವರ ಚಿಕ್ಕ ಗುಡಿಸಲು ಗಳನ್ನು ಬಿಟ್ಟರೆ, ಮಿಕ್ಕೆಲ್ಲ ಮಾಳಿಗೆ, ಹೆಂಚಿನ ಮನೆಗಳಲ್ಲಿ ಅಟ್ಟ ಇದ್ದೇ ಇರುತ್ತದೆ. ಅದು ಅಜ್ಜಿ ಅಜ್ಜರ ಸ್ವತ್ತಾಗಿತ್ತು. ಅವರ ಸಾಮ್ರಾಜ್ಯವಾಗಿತ್ತು. ಜೊತೆಗೆ, ಸಣ್ಣ ಮನೆಯವರು ಹೆಚ್ಚಿನ ಕೋಣೆಗಳಿಲ್ಲದ ಹೆಂಚಿನಮನೆಯವರು ಮದುವೆಯಾದ ಗಂಡಹೆಂಡತಿಯರ ಪ್ರಸ್ತ, ಪ್ರತ್ಯೇಕ ಮಲಗುವಿಕೆಗೆ ಹೆಂಚಿನ ಸೂರಿನ ಕೆಳಗೆ ಮರದ ಹಲಗೆಗಳನ್ನು ಭದ್ರ ತೊಲೆಗಳ ಆಧಾರದ ಮೇಲೆ ಅಟ್ಟ ನಿರ್ಮಿಸಿ ಏಣಿ ಅಥವಾ ಮೆಟ್ಟಿಲನ್ನು ಜೋಡಿಸಿ ಸಣ್ಣ ಉಪ್ಪರಿಗೆ ಮನೆ ನಿರ್ಮಿಸಿರುತ್ತಾರೆ. ಮನೆಯ ಅಳಿಯಂದಿರು ಅತ್ತೆ ಮನೆಗೆ ಬಂದಾಗ ಅದು ಅಂತರಂಗದ ಅರಮನೆ ಯಾಗಿರುತ್ತದೆ. ಇಂಥ ಮನೆಯೊಳಗಿನ ಉಪ್ಪರಿಗೆಯ ಬಗ್ಗೆ ಭಾರತೀಯ ತತ್ವಶಾಸ್ತ್ರದ ಅತ್ಯಂತ ಪ್ರಾಚೀನ ಸಿದ್ಧಾಂತವಾದ ಚಾರ್ವಾಕ ದರ್ಶನದಲ್ಲಿಯೇ ಈ ಉಪ್ಪರಿಗೆಯ ವಿಷಯ ಪ್ರಸ್ತಾಪವಾಗಿದೆ. ಅಂದರೆ ಸರಿಸುಮಾರು ಕ್ರಿ. ಪೂ. ಎಂಟು ಅಥವಾ ಒಂಬತ್ತನೇ ಶತಮಾನದ ಅವಧಿಯಲ್ಲೇ ಪ್ರಸ್ತಾಪವಾಗಿದೆ. ಸತ್ತವರ ಹೆಸರಿನಲ್ಲಿ ತಿಥಿ ಮಾಡಿ ಉಂಡರೆ, ಮೇಲಿನ ಲೋಕದಲ್ಲಿರುವ ಮೃತರಿಗೆ ಉಂಡಂತಾದರೆ, ಕೆಳಗಿನ ಮನೆಯಲ್ಲಿ ತಯಾರಾದ ಅಡಿಗೆಯನ್ನು ಉಪ್ಪರಿಗೆ ಮೇಲಿರುವವರಿಗೆ ಕಳಿಸುವ ಬದಲು, ಉಪ್ಪರಿಗೆ ಮೇಲಿನವರ ಹೆಸರು ಹೇಳಿ ಕೆಳಗಿನವರೆ ಊಟ ಮಾಡಿದರಾಗದೆ, ಎಂದು ... ಮೌಢ್ಯವನ್ನು ಚಾರ್ವಾಕರು ಪ್ರಶ್ನಿಸಿದ್ದಾರೆ.

ಅರ್ಜುನ ತನ್ನ ಬಾಣದಿಂದ ಅಟ್ಟ ... ಅದನ್ನೇರಿ ಆಕಾಶದಿಂದ ಪಾರಿಜಾತ ಪುಷ್ಪವನ್ನು ... ಜಾನಪದ ಕತೆಯಿದೆ. ಅದೇ ಅರ್ಜುನ ಸಾವಿನಂಚಿನ ... ಭೀಷ್ಮನಿಗಾಗಿ ಶರಶಯ್ಯೆಯ ಅಟ್ಟ ನಿರ್ಮಿಸಿ ಅದರ ... ಭೀಷ್ಮ ಕೊನೆಯುಸಿರುಬಿಡುವಂತೆ ಅಣಿಮಾಡಿದ ... ಪ್ರಸಂಗ ಮಹಾಭಾರತದಲ್ಲಿ ಬರುತ್ತದೆ. ರಾಮಾಯಣ... ಹನುಮಂತ ತನ್ನ ಬಾಲದಿಂದಲೇ ಅಟ್ಟ ನಿರ್ಮಿಸಿಕೊಂ... ರಾವಣನ ಆಸ್ಥಾನದಲ್ಲಿ ತನ್ನ ಪ್ರತಾಪ ತೋರಿಸಿದ.

ಇನ್ನು ಚಟ್ಟವನ್ನು ಅಟ್ಟದಂತೆಯೇ ರಚಿಸಿ ... ಅಂತಿಮ ಯಾತ್ರೆಯನ್ನು ಕೈಗೊಳ್ಳುತ್ತಾರೆ. ... ಮನೆಯಿಂದ ಸ್ಮಶಾನದವರೆಗೂ ಹೊತ್ತು ತರಲು ... ನಿರ್ಮಿಸುತ್ತಾರೆ. ಮುಸಲ್ಮಾನರು ಮತ್ತು ಉತ್ತರ ಭಾರ... ಕಡೆ ಚಟ್ಟದ ಮೇಲೆ ಮಲಗಿಸುವುದರಿಂದ ... ವಿನ್ಯಾಸವಿರದು. ದಕ್ಷಿಣ ಭಾರತದಲ್ಲಿ ಹಲವೆಡೆ ... ರೀತಿಯ ವಿನ್ಯಾಸಗಳಿವೆ. ಮಂಡಿ ... ಕುಳಿತುಕೊಳ್ಳುವ ಭಂಗಿಯಲ್ಲಿ ಸಿಂಹಾಸನಾರೂಢ... ಕುಳಿತುಕೊಳ್ಳಲು ಚಟ್ಟ ಕಟ್ಟುತ್ತಾರೆ. ಜೊತೆಗೆ ಹೂವಿ... ನಾನಾ ರೀತಿಯಲ್ಲಿ ಶೃಂಗರಿಸುತ್ತಾರೆ. ಮೈಸೂರಿನ ಭಾಗ... ಮೈಸೂರು ಅರಸರ ಮಯೂರ ಸಿಂಹಾಸ... ವಿನ್ಯಾಸ, ಜಂಬೂಸವಾರಿಯ ಆನೆ ಮೇಲಿನ ಅಂಬಾ... ಯಂತೆ ಚಟ್ಟಗಳನ್ನು ನಿರ್ಮಿಸುತ್ತಾರೆ. ಚಿತ್ರದುರ್ಗ... ಕೆಲವೆಡೆ ಮದಕರಿನಾಯಕನಂತೆ, ಪಾಳೇಗಾರ... ಸಿಂಹಾಸನದ ನೂಪುರದಂತೆ, ಮರಾಠಿಗರು ಶಿವಾ... ಮಹಾರಾಜನ ಸಿಂಹಾಸನವನ್ನು ಹೋಲುವಂತೆ ... ನಿರ್ಮಿಸುತ್ತಾರೆ.

ಊರಿಗೆ ಉಪಕಾರ ಮಾಡುವುದು ಮತ್ತು ಶ... ಶೃಂಗಾರ ಮಾಡುವುದು ಎರಡೂ ಒಂದೇ ... ಮಾತಿದೆ. ಅದನ್ನು ಸ್ವಲ್ಪ ಮಾರ್ಪಡಿಸಿ 'ಅಟ್ಟಕ್ಕೆ ಅಲಂಕಾ... ಮಾಡುವುದು, ಚಟ್ಟಕ್ಕೆ ಶೃಂಗಾರಮಾಡುವುದು ಒಂ... ಎನ್ನಬಹುದು. ವಚನಕಾರರು "ಬೆಟ್ಟದ ಮೇಲೊಂ... ಮನೆಯ ಮಾಡಿ ಮೃಗಗಳಿಗಂಜಿದರೆ ಎಂತಯ್ಯಾ... ಎಂದಿದ್ದಾರೆ. ಬೆಟ್ಟದ ಮನೆಗೆ ಮೃಗಗಳ ಕಾಟವಿರಬಹು... ಕಾಡಿನ ಅಟ್ಟದ ಮೇಲೆ ಮನುಷ್ಯರಿದ್ದು, ಅವರ ... ಹಿಡಿದು ಬಂದ ಮೃಗಗಳು ಅಟ್ಟಕ್ಕೇರಲಾಗದೆ, ಅ... ಕೆಳಗಿನ ನೆಲದ ಮೇಲೆಯೇ ಘರ್ಜಿಸಿಯೋ ಹೂಂಕರಿಸಿಯೋ ಕೊನೆಗೆ ಏನೂ ಪ್ರಯೋಜನವಿಲ್ಲವೆಂ... ನಿರ್ಧರಿಸಿ ಬೆಳಗಾಗುವ ವೇಳೆಗೆ ಜಾಗ ಖಾ... ಮಾಡುತ್ತವೆ. ಇಂಥ ರೋಮಾಂಚಕಾರಿ ಕತೆಗಳು ಕಾ... ಪ್ರದೇಶಗಳಲ್ಲಿ ಈಗಲೂ ಪ್ರಚಲಿತವಿವೆ. ಏನೇ ಆದರೂ ಬಲ್ಲವನೆ ಬಲ್ಲ ಬೆಲ್ಲದ ರುಚಿಯ ಅನ್ನುವ... ಅನುಭವಿಸಿದವನಿಗೆ ಗೊತ್ತು ಅಟ್ಟದ ಅನುಭವ.

ಅಟ್ಟದ ಮೇಲಿನ ವಸ್ತು ಅಮೂಲ್ಯ
ಅಟ್ಟದ ಮೇಲಿನ ಬದುಕು ಅನನ್ಯ.

ಡಾ|| ವೆಂಕಟಯ್ಯ ಅಪ್ಪಗೆರೆ
ಕೇರಾಫ್ : ಡಾ|| ವಿ. ವಿಜಯ, ಮನೆ ನಂ. ಎ-೨
ಬಿಎಮ್‌ಸಿಹೆಚ್ ಸ್ಟಾಫ್ ಕ್ವಾರ್ಟರ್ಸ್, ಜೆ.ಎಂ.ಐ.ಟಿ. ಕ್ಯಾಂಪಸ್
ಎನ್.ಹೆಚ್.೪. ಬೈ ಪಾಸ್, ಚಿತ್ರದುರ್ಗ - ೫೭೭ ೫೦...

# ಮಣ್ಣನ್ನೇ ಡಿಲೀಟ್ ಮಾಡಿದ ಜಲಕೃಷಿ

**ಪ್ರಸ್ತುತ ದಿನಗಳಲ್ಲಿ ಜಾಗತೀಕರಣದ ಹೊಡೆತಕ್ಕೆ ಸಿಕ್ಕಿ ತತ್ತರಿಸುತ್ತಿರುವ ರೈತರು ಹೊಸ ವಿಧಾನಗಳಿಗಾಗಿ ಆಸೆಗಣ್ಣಿನಿಂದ ಎದುರು ನೋಡುತ್ತಿದ್ದಾರೆ. ಇದರ ಜೊತೆ ಇಂದು ಜನಸಂಖ್ಯೆ ತೀವ್ರಗತಿಯಲ್ಲಿ ಏರುತ್ತಿದೆ. ಕೈಗಾರಿಕೆಗಳು ಬೆಳೆಯುತ್ತಲಿವೆ. ಸಾಗರದ ಮಟ್ಟ ಹೆಚ್ಚುತ್ತಲಿದೆ. ಆದರೆ ಭೂಮಿ, ಅದರಲ್ಲೂ ಕೃಷಿ ಭೂಮಿ ಕಡಿಮೆಯಾಗುತ್ತಿದೆ. ಇರುವ ಸ್ವಲ್ಪ ಭೂಮಿಯ ಸತ್ವ ತೀರಾ ಕೆಳಮಟ್ಟಕ್ಕೆ ಜಾರುತ್ತಿದೆ. ಈ ರೀತಿಯ ಅನೇಕ ಕಾರಣಗಳಿಂದ ಹಸಿರುಮನೆ ಪರಿಣಾಮ ಕಾಡುತ್ತಲಿದೆ. ಅನೇಕ ಜೀವರಾಶಿಗಳು ಅಳಿವಿನಂಚಿನಲ್ಲಿವೆ. ಇವಕ್ಕೆಲ್ಲಾ ರಾಮಬಾಣದಂತೆ ಜಲಕೃಷಿ ಪರಿಹಾರವಾಗಿ ಬಂದಿದೆ.**

**ಪರಮೇಶ್ವರಯ್ಯ ಸೊಪ್ಪಿಮಠ**

ಸಸ್ಯಗಳು ಬೆಳೆಯಲು ಅತ್ಯಂತ ಅಗತ್ಯವಾದ ಅಂಶಗಳಾವುವು, ಎಂದು ಪ್ರಾಥಮಿಕ ಶಾಲಾ ವಿದ್ಯಾರ್ಥಿಯನ್ನು ಕೇಳಿದರೆ ತಕ್ಷಣ ಅವನು ಮಣ್ಣು, ನೀರು, ಬೆಳಕು, ಗೊಬ್ಬರ ಎಂದು ಹೇಳುತ್ತಾನೆ. ಆದರೆ ಜಲಕೃಷಿಯ ಪದ್ಧತಿಯಲ್ಲಿ ಮಣ್ಣಿನ ಅಗತ್ಯ ಇಲ್ಲ. ಅದು ಸಾಧ್ಯವೇ ಇಲ್ಲ, ಎಂದು ಮೂಗು ಮುರಿಯಬೇಡಿ. ಸಾಧ್ಯವಿದೆ. ಈ ವಿಭಿನ್ನ ಪದ್ಧತಿಯಲ್ಲಿ ಮಣ್ಣಿನ ಎಲ್ಲಾ ಪೋಷಕಾಂಶಗಳನ್ನು ನೀರಿಗೆ ಬೆರೆಸಿ, ಸಸ್ಯಗಳಿಗೆ ನೀಡಿದಲ್ಲಿ ಅದು ಸಮೃದ್ಧವಾಗಿ ಬೆಳೆಯಬಲ್ಲದು. ಹಾಗಾಗಿ ಜಲಕೃಷಿಯನ್ನು ಮಣ್ಣು ರಹಿತ ಕೃಷಿ ಎಂದು ಕರೆಯುತ್ತಾರೆ.

ಆಂಗ್ಲ ಭಾಷೆಯಲ್ಲಿ ಇದನ್ನು ಹೈಡ್ರೋಪೋನಿಕ್ ಎಂದು ಕರೆಯುತ್ತಾರೆ. ಅಮೆರಿಕಾದ ಕ್ಯಾಲಿಫೋರ್ನಿಯಾ ವಿಶ್ವ ವಿದ್ಯಾನಿಲಯದ ಡಾ॥ ವಿಲಿಯಮ್ ಎಫ್. ಜೇರಿಕೆಯವರು ಈ ಪದ್ಧತಿಯನ್ನು ಹೆಚ್ಚು ಪ್ರಚಾರಕ್ಕೆ ತಂದರು. ಅವರ ಪ್ರಕಾರ ''ಮಣ್ಣಿನ ನೆರವಿಲ್ಲದೆ ವೈಜ್ಞಾನಿಕವಾಗಿ ತೋಟಗಾರಿಕೆ ಮಾಡುವ ವಿಧಾನವೇ ಹೈಡ್ರೋಪೋನಿಕ್.'' ಇಲ್ಲಿ 'ಹೈಡ್ರೋ' ಎಂದರೆ ನೀರು, 'ಪೋನಿಕ್' ಅಂದರೆ ಕೆಲಸ. ಇವುಗಳ ಮಿಶ್ರಣದ ಅರ್ಥ ನೀರಿನ ಕೆಲಸ, ಅಂದರೆ ನೀರಿನಲ್ಲಿ ಬೆಳೆಯುವುದು.

**ಜಲಕೃಷಿ ಇತಿಹಾಸ**

ಜಲಕೃಷಿ ಪದ್ಧತಿ ತೀರಾ ಇತ್ತೀಚೆಗೆ ಕಂಡುಹಿಡಿದುದೇನಲ್ಲ. ಈ ವಿಧಾನವು ಮೊದಲು ಕಂಡುಬರುವುದು ಬ್ಯಾಬಿಲಾನ್ ನಗರದಲ್ಲಿ. ಜಗತ್ತಿನ ಏಳು ಅದ್ಭುತಗಳಲ್ಲಿ ಅಲ್ಲಿನ ತೂಗು ಉದ್ಯಾನವನಕ್ಕೂ ಸ್ಥಾನವಿದೆ. ಆ ಉದ್ಯಾನವನದಲ್ಲಿ ಜಲಕೃಷಿಯಿಂದ ಸಸ್ಯಗಳನ್ನು ಬೆಳೆಯಲಾಗಿತ್ತು. ನಂತರ ಮಧ್ಯ ಅಮೆರಿಕಾದ ಮೆಕ್ಸಿಕೋದಲ್ಲಿನ ಅಲೆಮಾರಿ ಬುಡಕಟ್ಟು ಜನರು ತೇಲುವ ಉದ್ಯಾನಗಳ ಕೃಷಿ ಪದ್ಧತಿಯನ್ನು ಪ್ರಾರಂಭಿಸಿದರು. ಇವರು ಸರೋವರಗಳ ನೀರಿನ ಮೇಲೆ ಬಿದಿರು ಹಾಗೂ ಬೊಂಬುಗಳನ್ನು ಜೋಡಿಸಿ ತೆಪ್ಪ ಮಾಡುತ್ತಿದ್ದರು. ಇಂತಹ ನೂರಾರು ತೆಪ್ಪಗಳನ್ನು ಜೋಡಿಸಿ ಎರಡು ನೂರು ಅಡಿಯಷ್ಟು ನಡುಗಡ್ಡೆ ನಿರ್ಮಿಸಿದ್ದರು. ಅದರಲ್ಲಿ ತರಕಾರಿ ಹಾಗೂ ಹೂಗಳನ್ನು ಬೆಳೆದು ಹೊಸ ಪದ್ಧತಿಗೆ ನಾಂದಿ ಹಾಡಿದರು. ಆ ನಡುಗಡ್ಡೆಯಲ್ಲಿ ಅವರು ತಮ್ಮ ವಸತಿ ವ್ಯವಸ್ಥೆ ಮಾಡಿಕೊಂಡಿದ್ದು ವಿಶೇಷ.

ನಮ್ಮ ಭಾರತದ ಕಾಶ್ಮೀರದಲ್ಲಿ ಜಲಕೃಷಿಯನ್ನು ಹಿಂದಿನ ಕಾಲದಲ್ಲೇ ಬಳಸಲಾಗಿದೆ. ಕಾಶ್ಮೀರದ ಜನರು ಮೆಕ್ಸಿಕೋದ ಬುಡಕಟ್ಟು ಜನಾಂಗದವರಂತೆ ತೆಪ್ಪಗಳನ್ನು ನಿರ್ಮಿಸಿ ಅವುಗಳ ಮೇಲೆ ತರಕಾರಿ ಹಾಗೂ ಹಣ್ಣುಗಳನ್ನು ಬೆಳೆಯುತ್ತಿದ್ದರು.

**ಜಲಕೃಷಿ ಸಾಗಿಬಂದ ಹಾದಿ...**

ಈ ಪದ್ಧತಿ ಸಾಕಷ್ಟು ಪೂರ್ವದಲ್ಲೇ ಕಂಡುಬಂದರೂ, ಇದರ ಬಗ್ಗೆ ಹೆಚ್ಚಿನ ಅಧ್ಯಯನ ಕ್ರಿ. ಶ. ೧೬೦೦ರ ನಂತರದ ವರ್ಷಗಳಲ್ಲಿ ಪ್ರಾರಂಭವಾಯಿತು. ಸಸ್ಯಗಳು ಬೆಳೆಯಲು ಯಾವ ಅಂಶಗಳು ಅಗತ್ಯ, ಸಸ್ಯಗಳಲ್ಲಿ ಯಾವ ಮಿಶ್ರಣವಿದೆ ಎಂದು ಕಂಡುಹಿಡಿಯಲು ಜಗತ್ತಿನೆಲ್ಲೆಡೆ ವಿಜ್ಞಾನಿಗಳು ಕಾರ್ಯೋನ್ಮುಖರಾದರು. ಈ ಸಮಯದಲ್ಲೇ ನೀರಿನಲ್ಲಿ ಸಸ್ಯಗಳನ್ನು ಬೆಳೆಸಬಹುದೆಂಬ ಚಿಂತನೆ ಪ್ರಾರಂಭವಾಯಿತು. ೧೭ರಿಂದ ೧೯ನೇ ಶತಮಾನದವರೆಗೂ ಈ ಪದ್ಧತಿಯ ಬೆಳವಣಿಗೆಯ ಮೇಲೆ ಅನೇಕ ಪ್ರಯೋಗಗಳು ನಡೆದವು. ಕ್ರಿ.ಶ. ೧೬೦೦ರಲ್ಲಿ ಬೆಲ್ಜಿಯನ್ ಜಾನ್‌ವ್ಯಾನ್ ಹೇಲ್‌ಮಾಂಟ್ ಅವರು ''ಸಸ್ಯಗಳು ಬೆಳೆಯಲು ಬೇಕಾದ ಅಗತ್ಯ ಅಂಶಗಳನ್ನು ನೀರಿನಿಂದ ಪಡೆದುಕೊಳ್ಳುತ್ತವೆ'' ಎಂದು



ತಿಳಿಸಿದರು. ೧೬೯೯ರಲ್ಲಿ ಇಂಗ್ಲೆಂಡ್ ದೇಶದ ರಾಯಲ್ ಸೊಸೈಟಿಯ ಸದಸ್ಯ ಜಾನ್ ವುಡ್‌ವರ್ಡ್ ಯಾವ ನೀರಿನಲ್ಲಿ ಮಣ್ಣಿನ ಪ್ರಮಾಣ ಹೆಚ್ಚಿರುತ್ತದೋ, ಅದರಲ್ಲಿ ಸಸ್ಯದ ಬೆಳವಣಿಗೆಯೂ ಹೆಚ್ಚಿರುತ್ತದೆಂದು ಕಂಡುಹಿಡಿದನು. ಆ ದಿನಗಳಲ್ಲಿ ರಸಾಯನ ಶಾಸ್ತ್ರದ ಕುರಿತು ಹಾಕಷ್ಟು ಮಾಹಿತಿ ಇದ್ದಿಲ್ಲ. ಹಾಗಾಗಿ ಯಾವ ಪೋಷಕಾಂಶಗಳನ್ನು ಮತ್ತು ಖನಿಜ ವಸ್ತುಗಳನ್ನು ಬಳಸಿಕೊಂಡು ಸಸ್ಯ ಬೆಳೆಯುತ್ತದೆಂದು ಅವರಾರೂ ಖಚಿತ ಪಡಿಸಲಿಲ್ಲ.

೧೮ ಮತ್ತು ೧೯ನೇ ಶತಮಾನದಲ್ಲಿ ರಸಾಯನಶಾಸ್ತ್ರದಲ್ಲಿ ಹೆಚ್ಚು ಬೆಳವಣಿಗೆಯಾಯಿತು. ನಿಕೋಲಾಸ್ ಡಿ. ಸಾಸರ ಅವರು ನಲವತ್ತು ವರ್ಷಗಳ ಕಾಲ ನಿರಂತರವಾಗಿ ಅಧ್ಯಯನ ಮಾಡಿ, ೧೮೪೨ರಲ್ಲಿ ಮೊದಲ ಬಾರಿಗೆ ಸಸ್ಯಗಳಿಗೆ ಅಗತ್ಯವಾದ ಒಂಬತ್ತು ಘಟಕಾಂಶಗಳನ್ನು ಪ್ರಕಟಿಸಿದರು. ಇದು ಜಲಕೃಷಿಗೆ ಒಂದು ಮೈಲುಗಲ್ಲಾಯಿತು. ಈ ಎಲ್ಲಾ ಪ್ರಯೋಗಗಳಿಗೆ ಒಂದು ಅರ್ಥಪೂರ್ಣ ಫಲ ಸಿಕ್ಕಿದ್ದು ೧೮೬೦ರಲ್ಲಿ. ಜರ್ಮನ್ ದೇಶದ ಪ್ರೊ॥ ಜೂಲಿಯಸ್ ವಾನ್ ಸ್ಯಾಕ್ಸ್ ಅವರು ಸಸ್ಯಗಳು ಬೆಳೆಯಲು ಬೇಕಾದ ಪೋಷಕಾಂಶಗಳನ್ನೆಲ್ಲಾ ನೀರಿನಲ್ಲಿ ಸೇರಿಸಿ ಹಾಕಿದಲ್ಲಿ ಯಾವ ಸಸ್ಯವನ್ನಾದರೂ ಬೆಳೆಸಬಹುದು ಎಂದು ತಿಳಿಸಿದರು. ಅಲ್ಲಿಂದ ಜಲಕೃಷಿ ಪದ್ಧತಿ ತೀವ್ರಗತಿಯಲ್ಲಿ ಬೆಳವಣಿಗೆ ಹೊಂದಿತು.

**ಜೇರಿಕೇರ ಮ್ಯಾಜಿಕ್**

ಜಲಕೃಷಿ ಅಧ್ಯಯನ ೧೯೩೬ರ ವರೆಗೆ ಪ್ರಯೋಗಾಲಯಕ್ಕೆ ಮಾತ್ರ ಸೀಮಿತವಾಗಿತ್ತು. ಇದನ್ನು ದೊಡ್ಡ ಪ್ರಮಾಣದಲ್ಲಿ ಮತ್ತು ಲಾಭದಾಯಕವಾಗಿ ಮಾಡಿಕೊಳ್ಳಬಹುದೆಂದು ತೋರಿಸಿಕೊಟ್ಟವರು ಕ್ಯಾಲಿಫೋರ್ನಿಯಾ ವಿಶ್ವವಿದ್ಯಾನಿಲಯದ ಪ್ರಾಧ್ಯಾಪಕ ಡಾ॥ ವಿಲಿಯಮ್ ಎಫ್. ಜೇರಿಕೆ. ಈ ವಿಧಾನಕ್ಕೆ ಹೈಡ್ರೋಫೋನಿಕ್ಸ್ ಎಂದು ನಾಮಕರಣ ಮಾಡಿದ ಇವರು, ೧೯೨೯ರಿಂದ ಹತ್ತು ವರ್ಷಗಳ ಅವಧಿಯಲ್ಲಿ ನಾನಾ ರೀತಿ ಸಂಶೋಧನೆ ಮಾಡಿ ಫಲ ಕಂಡುಕೊಂಡರು.

ಕ್ಯಾಲಿಫೋರ್ನಿಯಾ ಶಿಕ್ಷಣ ಸಂಸ್ಥೆಯ ದೊಡ್ಡ ತೊಟ್ಟಿಯ ನೀರಿನಲ್ಲಿ ಮೂಲಂಗಿ, ಗಜ್ಜರಿ, ಬಟಾಣಿ, ಬೀಟ್‌ರೂಟ್ ಹಾಗೂ ಧಾನ್ಯದ ಸಸ್ಯಗಳನ್ನು ಜಲಕೃಷಿ ವಿಧಾನದಲ್ಲಿ ಬೆಳೆದು ತೋರಿಸಿದರು. ಅವರು ಬೆಳೆಸಿದ ೨೫ ಅಡಿ ಎತ್ತರದ ಟೊಮಾಟೋ ಗಿಡ ಎಲ್ಲರ ಗಮನ ಸೆಳೆಯಿತು. ಏಣಿಯ ಸಹಾಯದಿಂದ ಟೊಮಾಟೋಗಳನ್ನು ಕೀಳುವ ಪ್ರೊ॥ ಜೇರಿಕೆ ಅವರ ಚಿತ್ರಗಳು ಪತ್ರಿಕೆಗಳಲ್ಲಿ ರಾರಾಜಿಸಿದವು. ಅದರ ಪರಿಣಾಮವಾಗಿ





ಅನೇಕರು ಜಲಕೃಷಿ ಬೆಳೆಗಾರರಾಗಿದ್ದಲ್ಲದೆ ಅದನ್ನು ವಾಣಿಜ್ಯ ಉದ್ಯಮ... ಮಾಡಿಕೊಂಡರು.

**ಎರಡನೇ ಮಹಾಯುದ್ಧ ಮತ್ತು ಜಲಕೃಷಿ**

ಎರಡನೇ ಮಹಾಯುದ್ಧದ ೧೯೩೯-೪೫ರ ಅವಧಿಯಲ್ಲಿ ವಾಯು ಪ... ಭೂಸೇನಾ ಪಡೆಯ ತಜ್ಞರು ಜಲಕೃಷಿ ತಂತ್ರಜ್ಞಾನವನ್ನು ಮತ್ತಷ್ಟು ವಿಸ್ತರಿಸಿದರು. ಯು... ಸಮಯದಲ್ಲಿ ಸೈನಿಕರಿಗೆ ಪ್ರತೀ ದಿನ ತಾಜಾ ಕಾಯಿಪಲ್ಲೆ ಮತ್ತು ಆಹಾರ ಧ... ಒದಗಿಸುವುದು ಕಷ್ಟಕರ. ಆ ನಡುಗಡ್ಡೆ ಪ್ರದೇಶದಲ್ಲಿ ವ್ಯವಸಾಯ ಮಾಡುವ... ಅಸಾಧ್ಯದ ಮಾತು. ಹಾಗಾಗಿ ಅವರು ಜಲಕೃಷಿಗೆ ಮೊರೆಹೋದರು. ಆ ಯೋ... ಪೆಸಿಫಿಕ್ ಸಾಗರದ ಕಲ್ಲಿನ ವೇಕ್ ನಡುಗಡ್ಡೆಯ ಮೇಲೆ ಜಲಕೃಷಿ ಮಾ... ನಿರ್ಧರಿಸಿದರು. ಅದಕ್ಕೆ ಮೊದಲು ೧೨೦ ಚದರ ಅಡಿಯ ಟ್ಯಾಂಕ್ ತಯಾರಿಸಿದ... ಅದರಲ್ಲಿ ಜಲಕೃಷಿ ಮಾಡಿ, ಪ್ರತೀ ವಾರ ೩೦ ಪೌಂಡ್ ಟೊಮಾಟೋ, ೨೦ ಪೌ... ಬೀನ್ಸ್, ೪೦ ಪೌಂಡ್ ಮೆಕ್ಕೆಜೋಳ ಹಾಗೂ ೨೦ ಗೊಂಚಲು ಅಕರಕಿ ಸೊಪ್ಪನ್ನು ಬೆ... ಯಶಸ್ಸು ಸಾಧಿಸಿದರು.

ಯುದ್ಧದ ಸಮಯದಲ್ಲಿ ಸೈನಿಕರು ತಮ್ಮ ಬಿಡಾರಗಳಲ್ಲಿ ಜಲಕೃಷಿಯ ಘಟಕಗ... ಸ್ಥಾಪಿಸಿಕೊಂಡಿದ್ದರು. ಈ ಘಟಕಗಳಿಂದ ಉತ್ಪಾದನೆಯಾದ ಹಲವು ಮಿಲಿಯ... ಟನ್‌ಗಳಷ್ಟು ತರಕಾರಿಯನ್ನು ಸೈನಿಕರು ತಮ್ಮ ದಿನನಿತ್ಯದ ಆಹಾರಕ್ಕೆ ಬಳಸಿದ... ಅಮೆರಿಕಾದ ಒಂದು ವಿಶೇಷ ಹೈಡ್ರೋಫೋನಿಕ್ಸ್ ಘಟಕದಿಂದ ಪ್ರತಿ ದಿನ ಎ... ಮಿಲಿಯನ್ ಪೌಂಡ್ ಕಾಯಿಪಲ್ಲೆ ಬೆಳೆಯಲಾಗುತ್ತಿತ್ತು.

ಯುದ್ಧ ಮುಗಿದ ನಂತರ ಜಲಕೃಷಿ ಮಹತ್ವ ಹೆಚ್ಚಾಯಿತು. ಸಾಮಾನ್ಯ... ಕೈಗೆಟುಕುವ ರೀತಿಯಲ್ಲಿ ಬೆಳೆದು ಅದು ಒಂದು ಉದ್ಯಮವಾಯಿತು. ೧೯೫೦ರ ನ... ಇಟಲಿ, ಸ್ಪೇನ್, ಫ್ರಾನ್ಸ್, ಜರ್ಮನಿ, ಸ್ವೀಡನ್, ಆಸ್ಟ್ರೇಲಿಯಾ, ಕೆನಡಾ, ರಷ್ಯಾ ಹಾ... ಇಸ್ರೇಲ್ ದೇಶಗಳಲ್ಲಿ ಈ ಪದ್ಧತಿ ಹೆಚ್ಚು ಪ್ರಚಾರ ಪಡೆದುಕೊಂಡಿತು. ಅಮೆರಿಕಾದ... ದೊಡ್ಡ ಪ್ರಮಾಣದಲ್ಲಿ ಜಲಕೃಷಿ ಅಭಿವೃದ್ಧಿಯಾಯಿತು.

**ಭಾರತದಲ್ಲಿ ಜಲಕೃಷಿ**

ಆಗಲೇ ಹೇಳಿದ್ದಂತೆ ಪ್ರಾಚೀನ ಕಾಲದಲ್ಲೇ ಕಾಶ್ಮೀರದಲ್ಲಿ ಈ ವಿಧಾನ... ಕಾಯಿಪಲ್ಲೆ ಬೆಳೆಯಲಾಗುತ್ತಿತ್ತು. ನಂತರದ ದಿನಗಳಲ್ಲಿ ಇದರ ಬಗ್ಗೆ ಹೆಚ್ಚಿನ ಮಾ... ದೊರಕಿಲ್ಲ. ಇತ್ತೀಚೆಗೆ, ಬ್ರಿಟಿಷರ ಆಳ್ವಿಕೆಯ ಸಮಯದಲ್ಲಿ, ಅಂದರೆ ೧೯೪೬ರಲ್ಲಿ... ತಂತ್ರಜ್ಞಾನವನ್ನು ಇಂಗ್ಲೆಂಡ್‌ನಿಂದ ಭಾರತಕ್ಕೆ ತರಲಾಯಿತು. ಇದರ ಬಗ್ಗೆ ಹೆ... ಸಂಶೋಧನೆ ಬಂಗಾಲದ ಡಾರ್ಜಿಲಿಂಗ್ ಜಿಲ್ಲೆಯ ಕಲಿಯಾಫಾಂಗ್ ಫಾರ್ಮ್... ಜೇ.ಶುಟೋ ಡಾಗ್ಲಾಸ್ ನಡೆಸಿದರು. ಮೂರು ವರ್ಷಗಳ ಅಧ್ಯಯನದ ನಂತರ...

ವಿಜ್ಞಾನಿ ಜಲಕೃಷಿಯಲ್ಲಿ ಹೊಸ ವಿಧಾನ ಕಂಡುಹಿಡಿದರು. ಅದು ಬೆಂಗಾಲ್ ಜಲಕೃಷಿ ಎಂದೇ ಪ್ರಸಿದ್ಧವಾಯಿತು. ಭಾರತದ ಹವಾಗುಣಕ್ಕೆ ಇದು ಹೆಚ್ಚು ಹೊಂದಿಕೊಂಡಿದ್ದರಿಂದ ಮುಂಬೈ, ಲಕ್ನೊ, ಕಲ್ಕತ್ತಾ, ಮುಂತಾದ ಕಡೆ ಜಲಕೃಷಿ ಪ್ರಾರಂಭವಾಯಿತು.

ಭಾರತದ ಬೆಂಗಾಲ್ ಜಲಕೃಷಿಯನ್ನು ವಿದೇಶಿಗರು ಮುಕ್ತಕಂಠದಿಂದ ಶ್ಲಾಘಿಸಿದ್ದಾರೆ. ಇದೇ ಪದ್ಧತಿಯನ್ನು ಆಧರಿಸಿ ಆಫ್ರಿಕಾ, ಇಂಗ್ಲೆಂಡ್, ಆಸ್ಟ್ರೇಲಿಯಾ, ನ್ಯೂಜಿಲ್ಯಾಂಡ್ ಮುಂತಾದ ರಾಷ್ಟ್ರಗಳು ಹೆಚ್ಚಿನ ಲಾಭ ಪಡೆಯುತ್ತಿವೆ.

**ಜಲಕೃಷಿಯ ಅನುಕೂಲಗಳು**

ಜಲಕೃಷಿಯಿಂದ ಅನೇಕ ರೀತಿಯಲ್ಲಿ ಅನುಕೂಲಗಳಿರುವುದನ್ನು ಕಾಣಬಹುದು. ಅತ್ಯಂತ ಪ್ರಮುಖವಾಗಿ, ಈ ಕೃಷಿಯಲ್ಲಿ ಮಣ್ಣಿನ ಅವಶ್ಯಕತೆಯೇ ಇರುವುದಿಲ್ಲ. ಮಣ್ಣೇ ಬೇಕಾಗಿಲ್ಲ ಎಂದ ಮೇಲೆ ಮಣ್ಣಿನಲ್ಲಿರುವ ಹಾನಿಕಾರಕ ಕ್ರಿಮಿಕೀಟಗಳ ಬಾಧೆ ಈ ಸಸ್ಯಗಳಿಗೆ ತಗುಲುವುದಿಲ್ಲ. ಒಕ್ಕಲುತನ ಮಾಡಲು ಸಾಧ್ಯವೇ ಇಲ್ಲದಂತಹ ಸ್ಥಳಗಳಲ್ಲಿ ಈ ವಿಧಾನ ವರದಾನವಾಗಿದೆ. ನಗರಗಳಲ್ಲಿ ಮನೆ, ಹೋಟೆಲ್, ಕಾರ್ಖಾನೆ ಸೇರಿದಂತೆ ನಾನಾ ಕಟ್ಟಡಗಳ ಮೇಲೆ ಹಾಗೂ ಅನುಕೂಲ ಪ್ರದೇಶಗಳಲ್ಲಿ ಸುಲಭವಾಗಿ ಮತ್ತು ವಾಸನೆ-ಗಲೀಜು ಇಲ್ಲದೇ ಈ ಕೃಷಿಯನ್ನು ಮಾಡಬಹುದು. ಗುಡ್ಡಗಾಡು ಪ್ರದೇಶದಲ್ಲಿ ಕೂಡ ಕಲ್ಲನ್ನು ಬಳಸಿಕೊಂಡು ಜಲಕೃಷಿಯಿಂದ ಸಸ್ಯ ಬೆಳೆಸಬಹುದು. ವೇಕ್ ಐಸ್‌ಲ್ಯಾಂಡ್ ಕಲ್ಲುಬಂಡೆ ಹಾಗೂ ಹಿಮದಿಂದ ಸಂಪೂರ್ಣವಾಗಿ ಆವೃತವಾಗಿದೆ. ಅಲ್ಲಿ ಪ್ಯಾನ್ ಅಮೆರಿಕನ್ ಏರ್‌ಲೈನ್ ತಂಗುದಾಣವಿದೆ. ೧೯೩೦ರಿಂದಲೂ ಅಲ್ಲಿನ ಪ್ರಯಾಣಿಕರಿಗೆ ತರಕಾರಿ-ಹಣ್ಣುಗಳನ್ನು ಜಲಕೃಷಿಯಿಂದ ಬೆಳೆದು ಪೂರೈಸಲಾಗುತ್ತಿದೆ.

ಭೂ ಕೃಷಿಯನ್ನು ಮಾಡುವಾಗ ರೈತರಿಗೆ ಕಳೆ ಹಾಗೂ ಕಸದಿಂದಾಗುವ ತೊಂದರೆ ಅಷ್ಟಿಷ್ಟಲ್ಲ. ಆದರೆ ಜಲಕೃಷಿಯಲ್ಲಿ ಈ ಸಮಸ್ಯೆ ಹುಟ್ಟುವುದೇ ಇಲ್ಲ. ಆಳು-ಕಾಳಿನ ತೊಂದರೆಯೂ ಇಲ್ಲಿ ಬರುವುದಿಲ್ಲ. ಈ ಕೃಷಿಯಲ್ಲಿ ಹೆಚ್ಚು ಶ್ರಮಪಡಬೇಕಾದ ಅಗತ್ಯವೂ ಇಲ್ಲ. ಸಾಮಾನ್ಯ ಕೃಷಿ ಪದ್ಧತಿಯಲ್ಲಿ ನೀರು ಹಾಗೂ ಪೋಷಕಾಂಶಗಳು ಹೆಚ್ಚು ಅಪವ್ಯಯವಾಗುವುದನ್ನು ಕಾಣುತ್ತೇವೆ. ಜಲಕೃಷಿಯಲ್ಲಿ ಈ ರೀತಿ ಅಪವ್ಯಯವಾಗದೆ ಅವೆಲ್ಲವೂ ಸಂಪೂರ್ಣ ಬಳಕೆಯಾಗುತ್ತವೆ. ಮಣ್ಣಿನಲ್ಲಿ ಬೆಳೆಯುವ ಬೆಳೆಗಿಂತ ಕೆಲವೆಡೆ ೨೦ಪಟ್ಟು ನೀರನ್ನು ಕಡಿಮೆ ಬಳಸಿದರೆ, ಇನ್ನು ಕೆಲವೆಡೆ ಶೇಕಡ ೯೦ರಷ್ಟು ಉಳಿಸಿದ ಉದಾಹರಣೆಗಳಿವೆ.

ಜಲಕೃಷಿಯಿಂದ ಕಡಿಮೆ ಜಾಗದಲ್ಲಿ ಹೆಚ್ಚು ಸಸ್ಯಗಳನ್ನು ಬೆಳೆಸಬಹುದಾಗಿದೆ. ಕೆಲ ಅನುಭಗಳ ಪ್ರಕಾರ ಒಂದು ಎಕರೆ ಜಾಗದಲ್ಲಿ ರೈತರು ೩೫೦೦ ಟೊಮಾಟೋ ಸಸಿಗಳನ್ನು ಬೆಳೆಯುತ್ತಾರೆ. ಆದರೆ ಜಲಕೃಷಿ ವಿಧಾನ ಅಳವಡಿಸಿದಲ್ಲಿ ಒಂದು ಎಕರೆಗೆ ಹತ್ತು ಸಾವಿರಕ್ಕೂ ಹೆಚ್ಚು ಸಸಿಗಳನ್ನು ಸಮೃದ್ಧವಾಗಿ ಬೆಳೆಸಬಹುದು. ಅಲ್ಲದೆ ಕಡಿಮೆ ಕಾಲದಲ್ಲಿ ಹೆಚ್ಚು ಇಳುವರಿ ಪಡೆಯಬಹುದು. ಇತರೆ ವಿಧಾನದ ಕೃಷಿ ಮಾಡಿದಾಗ ವರ್ಷಕ್ಕೆ ಒಂದು ಎಕರೆಯಲ್ಲಿ ೧೫೦ ಟನ್ ಟೊಮಾಟೋ ಬೆಳೆಯಬಹುದು. ಜಲಕೃಷಿಯಿಂದ ೧೮ ಪಟ್ಟು ಹೆಚ್ಚು ಪ್ರಮಾಣದ ಟೊಮಾಟೋ , ಬೆಳೆಯಬಹುದೆಂದು ಅನೇಕರು ಸಾಧಿಸಿ





ತೋರಿಸಿದ್ದಾರೆ. ವೀಲ್‌ಕಾಕ್ಸ್‌ನಲ್ಲಿನ ಯೂರೋ ಫ್ರೆಶ್ ಫಾರಂ ೩೦೦ ಎಕರೆ ಪ್ರದೇಶದಷ್ಟಿದೆ. ಅದರಲ್ಲಿ ೨೦೦೫ನೇ ಸಾಲಿಗೆ ೧೨೫ ಮಿಲಿಯನ್ ಪೌಂಡ್ ಟೊಮಾಟೋ ಬೆಳೆದು ಮಾರಾಟ ಮಾಡಲಾಗಿದೆ.

ಜಲಕೃಷಿಯಲ್ಲಿ ಬೆಳೆದ ಸಸ್ಯಗಳ ಬೇರುಗಳು ತಮಗೆ ಬೇಕಾದಷ್ಟು ಆಮ್ಲಜನಕ ಹಾಗೂ ನೀರನ್ನು ಬಳಸಿಕೊಂಡು ಉಳಿದಿದ್ದನ್ನು ಹಾಗೇ ಬಿಡುತ್ತವೆ. ಹಾಗಾಗಿ ಅಲ್ಲಿ ಉಳಿದದ್ದನ್ನು ಮತ್ತೆ ಪುನರಾವರ್ತಿತವಾಗಿ ಬಳಸಬಹುದು. ಈ ವಿಧಾನದಲ್ಲಿ ಕ್ರಿಮಿನಾಶಕ ಬಳಸುವ ಪ್ರಮೇಯವೇ ಉದ್ಭವಿಸುವುದಿಲ್ಲ. ಹಾಗಾಗಿ ವಿಷಯುಕ್ತ ಆಹಾರದಿಂದ ಇಂದು ನಾವು ಮುಕ್ತಿ ಪಡೆಯಬಹುದು. ಈ ವಿಧಾನದಿಂದ ಬೆಳೆದ ತರಕಾರಿ, ಧಾನ್ಯ, ಹಣ್ಣು, ಹೂಗಳು ಬಹುದಿನಗಳವರೆಗೆ ಹಾಳಾಗದೆ ಉಳಿಯುವ ಸಾಮರ್ಥ್ಯ ಪಡೆದಿವೆ. ಈ ಅಂಶ ಭಾರತದಂತಹ ದೇಶಕ್ಕೆ ಹೆಚ್ಚು ನೆರವಾಗುತ್ತದೆ. ಏಕೆಂದರೆ ನಮ್ಮಲ್ಲಿ ಆಧುನಿಕ ತಂತ್ರಜ್ಞಾನದ ಶೈತ್ಯಾಗಾರಗಳು ಇಂದಿಗೂ ದುರ್ಲಭ. ಇಂತಹ ಪರಿಸ್ಥಿತಿಯಲ್ಲಿ ಜಲಕೃಷಿ ಒಂದು ಕೊಡುಗೆ ಎನ್ನಬಹುದು.

ಪ್ರಸ್ತುತ ದಿನಗಳಲ್ಲಿ ಜಾಗತೀಕರಣದ ಹೊಡೆತಕ್ಕೆ ಸಿಕ್ಕಿ ತತ್ತರಿಸುತ್ತಿರುವ ರೈತರು ಹೊಸ ವಿಧಾನಗಳಿಗಾಗಿ ಆಸೆಗಣ್ಣಿನಿಂದ ಎದುರು ನೋಡುತ್ತಿದ್ದಾರೆ. ಇದರ ಜೊತೆ ಇಂದು ಜನಸಂಖ್ಯೆ ತೀವ್ರಗತಿಯಲ್ಲಿ ಏರುತ್ತಿದೆ. ಕೈಗಾರಿಕೆಗಳು ಬೆಳೆಯುತ್ತಲಿವೆ. ಸಾಗರದ ಮಟ್ಟ ಹೆಚ್ಚುತ್ತಲಿದೆ. ಆದರೆ ಭೂಮಿ, ಅದರಲ್ಲೂ ಕೃಷಿ ಭೂಮಿ ಕಡಿಮೆಯಾಗುತ್ತಿದೆ. ಇರುವ ಸ್ವಲ್ಪ ಭೂಮಿಯ ಸತ್ವ ತೀರಾ ಕೆಳಮಟ್ಟಕ್ಕೆ ಜಾರುತ್ತಿದೆ. ಈ ರೀತಿಯ ಅನೇಕ ಕಾರಣಗಳಿಂದ ಹಸಿರುಮನೆ ಪರಿಣಾಮ ಕಾಡುತ್ತಲಿದೆ. ಅನೇಕ ಜೀವರಾಶಿಗಳು ಅಳಿವಿನಂಚಿನಲ್ಲಿವೆ. ಇವಕ್ಕೆಲ್ಲಾ ರಾಮಬಾಣದಂತೆ ಜಲಕೃಷಿ ಪರಿಹಾರವಾಗಿ ಬಂದಿದೆ.

ನಮ್ಮ ದೇಶದಲ್ಲಿ ಜಲಕೃಷಿ ಹೆಚ್ಚಿನ ಪ್ರಚಾರವನ್ನು ಪಡೆಯಬೇಕಿದೆ. ಸಾಮಾನ್ಯ ರೈತನೂ ಈ ಪದ್ಧತಿ ಅನುಸರಿಸಿ ಲಾಭ ಪಡೆಯುವಂತಾಗಬೇಕು. ಆ ನಿಟ್ಟಿನಲ್ಲಿ ವಿಜ್ಞಾನಿಗಳು, ಕೃಷಿ ತಜ್ಞರು, ಪ್ರಗತಿಪರ ರೈತರು ರಭಸದಲ್ಲಿ ಮುನ್ನುಗ್ಗಬೇಕು. ಸಂಕಷ್ಟದಲ್ಲಿರುವ ಹಾಗೂ ಆತ್ಮಹತ್ಯೆಯ ಹಾದಿ ತುಳಿದಿರುವ ಅನ್ನದಾತರಿಗೆ ಇದು ಆಶಾಕಿರಣವಾಗಬೇಕು. ಆ ನಿಟ್ಟಿನಲ್ಲಿ ನಮ್ಮ ಚಿಂತನೆಗಳು ನಡೆಯಲಿ.

ಜಲಕೃಷಿ ಕುರಿತು ಹೆಚ್ಚಿನ ಮಾಹಿತಿಯನ್ನು ಅಂತರ್ಜಾಲ, ವಿಕಿಪಿಡಿಯಾ ಮತ್ತು ರಾಜ್ಯ ವಿಜ್ಞಾನ ಪರಿಷತ್ ಪ್ರಕಟಿಸಿರುವ ಪುಸ್ತಕದಲ್ಲಿ ಪಡೆಯಬಹುದು.

ಪರಮೇಶ್ವರಯ್ಯ ಸೊಪ್ಪಿಮಠ
ಶಿಕ್ಷಕರು, ಸಿಎಂ ಫೆಲೊ, ಕೆ.ವಿ.ಓ.ಆರ್. ಕಾಲೊನಿ, ಹಗರಿಬೊಮ್ಮನಹಳ್ಳಿ, ಬಳ್ಳಾರಿ ಜಿಲ್ಲೆ- ೫೮೩ ೨೧೨.



# ಜೀವನ ಬದಲಿಸಿ ಪರಿಸರ ಉಳಿಸಿ

"ಭವಿಷ್ಯದಲ್ಲಿ ಬದುಕಲು ಜವಾಬ್ದಾರಿಯನರಿಯುವುದೇ ಬುದ್ಧಿವಂತಿಕೆಯ ಲಕ್ಷಣ" ಎಂದು ಜಾರ್ಜ್ ಬರ್ನಾರ್ಡ್ ಷಾ ಹೇಳಿದ ಮಾತು ನಾವು ಬದುಕುವ ರೀತಿಯನ್ನೇ ಕುರಿತದ್ದಾಗಿದೆ. ಭೂಮಿ ಮನುಜರ ಬಾಳಿಗೆ ಉತ್ತಮ ಉಷ್ಣತಾಮಾನ ಹೊಂದಿದೆ. ನೈಸರ್ಗಿಕವಾಗಿ ಅಚ್ಚಹಸಿರಿನ ಮನೆಯಾಗಿದೆ. ಕೈಗಾರಿಕೋದ್ಯಮ ಕ್ರಾಂತಿಯಿಂದ ಜನಸಂಖ್ಯೆ ಮಿತಿಮೀರುತ್ತಿದೆ. ನಾಟಕೀಯವಾಗಿ ಬಹಳಷ್ಟು ಜನರು ಸುಧಾರಣೆಗೊಳ್ಳುತ್ತಿದ್ದಾರೆ. ಹಿಂದಿನ ಕಾಲಕ್ಕಿಂತ ಇಂದು ಜನರು ಹೆಚ್ಚು ಖರ್ಚು ಮಾಡುತ್ತಾರೆ; ಕೊಂಡುಕೊಳ್ಳುತ್ತಾರೆ, ಅಷ್ಟೇ ಉಪಯೋಗಿಸುತ್ತಾರೆ, ಪ್ರಯಾಣ ಮಾಡುತ್ತಾರೆ, ಚೆನ್ನಾಗಿ ಉಣ್ಣುತ್ತಾರೆ. ಅವಶೇಷ ಇಂಧನದಿಂದ ಚೈತನ್ಯ ೫ನೇ ೪ ಅಂಶದಷ್ಟು ಉತ್ಪಾದನೆಗೊಳ್ಳುತ್ತದೆ. ಎಣ್ಣೆ, ಕಲ್ಲಿದ್ದಲು ಮತ್ತು ಅನಿಲ ಉತ್ಪಾದನೆ ೨೦೦ ವರ್ಷಗಳವರೆಗೆ ವಿಸ್ತಾರಗೊಳ್ಳುವುದು. ೨೧ನೇ ಶತಮಾನದಲ್ಲಿ ಹಸಿರುಮನೆ ಅನಿಲಗಳು ವಾತಾವರಣದಲ್ಲಿ ಹೆಚ್ಚಾಗಿ ಭೂಮಿಯ ಅಧಿಕ ಶಾಖಕ್ಕೆ ಪೂರಕವಾಗುತ್ತಿ ಇದಕ್ಕೆ ಮೂಲಕಾರಣ ಜಾನುವಾರಗಳನ್ನು ಮಾಂಸಕ್ಕಾಗಿ ಹೆಚ್ಚಾಗಿ ಉಪಯೋ ಸುವುದು. 'ಈ ಹಸಿರುಮನೆ ಅನಿಲ' ಕಾರ್ಬನ್ ಡೈಯಾಕ್ಸೈಡಿಗಿಂತ ೨೩ ಪಟ ಹೆಚ್ಚಾಗಿದೆ. ಇದರಿಂದ ವಿಶ್ವದಲ್ಲಿ ಭಾರತ ಪರಿಸರ ಮಾಲಿನ್ಯ ಮಾಡುವ ೪ನೇ ರಾಷ್ಟ್ರವೆನಿಸಿದೆ. ಅದಕ್ಕಾಗಿ ಮಾನವರು ಪರಿಸರ ಉಳಿಸುವುದಕ್ಕಾಗಿ ತಮ್ಮ ಬದುಕಿ ಶೈಲಿಯನ್ನು ಬದಲಾಯಿಸಿಕೊಳ್ಳಬೇಕು. ಹೇಗೆಂದರೆ : (೧) ಕೊಂಡುಕೊಳ್ಳುವುದನ ಕಡಿಮೆ ಮಾಡಿ ಇದ್ದುದನ್ನು ಪುನಃ ಬಳಸಬೇಕು. (೨) ಸ್ಥಳೀಯ ಸುಗ್ಗಿಕಾಲ ಆಹಾರವನ್ನು ಬಳಸಬೇಕು. (೩) ಮಾಂಸ ತಿನ್ನುವುದನ್ನು ಕಡಿಮೆ ಮಾಡಬೇ ಇಲ್ಲವೇ ತಿನ್ನುವುದನ್ನು ಬಿಟ್ಟುಬಿಡಬೇಕು. (೪) ವಿಶೇಷ ಪಶು ತಳಿವರ್ಧನೆ ಕೋಳಿಸಾಕಣಿಕೆಯಿಂದ ಅರಣ್ಯನಾಶ, ಭೂ ಅವನತಿ ಹಾಗೂ ನೀರಿನ ಕಲುಷ ಹೆಚ್ಚಾಗುವುದು. (೫) ನಲ್ಲಿಯ ನೀರು ಕುಡಿಯಲು ಯೋಗ್ಯವಾಗಿರುವಾಗ ಬಾಟ ನೀರನ್ನು ಖರೀದಿಸಬಾರದು. (೬) ಸ್ವಂತ ದುಡಿಮೆ ಉತ್ಪನ್ನವ ಕೊಂಡುಕೊಳ್ಳಬೇಕು. (೭) ಮಿತವಾಗಿ ವಿದ್ಯುತ್ತನ್ನು ಬಳಸಬೇಕು. (೮ ವಾರಕ್ಕೊಂದೇ ಸಲ ಅಂಗಡಿ ಮಾಡು. (೯) ಸಮೀಪದ ಸ್ಥಳಗಳಿ ನಡೆದುಹೋಗಬೇಕು. ಅಥವಾ ಸೈಕಲ್ ಬಳಸಬೇಕು. ಆದಷ್ಟು ಸಾರ್ವಜನಿಕ ರ ವಾಹನಗಳಲ್ಲಿ ಪ್ರಯಾಣ ಮಾಡಬೇಕು. (೧೦) ಪ್ಲಾಸ್ಟಿಕ್ ಚೀಲಗಳನ್ನು, ಉತ್ಪ ಗಳನ್ನು ಆದಷ್ಟು ಕಡಿಮೆಯಾಗಿ ಬಳಸಬೇಕು. (೧೧) ಎಲೆಕ್ಟ್ರಾನಿಕ್ ಉಪಕರಣಗಳನ ವ್ಯರ್ಥಗೊಳಿಸಬೇಕು.



ಹೀಗೆ ಮಿತವಾಗಿ ಬದುಕಿ ಬಹಳ ಅನುಕೂಲಗಳನ್ನು ಪಡೆಯುವುದು ಇಂದಿನ ತುರ್ತು ಅಗತ್ಯವಾಗಿದೆ.


**ಪ್ರೊ|| ಸಿ. ಎಂ. ವೀರಭದ್ರಯ್ಯ**
ವಕೀಲರು, ಎಸ್.ಎಂ.ವಿ.ನಗರ, ಕಪ್ಪಗಲ್ ರಸ್ತೆ, ೯ನೇ ಕ್ರಾಸ್
ಬಳ್ಳಾರಿ - ೫೮೩ ೧೦೩


## ಕೋರ್ಟಿನಲ್ಲಿ ಪಾರಿವಾಳಗಳು

'ಕೋಮಾ'ದಲ್ಲಿ ಮಲಗಿವೆ ದಾವೆಗಳು
ಕೋರ್ಟಿನ ಕಪಾಟುಗಳ
ತುಂಬ. ಸತ್ತ ಸಾವಲ್ಲ ಬದುಕಿದ
ಬಾಳಲ್ಲ, ತರಾತುರಿಯಿಂದ ತಿರುಗಾಡುವ
ಕಡತಗಳ ಹಿಡಿದ ಕರಿಯ ಕೋಟವರ
ಹಿಂದೆ-ಮುಂದೆ ಪೆಚ್ಚುಮೋರೆಗೆ
ನಗೆಯ ಹಚ್ಚಿಕೊಂಡವರು
ವಕಾಲತು, ಸಾಕ್ಷಿ, ಪಾಟಿ ಸವಾಲಿನ
ನಡುವೆ ನಲುಗಿಹೋದವರು.
ಒಂದೇ ಕರುಳ ಬಳ್ಳಿಗಳೆಲ್ಲ
ಹೂತೋಟ್ಟು ನಗುವುದಿಲ್ಲ
ತೊಂಡು ಗೂಳಿಗಳಂತೆ
ತುಂಡು ನೆಲಕೆ ಗುಟುರು ಹಾಕುತ್ತಾರೆ.

ಒಣ ಹುಲ್ಲು ಕಡ್ಡಿಗಳ ಹೆಕ್ಕಿತಂದು
ಜೇಡರ ಜೊತೆಗೆ ಗೂಡು ಕಟ್ಟುತಿವೆ
ಪಾರಿವಾಳಗಳು ಕೋರ್ಟು ಕಟ್ಟಡದ
ಅನಾಥ ಮೂಲೆಗಳಲ್ಲಿ, ಗೆರೆ ಹಾಕಿದವರಿಲ್ಲ
ನಕ್ಷೆ ಬರೆದವರಿಲ್ಲ, ದಾವೆ ಹಾಕುವುದಿಲ್ಲ
ಧೂಳು ಬಡಿವವನ ಮೇಲೆ
ವಶೀಲಿ ಹಚ್ಚುವುದಿಲ್ಲ ವಕೀಲರಿಗೆ
ಸುಳ್ಳು ಸಾಕ್ಷಿಗಳ ಭಯವಿಲ್ಲ
ಗಡಿಯಾಚೆಯ ಶಾಂತರು
ರೆಕ್ಕೆಯಾಡಿದರೆ ಯಾನ
ಮುಡಿದಲ್ಲಿ ತಾಣ.




ಎಸ್. ಎನ್. ಪ್ರಸಾದ್
ನಂ. ೪೨೦/೫೩, ೯ನೇ ಅಡ್ಡರಸ್ತೆ, ೧ನೇ ಬ್ಲಾಕ್, ಜಯನಗರ
ಬೆಂಗಳೂರು - ೫೬೦ ೦೧೧

# ಭಾರತದ ಪ್ರಾಚೀನ ಕಲೆ ಸಾಂಜಿ

(ಈ ಚಿತ್ರಗಳಿಗೆ ಸಂಬಂಧಿಸಿದ ಲೇಖನ ೪೯ನೆಯ ಪುಟದಲ್ಲಿದೆ.)



ಚಿತ್ರ : ಎಸ್. ಶ್ರೀನಿವಾಸುಲು



ಚಿತ್ರ : ಎಸ್. ಶ್ರೀನಿವಾಸುಲು



ಚಿತ್ರ : ಪ್ರಭಾಲ್ ಪ್ರಾಮಾಣಿಕ್



ಚಿತ್ರ : ಎಸ್. ಎಫ್. ಹುಸೇನಿ



ಚಿತ್ರ : ಡಿ. ಆರ್. ಚಂದ್ರಮಾಗಡಿ



ಚಿತ್ರ : ಸಾಂಪ್ರದಾಯಿಕ ಸಾಂಜಿ ಚಿತ್ರ



ಚಿತ್ರ : ವಿ. ಎಸ್. ಎಸ್. ಶಾಸ್ತ್ರಿ

Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Editor : Dr. G. Ramakrishna

**HOSATHU** Kannada Monthly /DECEMBER 2009 Rs. 12
Regd. KRNA / BGE / 7 / 2009-2011. WPP No. 14. Posted at Bangalore PSO Mysore Road BG-26
on the 28th of every month Licenced to post without prepayment. RNI Regn. No. KARKAN/1999/614